ಅರ್ಪಣೆ :

ಗೆಳೆಯರು

ಆರ್. ಬಿ. ಮತ್ತು ಜಿ. ಬಿ.

ಇಬ್ಬರಿಗೂ –

# ಮಣ್ಣು ಮತ್ತು ಹೆಣ್ಣು

## ಒಂದು

ಹಾಗೆ ಹೀಗೆ ತೂಗಾಡುತ್ತ ಹೇಗೋ ಮನೆಯವರೆಗೆ ಬಂದ ಭೀಮಪ್ಪ ಹೊಸತಿಲಲ್ಲಿ ಅಡಿಯಿರಿಸುತ್ತಲೂ ಪಡಸಾಲೆಯಲ್ಲಿ ಬಿದ್ದು ನರಳುತ್ತಿದ್ದ ಮುದುಕಿಯನ್ನು ಕಂಡು ಹುಬ್ಬು ಗಂಟು ಹಾಕಿ ಬಾಯಲ್ಲಿಯೆ ಏನೇನೋ ಪುಟುಪುಟಿಸಿದ. ಈಚೆಗೆ ಕೆಲ ದಿನಗಳಿಂದ ಆ ಮುದುಕಿ ದೃಷ್ಟಿಗೆ ಬಿದ್ದಾಗ ಲೆಲ್ಲ ಗೊಣಗಿಕೊಳ್ಳುವುದು ಅಭ್ಯಾಸವಾದಂತಾಗಿತ್ತು ಅವನಿಗೆ. ಎಂಭತ್ತರ ಸೀಮೆಯನ್ನು ದಾಟಿಹೋದ ಮುದುಕಿ, ಒಂದು-ಒಂದೂವರೆ ವರ್ಷದಿಂದ ಹಾಸುಗೆ ಬಿಟ್ಟು ಮೇಲಕ್ಕೆದ್ದಿಲ್ಲ. ಗೋರಿಯಲ್ಲೊಂದು ಕಾಲು, ಮನೆಯ ಲ್ಲೊಂದು ಕಾಲುಹಾಕಿ ಹಾಗೇ ನರಳುತ್ತ ಬಿದ್ದಿದೆ. ಅವಳ ಸೇವೆ ಶುಶ್ರೂಷೆ ಮಾಡಿ ಬೇಸರವಾಗಿ ಹೋಗಿದೆ ಮನೆಯವರಿಗೆಲ್ಲ. "ಈಕಿ ಯಾವಾಗ ಗೊಟಕ್ ಅಂತಾಳೋ, ಈ ಕಾಟ ಯಾವಾಗ ತಪ್ಪತೈತ್ಯೋ ಶಿವನೇ" ಎಂದು ದಿನವೂ, ಹೇಳಿಕೊಳ್ಳುತ್ತ ಬಂದಿದಾನೆ ಭೀಮಪ್ಪ. ಇವರಿಗೆ ಕಾಟ ಕೊಡುವ ದನ್ನು ನಿಲ್ಲಿಸಿ 'ಗೊಟಕ್' ಎಂದು ಬಿಡಬೇಕೆಂಬ ಬಯಕೆ ಮುದುಕಿಗಿದ್ದರೂ ಸಾವು ಅವಳ ಪ್ರಾರ್ಥನೆಗೆ ಕಿವಿಗೊಡುತ್ತಲಿಲ್ಲ. ಭೀಮಪ್ಪನಿಗೆ ರೋಸಿ ಹೋಗಿದೆ. ಆ ದಿನವಂತೂ ಅವನ ತಲೆಯೇ ಅವನ ಸ್ವಾಧೀನವಲ್ಲಿ ಉಳಿದಿರ ಲಿಲ್ಲ.

ಧೋತರವನ್ನು ಸಾವರಿಸಿಕೊಳ್ಳುತ್ತ ಭೀಮಪ್ಪ ಗೋಡೆಗೊರಗಿ ಕುಳಿತು ಕೊಂಡು, ರುಮಾಲಿನಲ್ಲಿದ್ದ ಬೀಡಿಯೊಂದನ್ನು ಕೈಗೆ ತೆಗೆದುಕೊಂಡು ಬೆಂಕಿ ಪೊಟ್ಟಣಕ್ಕಾಗಿ ಅಂಗಿಯ ಕಿಸೆಗಳನ್ನು ತಡಕಾಡಿದ. ಪೊಟ್ಟಣದಲ್ಲಿನ ಕಡ್ಡಿ ಗಳೆಲ್ಲ ತೀರಿ ಹೋದುದು ತಿಳಿದುಬರುತ್ತಲೂ "ಥೂ, ಇವನಪ್ಪನ" ಎಂದು ಗೊಣಗುತ್ತ ಅದನ್ನು ಹೊರಕ್ಕೆ ಬಿಸುಟಿದ.

"ಅಂಽಯ್....ಅಂಽಯ್....ಅಂಽಯ್...." ಮುದುಕಿ ಒಂದೇಸಮನೆ ನರಳುತ್ತಿತ್ತು.

ಭೀಮಪ್ಪ ಒಳಬಾಗಿಲ ಕಡೆ ತಿರುಗಿ ಗೊಗ್ಗರ ಧ್ವನಿಯಲ್ಲಿ ಕೂಗಿದ:

"ಏಽಽಯ್."

"ಏನೋ?" ಒಲೆಯೆದುರಿಗೆ ಕುಳಿತು ರೊಟ್ಟಿ ಬೇಯಿಸುತ್ತಿದ್ದ ಅವನ ಹೆಂಡತಿ ಸಿದ್ದವ್ವ ಒಳಗಿನಿಂದಲೇ ಕೇಳಿದಳು.

"ಕೆಂಡಾ ತತಾ ಒಂದ್."

ಸಿದ್ದವ್ವ ಎದ್ದು ಬರಲಿಲ್ಲ. ಕುಳಿತಲ್ಲಿಂದಲೇ ಕೆಂಡವೊಂದನ್ನು ಬೀಸಿ ಒಗೆದಳು.

ಕೆಂಡವನ್ನು ಹತ್ತಿರ ಎಳೆದುಕೊಂಡು ಬೀಡಿಯನ್ನು ಅದರ ಮೇಲಿಟ್ಟು ಹೊತ್ತಿಸಿ, ಭೀಮಪ್ಪ ಒಂದೆರಡು ಸಲ ಹೊಗೆಯನ್ನೆಳೆದು ಕೆಮ್ಮುತ್ತ ಕೆಮ್ಮುತ್ತ ತನ್ನಷ್ಟಕ್ಕೆ ತಾನೇ ಹೇಳಿಕೊಂಡ:

"ಹೋತು. ಹೋದಂಗಾತು, ಹೋತು."

ಬೀಡಿಯನ್ನು ಎಡಗೈಯ ಕಿರುಬೆರಳ ಬಳಿ ಹಿಡಿದುಕೊಂಡು ಮುಷ್ಟಿ ಯೊಳಗಿನಿಂದ ಹೊಗೆಯನ್ನೆಳೆಯುತ್ತ ಭೀಮಪ್ಪ ಮತ್ತೊಂದು ಸಲ ತನ್ನಷ್ಟಕ್ಕೆ ತಾನೇ ಹೇಳಿಕೊಂಡ:

"ಹೋತು........ ಹೊಲಾ ಅಂತೂ ಹೋತು........ ಇನ್ನ ಹೆಂಗ ಮಾಡೂದು?"

"ಅಂಽಯ್....ಅಂಽಯ್....ಅಂಽಯ್...." ಮುದುಕಿ ನರಳುತ್ತಲೇ ಇತ್ತು.

"ಮತ್ತೇನಾತೋ?" ಸಿದ್ದವ್ವ ರೊಟ್ಟಿ ಬಡಿಯುತ್ತ ಹಾಗೆಯೆ ಕೂಗಿ ಕೇಳಿದಳು.

ಭೀಮಪ್ಪ ಬೀಡಿಯನ್ನು ಹೊರಗಡೆ ಬಿಸುಟಿದ, ಒಂದು ಸಲ ಕೆಮ್ಮಿದ, ಬಾಗಿಲಿನ ಮೂಲೆಯಲ್ಲಿ ಉಗುಳಿದ, ಅನಂತರ ಮೊಳಕಾಲುಗಳ ಸುತ್ತ ಕೈಗಳನ್ನು ಹೆಣೆದು ಅಡುಗೆಮನೆಯ ಕಡೆ ತಿರುಗಿ ಹೇಳಿದ:

"ಆಗೂದೆಲ್ಲಾ ಆಗಿ ಹೋತಲ್ಲ. ಇನ್ನೇನುಳೀತು ?"

"ಹೊಲಾ ಹೋತು ?" ಎನ್ನುತ್ತ ಸಿದ್ದವ್ವ ರೊಟ್ಟಿ ಬಡಿಯುವುದನ್ನು ನಿಲ್ಲಿಸಿ ಎದ್ದು ಬಂದಳು.

"ಹೋತು."

ಸಿದ್ದವ್ವ ದೊಪ್ಪನೆ ನೆಲಕ್ಕೆ ಕುಸಿದು ಕುಳಿತಳು.

"ಹೋತು ? ಖರೇನs ?"

ಭೀಮಪ್ಪ ಮೊಳಕಾಲುಗಳಲ್ಲಿ ತಲೆ ಸೇರಿಸಿಕೊಂಡು ಕುಳಿತ. ಮಾತನಾಡಲಿಲ್ಲ.

"ಅದೆಂಗ ಹೋತು ? ಕಾಮಣ್ಣಾ ಬಂದಿದ್ದನೋ ಇಲ್ಲೋ ?"

"ಅವ ಎಲ್ಲಿ ಹೋಗತಾನ ? ಅಲ್ಲೇ ಇದ್ದ."

"ಹೊಲಾ ಹೆಂಗ ಕಬಜಾ ತಗೋತಾರ, ನಾವಿರೂ ತನಕಾ ನೀವೇನೂ ಚಿಂತೀ ಮಾಡಬ್ಯಾಡಿರಿ ಅಂತ ಹರೀವತ್ತ ಬಡಾಯಿ ಕೊಚ್ಚಿದ್ದನಲ್ಲ........ ಒಂಗೆಂಗ ಆತು ?"

"ಕಾಮಣ್ಣಾನರೆ ಏನ ಮಾಡ್ಯಾನ ? ಕಾಯಿದೆದಂಗ ಎಲ್ಲಾ ಆಗಾಕಬೇಕಲ್ಲ ?"

"ಕಾಯದೆ ಕಾಯದೆ ಅಂತ ಹೇಳೇ ಖಟ್ಲೇಕ ಬಿದ್ದು ಇತ್ತ ಸಾಲಾನೂ ಮಾಡಿ ಕುಂತಿ, ಇತ್ತ ಹೊಲಾನೂ ಕಳಕೊಂಡು ಕುಂತಿ. ಮಾಮಲೇದಾರು ಸಾಬರು ಆ ಸಾಬರು ಈ ಸಾಬರು ಎಲ್ಲಾರದೂ ಗುರುತೈತಿ, ಹೊಲಾ ಕಬಜಾ ಹೋಗದಂಗ ಮಾಡುತೀನಿ ಅಂತ ಹೇಳಿ ಐವತ್ತು ರೂಪಾಯಿ ಒಯ್ದಿದ್ದನಲ್ಲ ಆ ಕಾಮ್ಯಾ ? ಕಡೆಗೂ ಹೊಲಾ ಹೋಗೂವಂಗ ಹೋಗೇಬಿಟ್ತು."

"ಅವನ್ಯಾಕ ಅಂತೀಯೇ ? ಅವ ಮಾಡೂವಷ್ಟು ಮಾಡಿದ. ನಾವು ಐವತ್ತು ರೂಪಾಯಿ ಖರ್ಚ ಮಾಡಿದರ, ಹೊಲದ ಮಾಲಕ ಅಪ್ಪತ್ತು ರೂಪಾಯಿ ಕೊಟ್ಟು ಕಬಜಾ ಹುಕುಂ ತಂದನಂತೆ."

"ಆ ಸೂಳೀಮಗಾ ವಕೀಲನೂ ರೂಪಾಯಿ ತಿಂದು ತಣ್ಣಗ ಕುಂತೇನ ? ಅವನೂ ಕುತಿಗೀ ಕೊಯ್ದೇನ ? "

"ಅವನs ಸಿಗಿಸಿದ ನಮ್ಮನ್ನ. ನಮ್ಮ ಹೊಲಾ ಕಳದು ಬಿಟ್ಟ, " ಎಂದು ನುಡಿಯುತ್ತ ಭೀಮಪ್ಪ ಮತ್ತೊಮ್ಮೆ ಉಗುಳಿದ—ಬಾಗಿಲಿನ ಮೂಲೆಯಲ್ಲಿ.

ಬೆಂದು ಹೋದ ರೊಟ್ಟಿಯ ವಾಸನೆ ಬಂದಿತು. ಸಿದ್ದವ್ವ ಶಪಿಸುತ್ತಾ ಎದ್ದು ಹೋದಳು.

"ಅಂsಯ್....ಅಂsಯ್....ಅಂsಯ್.... ಏನಾತೋ ಭೀಮಣ್ಣಾ? " ಮುದುಕಿ ಕೇಳಿದಳು.

ಭೀಮಪ್ಪ ತನ್ನ ಕ್ರೂರ ದೃಷ್ಟಿಯನ್ನು ಮುದುಕಿಯ ಮುಖದ ಮೇಲೆ ಹರಿಬಿಟ್ಟ. ಉತ್ತರವೀಯಲಿಲ್ಲ.

ಒಣಗಿದ ಕಟ್ಟಿಗೆಯಂತಿದ್ದ ತನ್ನ ಬಲಗೈಯನ್ನೆತ್ತಿ ಮುದುಕಿ ತನ್ನ ಮೂಗಿನ ಹೊರಳೆಗಳ ಮೇಲೆ ಕುಳಿತಿದ್ದ ನೊಣಗಳನ್ನೋಡಿಸುತ್ತ ಮತ್ತೆ ಕೇಳಿದಳು:

"ಹೊಲಾ ಹೋತೇನೋ ಭೀಮಣ್ಣಾ ? "

ಇರಿಯುವ ಹೋರಿಯಂತೆ ಭೀಮಪ್ಪ ಹೂಂಕರಿಸಿದ.

"ಅಂsಯ್....ಅಂsಯ್....ಅಂsಯ್.... " ಮುದುಕಿ ತನ್ನ ನರಳುವಿಕೆಯನ್ನು ಮುಂದುವರಿಸಿದಳು.

"ಭೀಮಾ.... "

ಭೀಮಪ್ಪನು ತಲೆಯೆತ್ತಿ ನೋಡಿದ. ಕೂಗಿದವನು ಕಾಮಣ್ಣ.

ಕಾಮಣ್ಣ ಬಂದು, ಗೋಡೆಯ ಮೇಲಿನ ಗೂಟಕ್ಕೆ ನೇತಾಡುತ್ತಿದ್ದ ಕಂಬಳಿಯನ್ನೆಳೆದು ನೆಲದ ಮೇಲೆ ಹಾಸಿ ಕುಳಿತುಕೊಂಡ.

"ಹಿಂಗ್ಯಾಕ ಕುಂತ್ಯೋ ಭೀಮಾ, ದೆವ್ವ ಹಿಡದವರಂಗ ? "

"ದೆವ್ವ ಹಿಡಿದಿದ್ದರs ಚಲೋ ಆಗತಿತ್ತು. "

ತನ್ನ ದಪ್ಪಗಿನ ಮೀಸೆಯ ಮೇಲೆ ಬೆರಳುಗಳನ್ನಾಡಿಸುತ್ತ ಕಾಮಣ್ಣ ನಕ್ಕ.

"ಹೊಲ ಕಬಜಾ ಹೋದಷ್ಟಕ್ಕ ಏನಾತೋ ಮಳ್ಳs ? ಹಿಂಗ್ಯಾಕ

ಮಾಡುತೀ ಹುಚ್ಚನಂಗ? ಇನ್ನs ಅಪೀಲು ಐತಲ್ಲ? ಅದರಾಗ ನಿನ್ನಂಗs ಆಗತೈತಿ ಬಿಡು. ನಿನ್ನ ಹೊಲಾ ನಿನಗ ಸಿಗತೈತಿ."

"ಏನ ಅಪೀಲೋ ಏನ ಮಾತೋ. ನನಗಂತೂ ಯಾವದೂ ಹೊಳೀದಾಗೈತಿ."

"ನೀ ಹಿಂಗ ಕೈಕಾಲ ಬಿಟ್ಟ ಕುಂತಿ ಅಂದರ ಮುಗಿದs ಹೋತು. ಕಡೀತನಕ ಬಡಿದಾಡೂ ತಯಾರಿ ಬೇಕು ಭೀಮಾ. ಕೋರ್ಟ ಕಚೇರೀ ಕೆಲಸ ಅಂದರ ಹಿಂಗs ಅಪಾ."

"ಆ ವಕೀಲ ಒಬ್ಬ ಹಂಗ ಮಾಡಿದ...."

ಕಾಮಣ್ಣಾ ಧ್ವನಿಯನ್ನೇರಿಸಿ ನುಡಿದ:

"ವಕೀಲ ಏನ ಮಾಡ್ಯಾನೋ? ಕಬಜಾ ಕೊಡಬಾರದಂತ ಕಲೆಕ್ಟರ ಸಾಬರಿಗೆ ಸ್ಟೇ ಅರ್ಜಿ ಕೊಡಾಕ ನೀನs ತಡಾ ಮಾಡಿದಿ. ಹೊತ್ತಿಗೆ ಸರಿಯಾಗಿ ಹೋಗಲಿಲ್ಲ. ಸ್ಟೇ ಸಿಗಲಿಲ್ಲ. ವಕೀಲ ಏನ ಮಾಡ್ಯಾನು?"

ಸಿದ್ದವ್ವ ಒಳಗಿನಿಂದಲೇ ಮಾತನಾಡಿದಳು:

"ರುಪಾಯಿ ತಿನ್ನುವ ಹಂಗ ತಿಂದು ಮತ್ತ ಕೈಕೊಟ್ಟನಲ್ಲ ಆ ವಕೀಲ ಕಾಮಣ್ಣಾ?"

"ಇದರಾಗೆಲ್ಲಾ ನಿನಗೇನ ತಿಳೀತೈತಿ ಸುಮ್ಮನಿರೇ ಸಿದ್ದೀ," ಎಂದು ಗದರಿಸಿ ಕಾಮಣ್ಣಾ ಹೇಳಿದ:

"ಹಂಗೆಲ್ಲಾ ಕೆಲಸಾ ಕೆಡಿಸೂ ವಕೀಲ ಅಲ್ಲ ಅವ. ನಾ ಮೊದಲೀ ಹೇಳೀನಲ್ಲಾ, ಅಂಥಾ ಚಲೋ ವಕೀಲ ಶಾಣ್ಯಾ ವಕೀಲ ಜಿಲ್ಲಾದಾಗs ಇನ್ನೊಬ್ಬಾವ ಇಲ್ಲಾ ಅಂತ. ಅದರಾಗ ಅವಗೂ ನನಗೂ ಬಾಳ ದೋಸ್ತಿ.... ಬಾಳ ದಿನದಿಂದ ದೋಸ್ತಿ. ನಾನs ಒಯ್ದು ಕೊಟ್ಟ ಕೇಸು ಕೆಡಿಸ್ಯಾನೇನವ ಎಲ್ಲೆರೆ? ಕಲೆಕ್ಟರಗ ಅರ್ಜಿ ಕೊಡುದೈತಿ, ಬಾ ಅಂತ ಹೇಳಿದರ ಭೀಮ ಅವತ್ತ ಹೋಗಲಿಲ್ಲ. ವಕೀಲ ಏನ ಮಾಡ್ಯಾನು?"

"ನಾ ಹೋದಾಗ ಅವ ಮನ್ಯಾಗಿರದಿದ್ದರ ನಾನೇನ ಮಾಡಲಿ?" ಭೀಮಪ್ಪ ಹೇಳಿದ.

"ಮನ್ಯಾಗಿರದಿದ್ದರ ಕೋರ್ಟಿಗ್ಹೋಗಿ ಭೇಟ ಆಗಬೇಕಾಗಿತ್ತು.

ವಕೀಲರಂದರ ಇರೂದು ಕೋರ್ಟಿನಾಗs ಅನ್ನೂದು ಗೊತ್ತಿರಲಿಲ್ಲೇನ ನಿನಗ ? ”

“ ನಾಯೇನ ಮಾಡಲಿ ? ವಕೀಲಬಾಯಿ ಹೇಳಲಿಲ್ಲಲ್ಲ ? ”

“ ನೀ ಕೇಳಿದ್ದರ ಹೇಳತಿದ್ದಳು. ನೀ ಕೇಳಾಕೆರೆ ಬೇಕೋ ಬ್ಯಾಡೋ ?” ಎಂದು ನುಡಿದು ಕಾಮಣ್ಣಾ ಅಡುಗೆಮನೆಯ ಕಡೆ ತಿರುಗಿ ಹೇಳಿದ: “ ಇಲ್ಲಿ ನೋಡು ಸಿದ್ದೀ, ನಿನ್ನ ಗಂಡನ ಬುದ್ಧಿಗೇಡಿತನದಿಂದಲೇ ಹಿಂಗಾತು. ಸ್ಟೇಕ್ಕ ಅರ್ಜಿ ಹಾಕೂ ದಿವಸ ಇವ ಶಹರಕ್ಕ ಹೋದಾಂವ ವಕೀಲನ ಮನಿಗೆ ಹೋಗಿ ಅವ ಮನ್ಯಾಗಿರಲಿಲ್ಲ ಅಂತ ಹಂಗs ಹೊರಳಿ ಬಂದಾನ. ವಕೀಲರೆಲ್ಲಿದಾರಂತ ಕೇಳಬೇಕೋ ಬ್ಯಾಡೋ ಅವನ ಹೇಣತಿಗೆ? ಇವ ಈಗ ಬರತಾನ, ಇನ್ನೊಂದ ಗಳಿಗಿಗೆ ಬರತಾನಂತ ಹಾದೀ ಕಾದು ಕಾದು ಸಾಕಾತಂತ ವಕೀಲಗ. ನಾ ಮೊನ್ನೆ ಶಹರಕ್ಕ ಹೋದಾಗ ಹೇಳಿದ ಎಲ್ಲಾ. ಇವಾ ಇಂಥಾ ಬುದ್ಧಿಗೇಡಿತನಾ ಮಾಡಿದರ ವಕೀಲಆದ್ರೂ ಏನ್ಮಾಡ್ಯಾನ ಹೇಳು ?”

“ ನನಗ ಅನಿಸಿತ್ತು ಮೊದಲs—ಹೊಲಾ ಹೋಗತೈತಿ ಅಂತ. ಬಡಿ ದಾಟ ಬ್ಯಾಡಾ, ಧಣ್ಯಾ ಹೇಳಿದಂಗ ಕೇಳಿದರಾತು ಅಂತ ಹೇಳೇ ಹೇಳಿದಿನಿ ? ನೀವ್ಯಾರೂ ಕೇಳಲಿಲ್ಲ. ”

“ ಈಗರೆ ಅಂಥಾದ್ದೇನಾತು ಸುಮ್ಮನಿರs ಸಿದ್ದೀ. ಆ ಹೊಲಾ ನಿಮಗ ಹೊಳ್ಳಿ ಕೊಡಿಸದಿದ್ದರ ನನ್ನ ಹೆಸರು ಕಾಮಣ್ಣಾ ಅಲ್ಲ....”

“ ಅಯ್ಯs ! ಬಿಡ ಬಿಡ. ಒಣಾ ಬಡಿವಾರ ಕೊಚ್ಚಬ್ಯಾಡ. ಕಬಜಾ ಹೋಗತೈತಿ ಹೆಂಗ ಅಂತ ಮೀಸಿ ಮ್ಯಾಗ ಕೈ ತಿರುವಿದ್ದೆಲ್ಲೋ ಜೋ-ಕುಮಾರಾ ! ”

“ ಕಾಯದೇ ಅಂದರ ಒಮ್ಮೆ ಹೋಗತೈತಿ, ಒಮ್ಮೆ ಬರತೈತಿ. ಅದರ ಡೆಲ್ಲಾ ಏನ ತಿಳೀತೈತಿ ನಿನಗ ಸಿದ್ದೀ ! ಯಾಕ, ಬಾಯಿ ಬಾಳ ಹಗರ ಮಾಡತೀ ? ” ಎಂದು ಕಾಮಣ್ಣಾ ಅವಳನ್ನು ಬೆದರಿಸಲು ಯತ್ನಿಸಿದ. “ಇನ್ನೂ ಅಪೀಲು ಐತೆಲ್ಲಾ ? ಕಲೇಕಟರ ಸಾಬರ ಮುಂದ ಕಟ್ಲೆ ನಡಿಯೂದೈತಿ. ಆಗ ನಿಮ್ಮಂಗ ಆಗದಿದ್ದರ ಆ ವ್ಯಾಲ ಮಾತಾಡು. ವಕೀಲಗ ಕೊಡಾಕ ನೂರು ರೂಪಾಯಿ ಬೇಕಲ್ಲ, ತಯಾರ್ಮಾಡ್ರಿ ಮೊದಲು. ನಾನೀಗ ಹೋಗ ತೀನಿ. ಹೊತ್ತಾತು.... ”

" ಯಾವಾಗ ನೋಡಿದರೂ ರುಪಾಯಿ ರುಪಾಯಿ ಅಂತೀಯಲ್ಲಾ ? ನಮ್ಮನ್ಯಾಗೇನ ರುಪಾಯಿ ಗಿಡಾ ಬೆಳದೈತೇನ? ಎಲ್ಲಿಂದಾ ತರೂಣು ರುಪಾಯಿ ? "

" ಹೊಲಾ ಉಳಿಸಿಕೋಬೇಕಂತ ಮನಸಿನಾಗಿದ್ದರ ಎಲ್ಲಿಂದಾರೆ ತರ ಬೇಕು. ಇಲ್ಲಾಂದರ ಬಿಡಬೇಕು. ಯಾರಪ್ಪನ ಮನೀ ಕೆಲಸ ? " ಎನ್ನುತ್ತ ಕಾಮಣ್ಣ ಎದ್ದು ಹೊರಟುಹೋದ.

" ಅಂsಯ್....ಅಂsಯ್....ಅಂsssಯ್.... " ಮುದುಕಿ ನರಳಿತು.

ಹೊರಗಡೆ ನಾಯಿಯೊಂದು ಬಗುಳತೊಡಗಿತು.

ಸಿದ್ದವ್ವ ಅಡುಗೆಮನೆ ಬಿಟ್ಟು ಬಂದು, ಒಳಬಾಗಿಲಿಗೊರಗಿ ನಿಂತು ನುಡಿ ದಳು:

" ವಕೀಲಗ ರುಪಾಯಿ ಕೊಡಬೇಕಂತಲ್ಲ? "

" ಹುಂ. "

" ಎಲ್ಲಿಂದ ತರಾಂವ? "

" ಹುಂ. ಹುಂ. "

" ಏನ ಬರೀ ಹು ಹು ಅಂತೀ ಥಂಡಿ ಬಂದವರಂಗ? "

" ಅದು ಬರೂದೊಂದು ಉಳಿದೈತಿ. "

" ಅದನ್ಯಾಕ ಬಯಸ್ತೀ ? ಹೊಲಾ ಅಂತೂ ಕಳಕೊಂಡ ಕುಂತಿ. ಅದನ್ನ ಬಿಟ್ಟರ ಏನೈತಿ ನಮಗ ಆಧಾರ? ಗಡಿಗೀ ಮಡಕೀ ಕಟಕೊಂಡು ಹೊಂಡಬೇಕಾದೀತು ಊರು ಬಿಟ್ಟು. "

" ಹುಂ. ಹೋಗಬೇಕು.... "

" ಏನಂದಿ ? "

" ಅಂಥಾ ಪರಸಂಗ ಬಂದರ ಹೋಗಬೇಕು. ಇಲ್ಲೇ ಕುಂತೇನು ಹೊಟ್ಟೆಗೆ ಕ್ಯಾರ ಹಾಕ್ಕೊಳ್ಳೂದೇನ? ರುಪಾಯಿ....ರುಪಾಯಿ....ರುಪಾಯಿ ....ಎಲ್ಲಿಂದ ತರೂದು ರುಪಾಯಿ ? "

" ಅಂsಯ್....ಅಂsಯ್.... " ಮುದುಕಿಯ ನರಳುವಿಕೆ ಸಾಗಿತ್ತು.

" ಇದಾದರೂ ಲಗೂ ಸತ್ತಿದ್ದರ ಕೈಯಾಗ ರುಪಾಯಿ ಬರತಿದ್ದವು. ಏನಾರ ಸಿಕ್ಕೀತು ಅಂತ ಇದನ್ನ ಕರಕೊಂಡ ಬಂದು ಜೋಪಾನ ಮಾಡಿ

ದ್ದಾತು. ಕೊಟ್ಟೆತಿದು ಕೈ. ಕುತಿಗೀ ಮ್ಯಾಲ ಕಲ್ಲು ಬಿದ್ದಂಗ ಬಿದ್ದೈತಿ...." ಎಂದು ಮನಸ್ಸಿನಲ್ಲೇ ಗೊಣಗಿಕೊಳ್ಳುತ್ತ ಭೀಮಪ್ಪ ಮೇಲಕ್ಕೆದ್ದು ಹೊರಕ್ಕೆ ಹೊರಟ.

"ರಾತ್ರಿ ಆತು. ಮತ್ತ ಎತ್ತ ಹೊಂಟಿ?"

"ಬರ್ತೀನಿ ಈಗ."

"ಕುಡದು ಎಲ್ಲೆರೆ ಬಿದ್ದೀ ಮತ್ತ. ಹೋಗಿ ಜೇಲದಾಗ ಕುಂತೀ."

ಅವಳ ಮಾತುಗಳ ಕಡೆ ಲಕ್ಷವೀಯದೆ ಭೀಮಪ್ಪ ಬಿರಬಿರನೆ ಹೊರಟ.

ಒಂದೆರಡು ಸಂದಿಗಳಲ್ಲಿ ಹಾಯ್ದು ಆತ ಹಳ್ಳಿಯ ಹೊರಭಾಗಕ್ಕೆ ಬರುವಷ್ಟರಲ್ಲಿ ಕತ್ತಲೆ ದಟ್ಟವಾಗಿ ಪಸರಿಸಿತ್ತು. ಭರಮಪ್ಪನ ಗುಡಿಯ ಎದುರಿಗೆ ಹಾಯ್ದು ಭೀಮಪ್ಪ ಹೊಳೆಯ ತೀರದಲ್ಲಿನ ಬಿದಿರು ಮೆಳೆಯ ಬಳಿ ಬಂದ. ಯಾರಾದರು ತನ್ನನ್ನು ಹಿಂಬಾಲಿಸುತ್ತಿರುವರೇನೋ ಎಂಬ ಶಂಕೆಯಿಂದ ಒಮ್ಮೆ ಹಿಂದಿರುಗಿ ನೋಡಿದ. ಯಾರೂ ಇಲ್ಲವೆಂದು ಮನವರಿಕೆಯಾಗಲು ಬಿದಿರು ಮೆಳೆಯೊಳಗೆ ಹೊಕ್ಕು ಕಳ್ಳಧ್ವನಿಯಲ್ಲಿ ಕೂಗಿದ:

"ಯಸನೋವಪ್ಪಾ...."

"ಯೆಸ್," ಎಂದ ಯಸನೋವಪ್ಪ.

"ಏನರೆ ಉಳದೈತೇನೋ?"

"ನೋ," ಎಂದ ಯಸನೋವಪ್ಪ.

ಭೀಮಪ್ಪ ಅವನ ಹತ್ತಿರ ಕುಳಿತುಕೊಂಡು ದೀನವಾಣಿಯಲ್ಲಿ ಹೇಳಿದ: "ಸ್ವಲ್ಪಾದರೂ ಕೊಡೋ ಯಸನೋವಪ್ಪ. ಬಾಳ ತ್ರಾಸಾಗೈತಿ ಜೀವಕ್ಕ."

"ನೋ," ಎಂದ ಯಸನೋವಪ್ಪ.

"ಕೊಡೋ ಮಾರಾಯಾ."

"ನೋ," ಎಂದ ಯಸನೋವಪ್ಪ.

ಯಸನೋವಪ್ಪ ಎನ್ನುವುದು ಅವನ ಮೂಲ ಹೆಸರೇನೂ ಆಗಿರಲಿಲ್ಲ. ಅವನ ತಂದೆ ತಾಯಿಗಳು ಅವನಿಗಿಟ್ಟ ಹೆಸರು ಕರಿಯ. ಎರಡನೆಯ ಮಹಾಯುದ್ಧದಲ್ಲಿ ಸಿಪಾಯಿಯಾಗಿ ಸೇರಿದ ಆತ ಜೀವದಿಂದ ಉಳಿದು, ಹಳ್ಳಿಗೆ ಹಿಂದಿರುಗಿ ಬರುವ ವರೆಗೂ ಊರವರು ಅವನನ್ನು ಕರಿಯನೆಂದೇ ಕರೆಯುತ್ತಿದ್ದರು. ಸೈನ್ಯದಲ್ಲಿದ್ದಾಗ ಕಲಿತ ಅಲ್ಪಸ್ವಲ್ಪ ಇಂಗ್ಲೀಷಿನಲ್ಲಿ ಕರಿಯನಿಗೆ

ಚೆನ್ನಾಗಿ ಅಭ್ಯಾಸವಾಗಿದ್ದುದೆಂದರೆ ಎಸ್, ನೋ ಎಂಬೆರಡು ಶಬ್ದಗಳು ಮಾತ್ರ. ಊರಿಗೆ ಬಂದ ಬಳಿಕ ಆತ ಖಾಕಿ ಅಂಗಿ ಪ್ಯಾಂಟು ಹಾಕಿಕೊಂಡು ಮೀಸೆಯ ಮೇಲೆ ಕೈ ಎಳೆಯುತ್ತ ತನಗೂ ಇಂಗ್ಲೀಷು ತಿಳಿದಿದೆಯೆಂದು ಹಳ್ಳಿಗರೆದುರಿಗೆ ತೋರಿಸಲು 'ಎಸ್, ನೋ' ಎನ್ನುತ್ತ ತಿರುಗತೊಡಗಿದ. ಆ ಹಳ್ಳಿಯಲ್ಲಿ ಇಂಗ್ಲೀಷು ಕಲಿತವರಾರೂ ಇರಲಿಲ್ಲ. ಮತ್ತೆ ಮತ್ತೆ ಕರಿಯ ಅವೆರಡೇ ಶಬ್ದಗಳನ್ನು ಉರುಹೊಡೆಯುವುದನ್ನು ಕೇಳಿ ಎಲ್ಲರೂ ಅವನನ್ನು ಹಾಸ್ಯ ಮಾಡತೊಡಗಿದರು. ಒಮ್ಮೆ, ಬಸವಾಣಿಯ ಚಹದಂಗಡಿಯಲ್ಲಿ ಇಸ್ಪೀಟು ಆಟ ನಡೆದಿದ್ದಾಗ ಕಾಮಣ್ಣ ಚೇಷ್ಟೆಗೆಂದು ಕರಿಯನನ್ನು "ಏ, ಯಸನೋವಪ್ಪಾ" ಎಂದು ಕೂಗಿದ್ದ. ಕೂಡಿದ ಜನರಿಗೆಲ್ಲ ಅದು ಬಲು ಮೋಜಿನ ಹೆಸರೆಂದು ತೋರಿತು. ಅಂದಿನಿಂದ ಅವರೆಲ್ಲರೂ ಅವನನ್ನು ಯಸನೋವಪ್ಪ ಎಂದೇ ಕೂಗತೊಡಗಿದರು. ದಿನಗಳು ಕಳೆದಂತೆಲ್ಲ ಆ ಹೆಸರೇ ರೂಢಿಗೆ ಬಂದು ಅವನ ಮೂಲ ಹೆಸರು ಮಸುಳಿಸಿ ಹೋಯಿತು. ಆ ಹಳ್ಳಿಯವರೂ ಸುತ್ತಮುತ್ತಲಿನ ಹಳ್ಳಿಯವರೂ ಎಲ್ಲರೂ ಅವನನ್ನು ಯಸನೋವಪ್ಪ ಎಂದೇ ಕರೆಯತೊಡಗಿದರು.

ಯಸನೋವಪ್ಪ ಯುದ್ಧಕ್ಕೆ ಹೋದ ಸಮಯದಲ್ಲಿ ಹಳ್ಳಿಯಲ್ಲಿದ್ದ ಅವನ ಹೆಂಡತಿ, ಒಬ್ಬಳೇ ಬಾಳುವೆ ಮಾಡಲಾರದೆ ಪಕ್ಕದ ಹಳ್ಳಿಯವನೊಬ್ಬನ ಜತೆಗೆ ಓಡಿಹೋಗಿದ್ದಳು. ಅವಳೊಬ್ಬಳನ್ನು ಬಿಟ್ಟರೆ ಅವನಿಗೆ ಇನ್ನಾವ ಸಂಬಂಧಿಕರೂ ಇರಲಿಲ್ಲ. ಅವನದಾದ ಹೊಲವೂ ಇರಲಿಲ್ಲ. ಸೈನ್ಯದಿಂದ ದೊರೆಯುತ್ತಿದ್ದ ಹತ್ತು ರೂಪಾಯಿಯ ವಿಶ್ರಾಂತಿವೇತನ ಅವನ ಕುಡಿತಕ್ಕೇ ಸಾಲುವಂತಿರಲಿಲ್ಲ. ಇಂಗ್ಲೀಷು ಮಾತು ಆಡುವ ತಾನು ಮೊದಲಿನಂತೆ ಅವರಿವರ ಹೊಲಗಳಲ್ಲಿ ಕೂಲಿ ಮಾಡುವುದು ತನ್ನ ಘನತೆಗೆ ಕಡಿಮೆಯದೆಂಬ ಯೋಚನೆಯಿಂದ ಆತ ಕೆಲ ದಿನ ಹಾಗೆಯೇ ನಿರುದ್ಯೋಗಿಯಾಗಿ ಅಲೆಯುತ್ತಿದ್ದ. ಅವನಂತೆಯೆ ಪೋಲಿ ಅಲೆಯುತ್ತಿದ್ದ ಕಾಮಣ್ಣನಿಗೂ ಅವನಿಗೂ ಗಾಢ ಸ್ನೇಹ ಬೆಳೆಯಿತು. ಅಂದಿನಿಂದ ಆತ ಕಾಮಣ್ಣನ ವಿವಿಧ ಕಾರ್ಯಕಲಾಪಗಳಲ್ಲಿ ಭಾಗ ವಹಿಸುತ್ತ ಬಂದಿದ್ದ. ಮದ್ಯಪಾನ ಪ್ರತಿಬಂಧದ ಕಾಯದೆ ಅಮಲಿನಲ್ಲಿ ಬಂದ ಬಳಿಕ ಕಾಮಣ್ಣ ಕೈಗೊಂಡ ಭಟ್ಟಿಸೆರೆ ತಯಾರಿಕೆಯ ಉದ್ಯೋಗದಲ್ಲಿ ಸೆರೆಯನ್ನು ಮಾರುವ ಕೆಲಸ ಯಸನೋವಪ್ಪನ

ಪಾಲಿಗೆ ಬಂತು. ಬಿದಿರ ಮೆಳೆಯೊಳಗಿನ ಸ್ಥಳವೇ ಸೆರೆಯಂಗಡಿಯಾಯಿತು. ಯಸನೋವಪ್ಪ ಅದರ ವ್ಯವಸ್ಥಾಪಕನಾದ. ಭೀಮಪ್ಪ ಅಂಥ ಕುಡುಕ ನೇನೂ ಆಗಿರಲಿಲ್ಲ. ಯಾವಾಗಲಾದರೊಮ್ಮೆ, ದುಡಿದು ದುಡಿದು ಬಹಳ ದಣಿದಾಗ, ಇಲ್ಲವೆ ಚಿಂತೆಯಿಂದ ತಲೆ ತಿರುಗತೊಡಗಿದಾಗ ಮಾತ್ರ ಏನೋ ಸ್ವಲ್ಪ ಕುಡಿಯುವುದು ಅವನ ಪದ್ಧತಿಯಾಗಿತ್ತು.

" ಕೊಡೋ ಮಾರಾಯಾ, " ಮತ್ತೆ ಬೇಡಿಕೊಂಡ ಭೀಮಪ್ಪ.

ಯಸನೋವಪ್ಪ ನಗುತ್ತಾ ಕಪ್ಪನ್ನು ಸೆರೆಯ ಮಡಕೆಯಲ್ಲಿ ಹಾಕಿ ತುಂಬಿಕೊಟ್ಟ. ಭೀಮಪ್ಪ ಒಂದು ಗುಟುಕಿಗೇ ಅದನ್ನು ಕುಡಿದು ಮುಗಿಸಿ ಮತ್ತೆ ಕಪ್ಪನ್ನು ಮುಂದೆ ಚಾಚಿ, " ಇನ್ನೊಂದು ಕಪ್ ಕೊಡೋ, " ಎಂದ.

" ನೋ, " ಎಂದ ಯಸನೋವಪ್ಪ.

" ಹಿಂಗ್ಯಾಕ ಮಾಡತಿ, ಕೊಡಾಕೋ. "

" ಒಂದ್ ಕಪ್ಪಿಗಿಂತ ಹೆಚ್ಚು ಕೊಡಬಾರದಂತ ಹೇಳ್ಯಾನ ಕಾಮಣ್ಣಾ. ಎಲ್ಲಾ ಫುಕಟದವರಿಗೆ ಕೊಟ್ಟರ ಭಟ್ಟಿಯ ಖರ್ಚು ಹೆಂಗ ಹೊಂಡಬೇಕು? "

" ನಾ ಹೇಳತೀನಿ ಕಾಮಣ್ಣಾಗ. ಕೊಡೋ. "

" ನೋ ಅಂದರ ನೋ. " ಯಸನೋವಪ್ಪ ಸಿರ್ಧಾರದ ಧ್ವನಿಯಲ್ಲಿ ನುಡಿದ.

ಮೆಳೆಯ ಆಚೆ ಯಾರೋ ನಡೆದುಬರುವ ಸದ್ದಾಯಿತು. ಬೇರೆ ಗಿರಾಕಿಗೆ ಸ್ಥಳ ಮಾಡಿಕೊಡಲೆಂದು ಭೀಮಪ್ಪ ಎದ್ದು ಹೊರಡಲೇಬೇಕಾಯಿತು.

ಪಕ್ಕದಲ್ಲಿಯೆ ಹರಿದು ಹೋಗುತ್ತಿದ್ದ ಹೊಳೆ. ಚಿಕ್ಕೆಗಳ ಮಂದ ಬೆಳಕಿನಲ್ಲಿ ಪ್ರವಾಹ ಅಸ್ಪಷ್ಟವಾಗಿ ಗೋಚರವಾಗುತ್ತಿತ್ತು. ದಂಡೆಯಮೇಲಿನ ಗಿಡಗಂಟೆಗಳಲ್ಲಿ ಇರುಳಕೀಟಗಳು ಚೀರುತ್ತಿದ್ದುವು. ಎಲ್ಲೋ ಒಂದುಕಡೆ ಕಪ್ಪೆಯೊಂದು ಒಟಗುಡುತ್ತಿತ್ತು.

ದಂಡೆಯ ಮೇಲಿನ ಮಳಲರಾಶಿಯ ಮೇಲೆ ಮೈಚೆಲ್ಲಿದ ಭೀಮಪ್ಪ. ಪಶ್ಚಿಮದಿಂದ ಶೀತಲವಾದ ಗಾಳಿ ಬೀಸಿ ಬರುತ್ತಿತ್ತು. ಹತ್ತಿರದಲ್ಲಿದ್ದ ಗಿಡಗಳ ಎಲೆಗಳು ಮರ್ಮರ ನಾದಗೈಯುತ್ತಿದ್ದುವು.

" ಹಾಂ, ಹಂಗ ಮಾಡೂದs ? "

ಭೀಮಪ್ಪ ಮನಸ್ಸಿನಲ್ಲೇ ಹೇಳಿಕೊಂಡ.

ಮನೆಯಿಂದ ಹೊರಡುವಾಗ ಮುದುಕಿಯನ್ನು ಕಂಡು ಅವನ ಮನಸ್ಸಿನಲ್ಲಿ ಸುಳಿದಿದ್ದ ಯೋಚನೆ, ಸೆರೆಯ ಪ್ರಭಾವದಿಂದ ಬೆಳೆದು ಬೃಹದಾಕಾರ ತಳೆದಿತ್ತು. " ಮುದುಕಿ ಇಷ್ಟು ಹೊತ್ತಿಗೆ ಸಾಯಬೇಕಾಗಿತ್ತು........ ಸತ್ತಿದ್ದರ ಕೈಯಾಗ ರೂಪಾಯಿ ಬರ್ತಿದ್ದವು. ಸಾಯಲಿಲ್ಲ............ಇನ್ನs ಸಾಯಲಿಲ್ಲ........ "

ಬೀಡಿಯೊಂದನ್ನು ಹೊತ್ತಿಸಿ ಹೊಗೆಯೆಳೆಯುತ್ತ ಭೀಮಪ್ಪ ಮತ್ತೆ ಯೋಚಿಸತೊಡಗಿದ: " ಇನ್ನs ಸಾಯಲಿಲ್ಲ ಹಾಳುರಂಡಿ. ಲಗೂ ಸತ್ತಾಳು, ಅವಳ ಗಂಟು ಸಿಕ್ಕೀತು ಅಂತ ಕರಕೊಂಡು ಬಂದು ಮನ್ಯಾಗಿಟ್ಟುಕೊಂಡಿವಿ. ದತ್ತಕ ಮಾಡಿಕೋಬೇಕು ಅಂತಿತ್ತದು. ಅದಕ್ಕೂ ಕಲ್ಲು ಹಾಕಿದ್ದಾತು. ದತ್ತಕ ಆಗದಿದ್ದರ ಗಂಟು ಎಲ್ಲಾ ನಮ್ಮಾಕೀದs ಆಗುತ್ತೈತಿ. ಅದನ್ನ ನುಂಗಿ ಬಿಡಾಕ ಎಷ್ಟ ಮಂದಿ ತಯಾರಾಗಿ ಕುಂತಿದ್ದರಲ್ಲ ! ಎಲ್ಲಾರನ್ನೂ ಫಜೀತಿ ಮಾಡಿ ಮುದುಕೀನ್ನ ಹೊತ್ತುಕೊಂಡು ಬಂದು ಮನ್ಯಾಗಿಟ್ಟುಕೊಂಡಿವಿ. ಅದು ಕೇಳಿದ್ದು ತಂದುಕೊಟ್ಟೆವಿ. ಹೊಟ್ಟ್ಯಾಗ ಹುಟ್ಟಿದ ಮಕ್ಕಳಿಗಿಂತಾ ಹೆಚ್ಚು ಆಸ್ಥೀವಂಗ ನೋಡಿಕೊಂಡಿವಿ. ಕಾಲು ಒರಸಿದಿವಿ, ಕೈ ಒರಸಿದಿವಿ, ಇಶ್ಶೀ ಹೊತ್ತಿವಿ, ಎಲ್ಲಾ ಮಾಡಿದಿವಿ. ನಮ್ಮ ಮನೀ ಬಿಟ್ಟು ಹೋಗೂ ಮನಸು ಅವಳಿಗೆ ಬರದಂಗ ನೋಡಿಕೊಂಡಿವಿ. ನಾಕಿಪ್ಪತ್ತು ಆಗಿಹೋತು ವಯಸ್ಸು. ಇಂದು ಸತ್ತೀತು ನಾಳೆ ಸತ್ತೀತು ಅಂತ ಹಾದೀ ನೋಡಿದ್ದಾತು. ಅಂಯ್‌ಂಯ್‌ಯ್ ಅಂತ ನರಳಿಕೊಂತ ಬಿದ್ದೈತಿ........ ಜೀವಾ ಬಿಡವೊಲ್ಲದು. ಗಂಟೂ ಬಿಚ್ಚವೊಲ್ಲದು........ಯಾವಾಗಲೂ ಉಡಿಯೊಳಗs ಕಟ್ಟಿಕೊಂಡಿರುತ್ತೈತಿ ಅದನ್ನ........ಇತ್ತ ನೋಡಿದರ ಹೊಲಾ ಕೈಬಿಟ್ಟಿತು.... ಅದನ್ನ ಕಳಕೊಂಡರ ಬ್ಯಾರೆ ಏನೂ ಇಲ್ಲ. ಏನಾರೆ ಮಾಡಿ ಮತ್ತ ಅದನ್ನ ಕೈಯಾಗ ತಗೊಳ್ಳಾಕs ಬೇಕು. ಅದಕ್ಕೆಲ್ಲಾ ರೂಪಾಯಿ ಬೇಕು....ಹಾಳು ರಂಡಿ....ಗಂಟು ಇಟ್ಟುಕೊಂಡು ಹಂಗs ಬಿದ್ದೈತೆಲ್ಲಾ....ಇದರ ಸೇವಾಮಾಡಿ ಏನ ಬಂತು ನಮಗ ? ಇದಕ್ಕ ಮಾಡಿದ್ದನ್ನ ನೆನಸಿಕೊಂಡರ ಹೊಟ್ಟಿ ಉರೀತೈತಿ.... "

ಮಳಲಿನ ಮೇಲೆ ಅಡಿಗಳ ಸದ್ದಾಗಲು ಭೀಮಪ್ಪ ಅತ್ತ ಹೊರಳಿ ನೋಡಿದ. ಮಬ್ಬುಗತ್ತಲಲ್ಲಿ ಯಸನೋವಪ್ಪನ ರೇಖಾಕೃತಿ ಕಾಣಿಸಿ ಕೊಂಡಿತು.

ಭೀಮಪ್ಪನ ಹತ್ತರ ಕುಳಿತುಕೊಳ್ಳುತ್ತ ಯಸನೋವಪ್ಪ ಹೇಳಿದ:

" ಒಂದ್ ಬೀಡಿನಾದ್ರೂ ತತಾರೋ ಭೀಮಾ. "

ಭೀಮಪ್ಪ ಗೊಣಗುತ್ತಲೇ ಒಂದು ಬೀಡಿ ತೆಗೆದುಕೊಟ್ಟ.

" ಏನ್ ಯಿಚಾರ ನಡದೈತೋ ಭೀಮಾ ? "

" ಯಿಚಾರ ಏನಪ್ಪಾ, ಆದs ಐತೆಲ್ಲ ಹೊಲದ್ದು. "

" ಕಬಜಾ ಹೋತಂತಲ್ಲ ಹೊಲಾ ? ಹೌದೇನ ? "

" ಹುಂ. "

" ಹೆಂಗ ಮಾಡಬೇಕಂತ ಮಾಡೀ ಮುಂದ ? ಅಪೀಲ ಬಿಡಬ್ಯಾಡ ಮತ್ತ. ಕಡೀತನಕಾ ಬಡದಾಡಬೇಕು ಅಂ. "

" ಬಡದಾಡಬೇಕು ಖರೆ. ರೊಕ್ಕಾ ಎಲ್ಲಿಂದ ತರೂದು ? "

" ನಿನಗೇನೋ ! ಇಬ್ಬರು ಮಕ್ಕಳೂ ಗಳಿಸಿ ತರ್ತಾರ. ರೊಕ್ಕದ್ದೇನ ತ್ರಾಸ ನಿನಗ ? "

" ಹೂಂ. ಗಳಿಸಿ ತರ್ತಾರ ! ಗಳಿಸಿದ್ದೆಲ್ಲಾ ಅವರಿಗೇ ತಿನ್ನಾಕs ಸಾಕಾಗೂದಿಲ್ಲ. "

" ಏನಂದಿ ? ಎಲ್ಲಾ ಹಾಳು ಮಾಡ್ತಾರ ಅಂತೀಯಾ ? "

" ಮಕ್ಕಳು ರೊಕ್ಕಾ ಉಳಿಸಾಕ ಕಲಿತಿದ್ದರ ಇಷ್ಟೆಲ್ಲಾ ಯಾಕಾಗತಿತ್ತು ಯಸನೋವಪ್ಪ ? ಈಗ ಕೈಯಾಗ ಒಂದು ಪೈ ಇಲ್ಲಂತ ಮಂಗ್ಯಾ ಆಗಿ ಕುಂತೀನಿ. "

" ಆ ಮುದುಕಿ ಏನರೆ ಬಿಚ್ಚವೊಲ್ಲದೇನು ? "

" ಹು. ಅದೊಂದು ಬಿಚ್ಚತೈತಿ....ನಮ್ಮ ಜೀವಾನ.... "

" ಇತ್ತ ಸತ್ತೂ ಸಾಯವೊಲ್ಲದು. ಲಗೂನs ಸತ್ತಿದ್ರ ನಿನಗ ರೊಕ್ಕದ ತ್ರಾಸ ಇರತಿರಲಿಲ್ಲ. "

ಭೀಮಪ್ಪ ಮಾತನಾಡಲಿಲ್ಲ. ಸುಮ್ಮನೆ ' ಹುಂ ' ಎಂದ.

" ಇನ್ನs ಏಸು ದಿನಾ ಹಂಗs ಬಿದ್ದು ನರಳುತ್ತೈತ್ಯೋ ಏನೋ. ಅದರ ಸಂಕಟ ನೋಡಾಕಾಗೂದಿಲ್ಲ ಭೀಮಾ. ಎಷ್ಟು ಲಗೂ ಸಾವು ಬಂದಷ್ಟೂ ಚಲೋ ನೋಡು ಅದಕ್ಕ. "

" ಬಾ ಅಂದರ ಬರತೈತೇನೋ ಸಾವು ? "

" ಯೆಸ್, " ಅಂದ ಯಸನೋವಪ್ಪ.

" ಅದೆಂಗ ? "

" ಹಂಗs ಮೆಲ್ಲಕs ಕುತ್ತಿಗೀ ಹಿಚುಕಿ ಬಿಟ್ಟರ ತೀರಿತು. ಮುದುಕೀ ತ್ರಾಸನೂ ತಪ್ಪಿಸಿದಂಗಾತು....ನಿನಗ ರೊಕ್ಕನೂ ಸಿಕ್ಕಂಗಾತು.... "

ಭೀಮಪ್ಪನ ಎದೆ ಕಂಪಿಸಿತು. ತನ್ನ ಮನಸ್ಸಿನಲ್ಲಿನ ವಿಚಾರವನ್ನೇ ಯಸನೋವಪ್ಪ ಆಡಿ ತೋರಿಸಿದ್ದ ! ಕದ್ದ ಒಡವೆಗಳ ಸಮೇತ ಪೋಲೀಸರ ಕೈಗೆ ಸಿಕ್ಕಿಬಿದ್ದ ಕಳ್ಳನಂತಾಯಿತು ಅವನ ಸ್ಥಿತಿ. ಆತ ಕೆಮ್ಮುತ್ತಾ ಎದ್ದು ಕುಳಿತು ಹುಸಿಕೋಪ ನಟಿಸುತ್ತ ನುಡಿದ:

" ಇದೆಂಥಾ ಮಾತಾಡತೀಯೋ ಯಸನೋವಪ್ಪ ! "

" ಇದರಾಗೇನೈತೋ ಮಳ್ಳs. ನಾ ದಂಡಿನಾಗಿದ್ದಾಗ ಗಾಯ ಆದ ಕುದುರಿಗಳನ್ನು ಗುಂಡುಹಾಕಿ ಕೊಂದುಬಿಡತಿದ್ದರು. ಈ ಮುದುಕೀನೂ ಹಂಗs.... ಯೆಸ್....ಯೆಸ್.... " ಎನ್ನುತ್ತ ಯಸನೋವಪ್ಪ ಮೇಲಕ್ಕೆದ್ದು– " ರಾತ್ರಿಯೆಲ್ಲಾ ಇಲ್ಲೇ ಬೀಳಬೇಕಂತ ಮಾಡಿಯೋ ಏನ ? ನಡೀ ಹೋಗೂಣು, " ಎಂದು ನುಡಿದು ಭೀಮಪ್ಪನಿಗಾಗಿ ಕಾದು ನಿಲ್ಲದೆ ಹೊರಟು ಬಿಟ್ಟ.

ಮನೆಗೆ ಬರುವಾಗ ಹಾದಿಯುದ್ದಕ್ಕೂ ಭೀಮಪ್ಪನ ತಲೆಯಲ್ಲಿ ಅದೇ ಆ ಭೀಕರ ವಿಚಾರ ಸುತ್ತುತ್ತಿತ್ತು. ಮುದುಕಿಯನ್ನು ತೀರಿಸಿಬಿಡುವುದೇ ? ತೀರಿಸಿ ಬಿಡುವುದೇ ?

" ತೀರಿಸಿಬಿಡಲೇ ಅವಳನ್ನ ? " ಎಂದು ಆತ ತನ್ನನ್ನು ತಾನೇ ಕೇಳಿ ಕೊಂಡದ್ದು ಮಾತ್ರ ಅದೇ ಮೊದಲ ಸಲವೇನೂ ಅಲ್ಲ. ಮುದುಕಿಯನ್ನು ಮನೆಗೆ ಕರೆದು ತಂದ ಹೊಸದರಲ್ಲಿಯೇ ಆ ವಿಚಾರ ಅವನೆದುರು ಸುಳಿದು ಹೋಗಿತ್ತು. ಆತ ಅವಳ ಆರೈಕೆ ಮಾಡುವಾಗಲೆಲ್ಲ ಅದು ಮತ್ತೆ ಮತ್ತೆ ಸುಳಿದು ಒಂದೆರಡು ನಿಮಿಷ ಅವನ ಎದೆಯಲ್ಲಿ ಕೋಲಾಹಲವೆಬ್ಬಿಸಿ

ಹೊರಟುಹೋಗುತ್ತಿತ್ತು. ಅದು ಮತ್ತೆ ತನ್ನ ತಲೆಯಲ್ಲಿ ಸೇರದಂತೆ ಮಾಡಲು ಆತ ಹಲವು ಬಗೆಯಲ್ಲಿ ಯತ್ನಿಸಿದ್ದನಾದರೂ ಬೆನ್ನುಹಿಡಿದು ಬರುವ ನೆರಳಿನಂತೆ ಅದು ಅವನನ್ನು ಹಿಂಬಾಲಿಸುತ್ತ ಬಂದಿತ್ತು.

ಭೀಮಪ್ಪ ಮನೆಗೆ ಬಂದು ಕೈಕಾಲು ಮುಖ ತೊಳೆದುಕೊಂಡು ಊಟಕ್ಕೆ ಕುಳಿತುಕೊಂಡ. ರೊಟ್ಟಿ ತಿನ್ನುವಾಗಲೂ ಅದೇ ಯೋಚನೆಯೇ. ಸಿದ್ದವ್ವ ಏನೇನನೊ ಕೇಳುತ್ತಿದ್ದಳು. ಭೀಮಪ್ಪನಿಗೆ ಅವಳ ಮಾತೊಂದೂ ಅರ್ಥವಾಗಲಿಲ್ಲ.

"ಪೋಲೀಸರ ಬಂದೂಬಸ್ತಿ ಬಹಳ ಆಗ್ಯೆತಂತಲ್ಲ ?"

"ಆ, ಏನಂದಿ ?" ಭೀಮಪ್ಪ ಬೆಚ್ಚಿ ಬಿದ್ದು ಕೇಳಿದ.

"ಧ್ಯಾನ ಎತ್ತ ಐತಿ ನಿಂದು ? ನಾ ಯೇನ ಹೇಳಾಕ ಹತ್ತೀನಿ ತಿಳಿ ವೊಲ್ಲದೇನ ? ಹುಡುಗರಿಗೆ ಹುಷಾರಾಗಿರೂದಕ್ಕ ಹೇಳಲಾ. ಪೋಲೀಸರ ಕೈಯಾಗ ಸಿಕ್ಕಾರು ಎಲ್ಲೆರೆ."

"ಪೋಲೀಸರೇನ ಮಾಡ್ತಾರ ಬಿಡs. ಹಂಗೇನಾದ್ರು ಆದರ ಕಾಮಣ್ಣ ಹೋಗಿ ಬಿಡಿಸಿಕೊಂಡು ಬರ್ತಾನ."

ಸಿದ್ದವ್ವ ಕೈ ತಿರುವುತ್ತ ಹೇಳಿದಳು:

"ಅವನ ಮಾತೆಲ್ಲಾ ನಂಬಿದರ ಹಾಳಾಗಿಹೋದೇವು ನಾವು. ಹೊಲಾ ಅಂತೂ ಕಳಕೊಂಡು ಕುಂತಿವಿ. ಇರುವ ಇಬ್ಬರು ಮಕ್ಕಳನ್ನೂ ಕಳಕೊಂಡೇವು. ಸೆರೇದ ಧಂದೆ ಚಲೋದಲ್ಲ. ಕಾಯದೇದ ಯಿರುದ್ಧ ಹೋಗೂದಂವರ ಬಹಳ ತ್ರಾಸ ಆಗತ್ತೈತಿ.... "

"ನಾಯೇನ ಮಾಡಲೇ ? ಸೆರೆ ಹೊತ್ತುಕೊಂಡು ಹೋಗಿ ಕೊಡೂ ಕೆಲಸ ನನಗೆರೆ ಏನ ಸರಿಬರತ್ತೈತೇನ ? ನಾ ಮೊದಲs ಬ್ಯಾಡ ಅಂತ ಹೇಳಿದಿನಿ. ಹುಡುಗರು ನನ್ನ ಮಾತೆಲ್ಲಿ ಕೇಳತಾರ ? ಅವರಿಗೆ ಅದs ಚಂದ ಕಾಣತ್ತೈತಿ.... ?

"ಏನ್ ಚಂದೋ ಏನ ಮಣ್ಣೋ. ಜೇಲಿಗೆ ಹೋಗಿ ಕುಂತಾಗ ತಿಳೀತ್ತೈತಿ ಚಂದ.... "

ಜೇಲು !

ಭೀಮಪ್ಪನ ಗಂಟಲಲ್ಲಿ ತುತ್ತು ಇಳಿಯಲಿಲ್ಲ. ತಂಬಿಗೆಯನ್ನೆತ್ತಿ ಗಟ

ಗಟನೆ ನೀರು ಕುಡಿದ, ಕೆಮ್ಮಿದ. ಅವನ ದೃಷ್ಟಿಯೆದುರಿಗೆ ಜೇಲಿನ ದೊಡ್ಡ ದೊಡ್ಡ ಗೋಡೆಗಳು ಬಂದು ನಿಂತಂತಾಯಿತು. ತಿವಿಗತ್ತಿಯ ಬಂದೂಕು ಹಿಡಿದುಕೊಂಡು ಪಹರೆ ಮಾಡುವ ಪೋಲೀಸರು.... ಕಲ್ಲು ಒಡೆಯುವ ಕೈದಿಗಳು....ಫಾಸೀ ಕಂಬ....

ಫಾಸೀ....

ಮುದುಕಿ....ಅವಳ ಕುತ್ತಿಗೆ....ಖೂನಿ....

ಭೀಮಪ್ಪನಿಗೆ ಮತ್ತೆ ಊಟ ಹೋಗಲಿಲ್ಲ. ಕೈ ತೊಳೆದುಕೊಂಡು ಎದ್ದುಬಿಟ್ಟ.

" ಯಾಕ ಎದ್ದಿ ಈಗs ? ಅನ್ನಾ ಉಣ್ಣುವದಿಲ್ಲ ? " ಸಿದ್ದವ್ವ ಆಶ್ಚರ್ಯದಿಂದ ಕೇಳಿದಳು. ಹೊಟ್ಟೆತುಂಬಾ ಊಟಮಾಡದೆ ಅರ್ಧಕ್ಕೇ ಅವನೆಂದೂ ಎದ್ದವನಲ್ಲ.

" ಯಾಕೋ ಏನೋ, ಇವತ್ತು ಹಸಿವಿಲ್ಲ ಸಿದ್ದೀ. "

ಹೊಲ ಕೈಬಿಟ್ಟ ಸಂಕಟದಿಂದ ಆತ ಹಾಗೆ ಮಾಡುತ್ತಿರಬಹುದು—ಎಂದುಕೊಂಡು ಸಿದ್ದವ್ವ ಮೌನ ತಳೆದು, ಆತ ಬಿಟ್ಟ ಆಹಾರವನ್ನು ತಾನು ತಿನ್ನಲು ಕುಳಿತಳು. ಭೀಮಪ್ಪ ಪಡಸಾಲೆಗೆ ಬಂದು ತಾನು ದಿನವೂ ಕೂಡ್ರುವ ಸ್ಥಳದಲ್ಲಿ ಕುಳಿತು ಬೀಡಿ ಹೊತ್ತಿಸತೊಡಗಿದ.

" ಅಂsಯ್....ಅಂsಯ್....ಅಂsಯ್.... " ಮುದುಕಿ ನರಳುತ್ತಿತ್ತು.

" ಉಂಡಿಯೇನs ಅಜ್ಜೀ ? " ಭೀಮಪ್ಪ ಕೇಳಿದ. ತನ್ನ ಬಾಯಿಯಿಂದ ಹೊರಟ ಆ ಮಾತಿನಿಂದಾಗಿ ಅವನಿಗೇ ಅಚ್ಚರಿಯಾಯಿತು. " ಉಂಡಿಯಾ ? " ಎಂದು ಮುದುಕಿಯನ್ನು ಒಂದು ದಿನವೂ ಕೇಳಿದವನಲ್ಲ ಆತ. ಇಂದೂ ಸಹ ಕೇಳಬೇಕೆಂದು ಆತ ಯೋಚಿಸಿರಲಿಲ್ಲ. ಹೇಗಾದರೂ ಹೊರಟಿತೋ ಆ ಪ್ರಶ್ನೆ ತನ್ನ ಬಾಯಿಂದ ? ತಾನೇ ಆಡಿದ ಮಾತೇ ಅದು ? ಅಥವಾ ಇನ್ನಾರಾದರೂ ಆಡಿದರೇ ? ಇದೇನು ಸೋಜಿಗ ?

" ಏನುಣ್ಣೂದು ಬಿಡಪಾ.... " ಎಂದಿತು ಮುದುಕಿ.

" ಒಂದೀಟು ಚಾ ಅರೆ ಕುಡಿಯಲಾ ! " ಭೀಮಪ್ಪನ ಬಾಯಿಯಿಂದ ಥಟ್ಟನೆ ಮಾತು ಹೊರಟಿತು.

ನರಳುತ್ತ ಬಿದ್ದುಕೊಂಡಿದ್ದ ಮುದುಕಿಯ ಹಣ್ಣು ಮುಖದ ಮೇಲೆ ಆಶ್ಚರ್ಯ ಆನಂದಗಳ ತೆರೆಗಳೆದ್ದು ಮಾಯವಾದುವು. ಆರೇಳು ತಿಂಗಳು ಗಳಿಂದಲೂ ಅಂಥ ಮಮತೆಯ ಮಾತೇ ಅವಳ ಕಿವಿಗೆ ಬಿದ್ದಿರಲಿಲ್ಲ ಮನೆಯ ವರೆಲ್ಲರ ಮುಖಗಳ ಮೇಲೆ ಬೇಸರವನ್ನೇ ಕಾಣುತ್ತ ಬಂದಿದ್ದಳವಳು. ಅವ ರೆಲ್ಲರೂ ತಾನು ಸಾಯುವುದನ್ನೇ ನಿರೀಕ್ಷಿಸುತ್ತಲಿದ್ದುದೂ ಅವಳಿಗೆ ಗೊತ್ತಿರದಿ ರಲಿಲ್ಲ. ಅವಳೂ ಸಾವಿನ ಬರವನ್ನೇ ಕಾಯುತ್ತಲಿದ್ದಳು. ಜೀವಿಸುವುದ ರಲ್ಲಿ ಯಾವ ಸಂತೋಷವೂ ಉಳಿದಿರಲಿಲ್ಲ ಅವಳ ಪಾಲಿಗೆ....

"ಚಾ ಕುಡೀತೀಯಾ ಅಜ್ಜೀ ?"

"ಅಂಯ್....ಅಂ....ಹಂ....ಹಂ...." ಎಂದಿತು ಮುದುಕಿ.

"ಅಜ್ಜಿಗೊಂದೀಟು ಚಾ ಮಾಡಿಕೊಡು ಸಿದ್ದೀ," ಎಂದು ಆಜ್ಞೆ ಮಾಡಿದ ಭೀಮಪ್ಪ.

ಸಿದ್ದವ್ವನಿಗೂ ಆಶ್ಚರ್ಯವಾಗದಿರಲಿಲ್ಲ ಒಮ್ಮಿಂದೊಮ್ಮೆಲೆ ಮುದು ಕಿಯ ಬಗೆಗೆ ತನ್ನ ಗಂಡನಿಗೆ ಇಂಥ ಪ್ರೀತಿ ಹೇಗೆ ಹುಟ್ಟಿತೆಂಬುದೇ ಅವಳಿ ಗೊಂದು ಸಮಸ್ಯೆಯಾಯಿತು. ಹೊಲ ಹೋದ ಸಂಕಟದಲ್ಲಿ ಊಟವನ್ನು ಅರ್ಧಕ್ಕೇ ಬಿಟ್ಟೆದ್ದಿದ್ದಾನೆ.... ಈಗ ಮುದುಕಿಗೆ ಚಹ ಮಾಡಿಕೊಡಲು ಹೇಳುತ್ತಾನೆ.... ಸಿದ್ದವ್ವನಿಗೆ ಕೊಂಚ ಗಾಬರಿಯೂ ಆಗದಿರಲಿಲ್ಲ. ಹೊಲ ಹೋಯಿತೆಂಬ ದುಃಖದಲ್ಲಿ ಅವನ ಬುದ್ಧಿಗಿದ್ಧಿ ಕೆಟ್ಟಿತೋ, ಏನಾಯಿತೊ.... ಮೊದಲೇ ಅವನಿಗಿದ್ದ ಬುದ್ಧಿ ತೀರ ಸ್ವಲ್ಪ.... ಈ ಪ್ರಸಂಗದಿಂದಾಗಿ ಅದೂ ಕೆಟ್ಟು ಹೋಯಿತೊ ಏನೊ....

ಹಾಗೆ ಯೋಚಿಸುತ್ತ ಸಿದ್ದವ್ವ ಮತ್ತೆ ಒಲೆಯಲ್ಲಿ ಉರಿ ಹೊತ್ತಿಸಿ ಚಹಕ್ಕೆ ಎಸರಿಟ್ಟಳು.

"ನೀನೂ ಕುಡೀತೀಯೇನು ಒಂದೀಟು ?"

"ನಂಗೇನು ಬ್ಯಾಡ," ಎಂದ ಭೀಮಪ್ಪ.

ಒಲೆಯ ಮೇಲಿನ ಗೂಡಿನಲ್ಲಿದ್ದ ಚಿಕ್ಕ ಕುಡಿಕೆಯೊಂದನ್ನು ತೆಗೆದು ನೋಡಿ ಅದರಲ್ಲಿ ಚಹದ ಪುಡಿಯಿಲ್ಲದಿರುವುದನ್ನು ಕಂಡು ಸಿದ್ದವ್ವ ಹೇಳಿದಳು:

"ಚಾ ಪುಡಿಯೆಲ್ಲಾ ತೀರಿ ಹೋಗ್ಯೈತಲ್ಲ ?"

" ತೀರಿ ಹೋಗ್ಯೆತಿ ? ವ್ಯಾಲ ಅಲ್ಲೆಲ್ಲಾದರೂ ಇರಬೇಕು ನೋಡು. ಅರಿವ್ಯಾಗ ಕಟ್ಟಿಟ್ಟೇನಿ. "

ಸಿದ್ದವ್ವ ಅಟ್ಟದ ಮೇಲೆ ಕೈಹಾಕಿ ಚಹದ ಪುಡಿಯನ್ನು ಹುಡುಕಾಡ ತೊಡಗಿದಳು.

" ಎಲ್ಲಿಟ್ಟೇಯೊ ಏನೊ. ನೀನs ಹುಡುಕಿ ಕೊಡಬಾ. "

ಮೇಲಕ್ಕೇಳಬೇಕಾದರೆ ತನ್ನ ಕಾಲುಗಳೆರಡೂ ಕಂಪಿಸುತ್ತಿದ್ದುದರ ಅನುಭವವಾಯಿತು ಭೀಮಪ್ಪನಿಗೆ. ಕಣ್ಣೆದುರಿಗೆ ಬಗೆಬಗೆಯ ಭೀಕರ ದೃಶ್ಯಗಳು ನೆರೆದಂತಾಯಿತು. ಹೇಗೋ ಮೇಲಕ್ಕೆದ್ದು ಅಡುಗೆಯ ಮನೆಗೆ ಹೋಗಿ ಕಂಪಿಸುತ್ತಿದ್ದ ಕೈಗಳನ್ನು ಅಟ್ಟದ ಮೇಲೆ ಓಡಾಡಿಸಿ ತೊಲೆಯ ಸಂದಿ ನಲ್ಲಿದ್ದ ಬಟ್ಟೆಯ ಚಿಕ್ಕ ಗಂಟೊಂದನ್ನು ತೆಗೆದುಕೊಂಡು ಬಿಚ್ಚಿದ. ಹಳೆಯ ಕಾಗದದ ಒಂದು ತುಂಡಿನಲ್ಲಿದ್ದ ಚಹದ ಪುಡಿಯನ್ನು ತೆಗೆದು ಹೆಂಡತಿಯ ಕೈಗೆ ಕೊಟ್ಟು ಇನ್ನೊಂದು ಕಾಗದದಲ್ಲಿದ್ದ ಗುಳಿಗೆಯೊಂದನ್ನು ಅವಸರದಿಂದ ಕೈಯಲ್ಲಿ ಹಿಡಿದುಕೊಂಡು ಮತ್ತೆ ತನ್ನ ಸ್ಥಳಕ್ಕೆ ಬಂದು ಕುಳಿತುಕೊಂಡ.

ಸಿದ್ದವ್ವ ಚಹ ಸಿದ್ಧಗೊಳಿಸಿ, ತಾಬಾಣದಲ್ಲಿ ಅದನ್ನು ತುಂಬಿ ತಂದು ಗಂಡನ ಕೈಗೆ ಕೊಟ್ಟು, ತಾನು ಮುದುಕಿಯನ್ನು ಮೇಲಕ್ಕೆಬ್ಬಿಸಿ ಗೋಡೆಗೆ ಆಧಾರವಾಗಿ ಕುಳ್ಳಿರಿಸತೊಡಗಿದಳು. ಪಡಸಾಲೆಯಲ್ಲಿ ದೀಪವಿರಲಿಲ್ಲ. ಅಡುಗೆಯ ಮನೆಯಲ್ಲಿದ್ದ ಚಿಮಣೀ ದೀಪದ ಬೆಳಕು ಅಲ್ಪಸ್ವಲ್ಪ ತೂರಿಬರುತ್ತಿ ದ್ದುದೆಷ್ಟೊ ಅಷ್ಟೆ. ಕ್ಷಣಾರ್ಧದಲ್ಲಿ ಭೀಮಪ್ಪ ತನ್ನ ಕೈಯಲ್ಲಿದ್ದ ಗುಳಿಗೆ ಯನ್ನು ತಾಬಾಣದಲ್ಲಿ ಹಾಕಿ ಚಹವನ್ನಾರಿಸುವ ನೆವದಿಂದ ತಾಬಾಣವನ್ನು ಹಾಗೆ ಹೀಗೆ ಅಲುಗಾಡಿಸತೊಡಗಿದ.

ಎದ್ದು ಕುಳಿತುಕೊಳ್ಳುವಾಗ ಬಹಳ ತೊಂದರೆಯಾಯಿತಾದರೂ ಮುದುಕಿ ಸಂತೋಷದಿಂದಲೇ ಚಹ ಕುಡಿದಳಲ್ಲದೆ, " ಭೀಮ ಇವತ್ಯಾಕೋ ನನ್ನ ವ್ಯಾಲ ಖುಷಿ ಆಗಿದಾನ. ನನ್ನ ನಸೀಬ ಚಲೋ ಇದ್ದಂಗ ಕಾಣು ತ್ಯೆತಿ, " ಎಂದು ಮನಸ್ಸಿನಲ್ಲೇ ಹೇಳಿಕೊಂಡಳು. ದೇವರು ತನ್ನನ್ನು ಈಗಲೇ ಕರೆದೊಯ್ಯದಿದ್ದರೂ ಚಿಂತೆಯಿಲ್ಲ—ಎಂದೂ ಅವಳಿಗೆನಿಸದಿರಲಿಲ್ಲ.

ಮುದುಕಿಗೆ ಚಹ ಕುಡಿಸುವಾಗಲೆಲ್ಲ ಭೀಮಪ್ಪನ ಕೈ ಒಂದೇ ಸಮನೆ ನಡುಗುತ್ತಿದ್ದುದು ಅವನನ್ನುಳಿದು ಇನ್ನಾರಿಗೂ ಗೊತ್ತಾಗಲಿಲ್ಲ. ಚಹ ಕುಡಿದ

ಬಳಿಕ ಮುದುಕಿ ತೃಪ್ತಿಯಿಂದ ಉಸಿರೆಳೆದು— " ನನ್ನ ಮ್ಯಾಲ ನಿಮ್ಮ ಉಪ ಕಾರ ಬಾಳ ಆತು. ದೇವರು ನಿಮ್ಮ ಹೊಟ್ಟೆ ತಣ್ಣಗಿಡಲಿ, " ಎಂದು ಉದ್ಗಾರ ತೆಗೆದಳು. ಆ ಮಾತು ಕೇಳುತ್ತಲೂ ಭೀಮಪ್ಪನ ಎದೆ ಪುನಃ ಕಂಪಿಸಿತು. ಮುದುಕಿಯ ಸಮೀಪದಲ್ಲಿ, ಆ ಪಡಸಾಲೆಯಲ್ಲಿ, ಆ ಮನೆಯ ಲ್ಲಿಯೆ ಕುಳಿತಿರುವುದು ಅಸಹ್ಯಕರವಾಯಿತು.. " ನಾ ಈಗ ಬರ್ತೇನಿ. ನೀ ಮಲಕ್ಕೋ, " ಎಂದು ಹೆಂಡತಿಗೆ ಹೇಳಿ ಆತ ಮತ್ತೆ ಮನೆಬಿಟ್ಟು ಹೊರಟ.

ಆ ವೇಳೆಗಾಗಲೆ ಹಳ್ಳಿಯ ಮನೆಗಳ ಬಾಗಿಲುಗಳೆಲ್ಲ ಮುಚ್ಚಿಕೊಂಡಿ ದ್ದುವು. ಬಸವಾಣೆಪ್ಪನ ಚಹದಂಗಡಿಯೊಂದರಲ್ಲಿ ಮಾತ್ರ ಇನ್ನೂ ದೀಪ ಉರಿಯುತಿತ್ತು. ಅದರ ಸುತ್ತಲೂ ವರ್ತುಲಾಕಾರವಾಗಿ ಕುಳಿತುಕೊಂಡು ಕಾಮಣ್ಣನ ಗುಂಪಿನ ನಿರುದ್ಯೋಗಿಗಳು ಇಸ್ಪೀಟಾಟದಲ್ಲಿ ತೊಡಗಿದ್ದರು. ಅವರಲ್ಲಿ ಯಾರಿಗೂ ಹೊರಜಗತ್ತಿನ ಅರಿವಿದ್ದಂತೆ ತೋರುತ್ತಿರಲಿಲ್ಲ. ಅವರಿಗೆ ಕೊಂಚ ದೂರದಲ್ಲಿದ್ದ ಒಲೆಯೆದುರಿಗೆ ಕುಳಿತುಕೊಂಡು ಬಸವಾಣೆಪ್ಪನ ಪ್ರೇಯಸಿ, ನಾಗಿ ಚಹವನ್ನು ಸೋಸತೊಡಗಿದ್ದಳು. ಆ ಅಂಗಡಿಯೆದುರಿಗೆ ಹಾಯ್ದು ಹೊರಟಿದ್ದ ಹಾಗೆ, ಒಳಗಡೆ ಹೋಗಿ ಒಂದು ಕಪ್ಪು ಚಹ ಕುಡಿ ಯೋಣವೇ—ಎನ್ನಿಸಿತು ಭೀಮಪ್ಪನಿಗೆ. ಆ ಅಂಗಡಿ ಅವನಿಗೇನೂ ಅಪರಿ ಚಿತವಾದುದಲ್ಲ. ದಿನವೂ ಒಂದು ಸಲವಾದರೂ ಅಲ್ಲಿಗೆ ಬಂದು, ಒಂದರ್ಧ ತಾಸು ಕುಳಿತು, ಚಹ ಕುಡಿದು ಬೀಡಿ ಸೇದುತ್ತ ನಾಗಿಯೊಂದಿಗೆ ಒಂದೆರಡು ನಗೆ ಮಾತು ಆಡಿ ಹೋಗುವುದು ಅವನ ಪದ್ಧತಿಯಾಗಿತ್ತು. ಇಸ್ಪೀಟಾಟ ದಲ್ಲಿ ಅವನೆಂದೂ ಭಾಗ ವಹಿಸುತ್ತಿರಲಿಲ್ಲವಾದರೂ ಆಟದ ಮೋಜನ್ನು ಕಂಡು ಆನಂದಪಟ್ಟುಕೊಳ್ಳದಿರುತ್ತಿರಲಿಲ್ಲ. ಆಟವಾಡುತ್ತಿದ್ದವರೆಲ್ಲ ಅವನ ಗೆಳೆ ಯರೇ. ಅವನೂ ಅವರ ಗುಂಪಿಗೆ ಸೇರಿದವನೇ. ಆದರೂ ಆ ಸಮಯ ದಲ್ಲಿ ಅವರೆದುರಿಗೆ ಮುಖ ತೋರಿಸುವ ಮನಸ್ಸು ಅವನಿಗಾಗಲಿಲ್ಲ. ಅಲ್ಲಿ ನಿಲ್ಲದೆ ಹಾಗೆಯೆ ಮುಂದೆ ಸಾಗಿದ. ಭರಮಪ್ಪನ ಗುಡಿಯೂ ಹಿಂದೆ ಬಿತ್ತು. ಬಿದಿರುಮೆಳೆ ಎದುರಾಯಿತು. ರಾತ್ರಿಯಲ್ಲಿ ಯಸನೋವಪ್ಪನಾಗಲಿ, ಸೆರೆ ಯಾಗಲಿ ಅಲ್ಲಿ ಸಿಕ್ಕುವುದಿಲ್ಲವೆಂಬುದು ಅವನಿಗೆ ಗೊತ್ತು. ಯಸನೋವಪ್ಪ ಸಿಗಲಿ, ಸಿಗದಿರಲಿ, ಆ ಸಮಯದಲ್ಲಿ ಸೆರೆಯಂತೂ ಅವನಿಗೆ ಅವಶ್ಯವಾಗಿ

ಬೇಕಾಗಿತ್ತು. ಆ ವೇಳೆಯಲ್ಲಿ ಸೆರೆ ದೊರೆಯುವುದೆಂದರೆ ಒಂದೇ ಒಂದು ಸ್ಥಳದಲ್ಲಿ–ಕಾಮಣ್ಣ ಭಟ್ಟಿಯಿಟ್ಟಿದ್ದ ಸ್ಥಳದಲ್ಲಿ.

ಸಿದ್ದೆಯಲ್ಲಿ ನಡೆಯುವವರ ಹಾಗೆ ಭೀಮಪ್ಪ ಹೊಳೆಯ ಮಳಲರಾಶಿಯ ಮೇಲೆ ನಡೆಯುತ್ತ ಹೊರಟ. ಹೊಳೆಯ ನೀರು ಸಮೀಪಿಸಿತು. ಕಾಲುಗಳಲ್ಲಿದ್ದ ಮೆಟ್ಟುಗಳನ್ನು ತೆಗೆದು ಕೈಯಲ್ಲಿ ಹಿಡಿದುಕೊಳ್ಳಬೇಕೆಂಬ ಅರಿವೂ ಆತನಿಗಿರಲಿಲ್ಲ. ಮೆಟ್ಟು ಹಾಕಿಕೊಂಡಿದ್ದ ಹಾಗೆಯೆ ಹೊಳೆ ದಾಟಿ ಬಂದ. ಗುಡ್ಡದ ಮೇಲಿನಿಂದ ಗಾಳಿ ನೇರವಾಗಿ ಬೀಸಿ ಬರುತ್ತಿತ್ತು. ಸ್ವಚ್ಛವಾದ ಗಾಳಿ. ಗಿಡಗಳ ಎಲೆಗಳಲ್ಲಿ ಅದು ಪ್ರವೇಶಿಸಿದಾಗ ಯಾರೋ ನರಳಿದಂತೆ ಕೇಳುತ್ತಿತ್ತು. ಭೀಮಪ್ಪ ನಡಿಗೆಯನ್ನು ತ್ವರಿಗೊಳಿಸಿದ, ಮುದುಕಿಯ ಇಂಯ್‌ಂಯ್ ಎಂಬ ನರಳಾಟ ತನ್ನ ಕಿವಿಗಳೆರಡರಲ್ಲೂ ದುಮುದುಮಿಸುತಿದ್ದಂತೆ ಅವನಿಗೆ ಭಾಸವಾಗುತ್ತಿತ್ತು. ಭೀಮಪ್ಪ ನಡೆದ, ವೇಗದಿಂದ ನಡೆದ. ಕಾಲುದಾರಿ ಮರಡಿಯ ಬಳಿ ಬಂದು ಗುಡ್ಡವನ್ನು ಕೂಡಿಕೊಂಡಿತು ಭೀಮಪ್ಪ ಓಡತೊಡಗಿದ. ಅವನ ಬಾಯಿಯಿಂದ ಉಸಿರು ರಭಸದಿಂದ ಹೊರಹೊರಡತೊಡಗಿತು. ಭೀಮಪ್ಪ ಗುಡ್ಡವನ್ನೇರತೊಡಗಿದ. ಆಕಾಶದಲ್ಲಿನ ಚಿಕ್ಕೆಗಳು ತನ್ನನ್ನು ಕಂಡು ಅರ್ಥಪೂರ್ವಕ ನಗೆ ಬೀರಿದಂತೆ ಭಾಸವಾಗತೊಡಗಿತು. "ಮುದುಕಿಯನ್ನು ಕೊಂದು ಬಂದವ........ವಿಷದ ಗುಳಿಗೆ ಹಾಕಿ ಕೊಂದು ಬಂದವ....ಖೂನಿ....ಖೂನಿ....ಕೊಲೆಗಡಕ...." ಎಂದು ಯಾರೋ ಕೂಗಿದಂತಾಯಿತು. ಕಲ್ಲುಗಳ ಮೇಲೆ ನೆಗೆಯುತ್ತ ಭೀಮಪ್ಪ ಗುಡ್ಡವನ್ನೇರತೊಡಗಿದ. ಹಿಂದಿನಿಂದ ಯಾರೋ ತನ್ನನ್ನು ಹಿಂಬಾಲಿಸಿಕೊಂಡು ಬಂದಂತೆ ಭಾಸವಾಯಿತು. ಯಾರದೋ ಹೆಜ್ಜೆಯ ಸಪ್ಪಳ.... ಮುಸಿವಾಳದ ಗಿಡವೊಂದರ ಕೆಳಗೆ ನಿಂತುಕೊಂಡು ಭೀಮಪ್ಪ ಕಳ್ಳದೃಷ್ಟಿಯನ್ನು ಸುತ್ತಲೂ ಹೊರಳಿಸಿದ. ಕೊಂಚ ಕೆಳಗಡೆ, ಒಂದು ಕಂಟಿಯ ಬಳಿ ಏನೋ ಅಲುಗಾಡಿದ ಹಾಗೆ ಕಾಣಿಸಿತು. ದೇಹವೆಲ್ಲವನ್ನೂ ಕಂಬದಂತೆ ಗಟ್ಟಿಯಾಗಿಸಿ ನಿಂತು ನೋಡಿದ ಭೀಮಪ್ಪ. ಇಲ್ಲ, ಯಾರೂ ತನ್ನನ್ನು ಹಿಂಬಾಲಿಸಿಕೊಂಡು ಬರುತ್ತಿರಲಿಲ್ಲ. ಗಾಳಿಗೆ ಕಂಟಿಯೇ ಅಲುಗಾಡಿರಬೇಕು. ಡವಡವನೆ ಹಾರುವ ಎದೆಯನ್ನು ಎಡಗೈಯಿಂದ ಹಿಡಿದುಕೊಂಡು ಮತ್ತೆ ಗುಡ್ಡ ಏರತೊಡಗಿದ. ಗಿಡಗಂಟಿಗಳು ಕಾಣಿಸವಂತಾದುವು. ಹಾದಿ ಕಾಣಿಸವಾಯಿತು. ಕಣ್ಣಿನ

ದುರಿಗೆ ಚಹದ ತಾಬಾಣ....ವಿಷದ ಗುಳಿಗೆ........ ಮುದುಕಿಯನ್ನು ತೀರಿಸಿ ಬಿಡುವ ಉದ್ದೇಶದಿಂದಲೇ, ಎಂದೋ ಒಂದು ದಿನ ತಾನು ತಂದು ಬಚ್ಚಿಟ್ಟಿದ್ದ ಗುಳಿಗೆ. ಗೋಡೆಗೊರಗಿ ಕುಳಿತು ನಿಧಾನವಾಗಿ ಚಹ....ವಿಷದ ಚಹ ಗುಟು ಕರಿಸಿದ ಮುದುಕಿ. " ನಿಮ್ಮ ಉಪಕಾರ ಬಹಳ ಆತು. ನಿಮ್ಮ ಹೊಟ್ಟೆ ತಣ್ಣಗಿರಲಿ.... !! ಉಪಕಾರ....ಹ ಹ ಹ್ಹಾ....ಉಪಕಾರ ! ತಣ್ಣಗೆ ! ಇನ್ನು ಸ್ವಲ್ಪ ಹೊತ್ತಿನೊಳಗಾಗಿಯೇ ಮುದುಕಿಯ ಹೊಟ್ಟೆಯೂ ತಣ್ಣಗಾಗು ವುದು....ಎಲ್ಲವೂ ತಣ್ಣಗಾಗುವುದು....ಅವಳ ಉಡಿಯಲ್ಲಿಯ ಗಂಟು....ಅದ ರಲ್ಲಿನ ವಸ್ತು ಒಡವೆಗಳು....ಬಂಗಾರದ ಕೈಬಳೆ, ಪುತ್ಥಳಿಯ ಸರ, ಗುಂಡಿನ ಟಿಕ್ಕೆ, ತೋಳಬಂದಿ, ಚಿಂತಾಕು....

ಗುಡ್ಡದ ಏರು ಮುಗಿಯಿತು. ಭೀಮಪ್ಪ ಕೊಳ್ಳಕ್ಕಿಳಿಯತೊಡಗಿದ. ಆಗಾಗ ಕಾಲು ಜಾರತೊಡಗಿದುವು. ಬೀಳುತ್ತ ಏಳುತ್ತ ಇಳಿಯತೊಡಗಿದ. ಭಟ್ಟಿಯಿರಿಸಿದ್ದ ತಾಣ ಹತ್ತಿರ ಹತ್ತಿರ ಬರುತ್ತಿತ್ತು. ಇವನು ಇಳಿದು ಬರುವು ದರ ಸದ್ದು ಕೇಳಿ " ಯಾರಲೇ ಅಂವಾ ? " ಎಂದು ಯಾರೋ ಕೂಗಿದರು. ಸೆರೆ ತಯಾರಿಸುವ ಆಳುಗಳಲ್ಲೊಬ್ಬನಾದ ತಿಪ್ಪುವಿನ ಧ್ವನಿ ಅದು. " ನಾನಪೋ ತಿಪ್ಪ್ಯಾ....ನಾ ಭೀಮ " ಎಂದು ಮಾರುತ್ತರವಿತ್ತು ಭೀಮಪ್ಪ ಗಿಡಗಂಟೆಗಳನ್ನು ಬದಿಗೆ ಸರಿಸುತ್ತ ಭಟ್ಟಿಯ ಬಳಿ ಬಂದ.

ಪೊದೆಗಳ ನಡುವೆ ಮೂವತ್ತು ನಲವತ್ತು ಅಡಿಗಳಷ್ಟು ಜಾಗ ಮಾಡಿ ಕೊಂಡು ಅಲ್ಲಿ ಭಟ್ಟಿ ಹೂಡಲಾಗಿದ್ದಿತು. ಬೆಂಕಿಯುರಿಯುತ್ತಿದ್ದ ಒಲೆಗಳ ಮೇಲೆ ಸಾಲಾಗಿ ಹನ್ನೆರಡು ಹರವಿಗಳನ್ನಿರಿಸಲಾಗಿದ್ದಿತು. ಹರವಿಗಳಮೇಲೆ ಬಾಯಿ ಕೆಳಗೆ ಮಾಡಿ ಇರಿಸಿದ್ದ ಗಡಿಗೆಗಳು—ಅವುಗಳಿಗೆ ಕೂರಿಗೆಯ ಲಳಿಗೆ ಗಳು. ಆ ಲಳಿಗೆಗಳಿಂದಿಳಿದು ಪಕ್ಕದಲ್ಲಿದ್ದ ಗಡಿಗೆಗಳಲ್ಲಿ ಬೀಳುತ್ತಿದ್ದ ಸೆರೆ.... ಸುತ್ತಲೂ ಸಹಿಸಲಸಾಧ್ಯವಾದ ದುರ್ಗಂಧ ಹರಡಿದ್ದಿತು. ಅಂಥ ದುರ್ಗಂಧ ದಲ್ಲೇ ಕುಳಿತುಕೊಂಡು ಮೂರುಜನರು ಭಟ್ಟಿಯನ್ನು ನೋಡಿಕೊಳ್ಳುತ್ತಿದ್ದರು. ಹೊಲೆಯರ ತಿಪ್ಪೂ, ನಾಯಕರ ರಾಯಾ, ಕಾಳಪ್ಪಗೋಳ ಕಲ್ಲ್ಯಾ. ಅವರು ಮೂವರು ಭೀಮಪ್ಪನ ಸ್ನೇಹಿತರೇ.

" ಬಾ, ಭೀಮಾ, ಕುಂಡ್ರು, " ಎಂದ ತಿಪ್ಪು.

ಭೀಮಪ್ಪ ಒಂದು ಒಲೆಯೆದುರಿಗೆ ಕುಳಿತುಕೊಂಡು, ತಿಪ್ಪ್ಯಾ ತಂದು ಕೊಟ್ಟ ಒಂದು ಕಪ್ ಸೆರೆಯನ್ನು ಗಟಗಟನೆ ಕುಡಿದು, " ಇನ್ನ್ಯೊಂದ್ ಕಪ್ ತತಾರೋ, " ಎಂದ. ಹತ್ತಿರವಿದ್ದ ಸೆರೆಯ ಗಡಿಗೆಯನ್ನೇ ಎಳೆದು ತಿಪ್ಪ್ಯಾ ಅದನ್ನು ಭೀಮಪ್ಪನ ಎದುರಿಗಿರಿಸಿದ. ಭೀಮಪ್ಪ ಕಪ್ಪನ್ನು ಕೆಳಕ್ಕಿಟ್ಟು ಆ ಗಡಿಗೆಯನ್ನೇ ಎತ್ತಿ ಬಾಯಿಗೆ ಹಿಡಿದ. ಬೆಚ್ಚಗಿನ ಸೆರೆ ಗಂಟಲನ್ನು ಸುಡುತ್ತ ಹೊಟ್ಟೆಗೆ ಸೇರತೊಡಗಿತು. ಭೀಮಪ್ಪ ಕುಡಿದ, ಕುಡಿದೇ ಕುಡಿದ. ಗಡಿಗೆಯೆಲ್ಲ ಬರಿಯದಾಗುವ ವರೆಗೂ ಕುಡಿದ. ಅನಂತರ ಅದನ್ನು ತಿಪ್ಪುವಿನ ಕೈಗೆ ಕೊಟ್ಟು, ಬಲಗೈಯ ಹಿಂಭಾಗದಿಂದ ಬಾಯಿಯನ್ನೊರೆಸಿಕೊಂಡು—" ಹುಡುಗರಿಬ್ಬರೂ ಹೋಗಿ ಬಾಳ ಹೊತ್ತಾತೇನ್ರೋ ? " ಎಂದು ಪ್ರಶ್ನಿಸಿದ. ಉತ್ತರವಾಗಿ ತಿಪ್ಪು ಏನು ಹೇಳಿದನೆಂಬುದು ಅವನಿಗೆ ಅರ್ಥವಾಗಲಿಲ್ಲ. " ಬಾಳ ನಿದ್ದಿ ಬಂದೈತಿ. ಬಿದ್ದಿರತೀನಿ, " ಎಂದು ತೊದಲುತ್ತ ಅಲ್ಲಿಯೇ ನೆಲದ ಮೇಲೆ ದೇಹವನ್ನೊರಗಿಸಿದ. ತಿಪ್ಪು ನಗುತ್ತಾ ಒಲೆಗೆ ಉರಿ ಹಚ್ಚ ತೊಡಗಿದ ರಾಯಾ, ಕಲ್ಲ್ಯಾ ಇಬ್ಬರೂ ನಕ್ಕರು. ಮಾತನಾಡಲಿಲ್ಲ. ಮಾತನಾಡುವಂತಿರಲಿಲ್ಲ. ಕೊಂಚವೂ ಸದ್ದಾಗದಂತೆ ಅವರು ಯಾವಾಗಲೂ ಎಚ್ಚರಿಕೆ ವಹಿಸಬೇಕಾಗುತ್ತಿತ್ತು.

ಬೆಳಗು ಬಂದಿತು. ಸೂರ್ಯನ ಕಿರಣಗಳು ಕೊಳ್ಳದ ವರೆಗೂ ಇಳಿದು ಬಂದುವು. ಆಗಲೂ ಭಟ್ಟಿಯ ಕಾಯಕ ಹಾಗೆಯೇ ಸಾಗಿತ್ತು. ಒಂದು ತಾಸು ಹೊತ್ತಾದಾಗ ಯಸನೋವಪ್ಪ ಇನ್ನಿಬ್ಬರು ಆಳುಗಳೊಂದಿಗೆ ಗುಡ್ಡ ಇಳಿದು ಬಂದ. ಹಗಲು ಕೆಲಸ ಮಾಡುವ ತ್ರಿಮೂರ್ತಿಗಳವರು.

ಹೆಣದಂತೆ ಬಿದ್ದುಕೊಂಡಿದ್ದ ಭೀಮಪ್ಪನನ್ನು ಬಡಿದೆಬ್ಬಿಸಲು ಯತ್ನಿಸುತ್ತ ಯಸನೋವಪ್ಪ ಹೇಳಿದ:

" ಏಳಲೇ ಭೀಮಾ....ಏಳು ವ್ಯಾಲ........ನಿಮ್ಮ ಮುದುಕಿ ಸತ್ತು ಹೋಗೈತಿ ರಾತ್ರ್ಯಾಗ. "

ಭೀಮಪ್ಪ ಅಲುಗಾಡಲಿಲ್ಲ. ಮರದ ತುಂಡಿನಂತೆ ಹಾಗೆಯೇ ಬಿದ್ದುಕೊಂಡಿದ್ದ.

" ರಾತ್ರಿ ಬಾಳ ಹೊಡೆದಾನೇನ್ರೋ ? " ಯಸನೋವಪ್ಪ ಕೇಳಿದ.

" ಒಂದು ಗಡಿಗೀ ಎಲ್ಲಾ ಹೊಡೆದಾನ. "

" ಅಷ್ಟ್ಯಾಕ ಕೊಡಾಕ ಹೋಗಿದ್ದಿರೋ ? ಅವ ಎಂದೂ ಇಷ್ಟು ಕುಡಿದಾವಲ್ಲ. ಥೂ, ನಿಮ್ಮೌನ್ನ ! ಎಬ್ಬಿಸಿರಿ ಅವನ್ನ. "

ರಾಯಾ ಒಂದು ತಂಬಿಗೆ ನೀರು ತಂದು ಭೀಮಪ್ಪನ ಮುಖದ ಮೇಲೆ ಚೆಲ್ಲಿದ ಬಳಿಕ ಅವನಿಗೆ ಕೊಂಚ ಅರಿವು ಬಂದಂತಾಯಿತು. ಮೆಲ್ಲಗೆ ಕಣ್ತೆರೆದು ಸುತ್ತಲೂ ನೋಡಿದ. ಏನೂ ಕಾಣಿಸಲಿಲ್ಲ. ಕಣ್ಣೆದುರಿಗೆ ಬರೀ ಬೆಂಕಿ....

" ನಿಮ್ಮ ಮುದುಕಿ ಸತ್ತಾಳ ಏಳೋ.... "

" ಆ....ಊ....ಆ....ಊ " ಎಂದು ತೊದಲಿದ ಭೀಮಪ್ಪ.

" ಎಬ್ಬಿಸಿರಿ ಇವನ್ನ. ಜರಿಯೊಳಗ ಮುಳುಗಿಸೂಣು. ಆ ಮ್ಯಾಲಾದರೂ ಎಚ್ಚತ್ತಾನು, " ಎಂದು ಯಮನೋವಪ್ಪ ಹೇಳಿದ.

ರಾಯಾ, ಭೀಮಪ್ಪನ ತಲೆಯನ್ನು ಹಿಡಿದ, ಕಲ್ಲ್ಯಾ ಕಾಲು ಹಿಡಿದ. ಐವತ್ತು ಅರವತ್ತು ಅಡಿ ದೂರದಲ್ಲಿ ಹರಿಯುತ್ತಿದ್ದ ಝರಿಯ ಬಳಿಗೆ ಅವನನ್ನು ಹೊತ್ತು ತಂದು ನೀರಿನಲ್ಲಿ ಮಲಗಿಸಿದರು. ತಣ್ಣನೆಯ ನೀರು ಬಟ್ಟೆಗಳನ್ನೆಲ್ಲ ತೋಯಿಸಿ ದೇಹವನ್ನು ಸ್ಪರ್ಶಿಸಿದ ಹಾಗೆ ಭೀಮಪ್ಪನಿಗೆ ಕೊಂಚ ಕೊಂಚ ಎಚ್ಚರವಾಗತೊಡಗಿತು. ರಾಯಾ ಅವನ ತಲೆಯನ್ನು ಹಿಡಿದು ನೀರಿನಲ್ಲದ್ದಿ ಬಾಯಿಯಲ್ಲೂ ಮೂಗಿನಲ್ಲೂ ನೀರು ಸೇರುವಂತೆ ಮಾಡಿದ. ಭೀಮಪ್ಪ ಚೇತರಿಸಿಕೊಳ್ಳತೊಡಗಿದ.

" ಯಾರಲೇ ಅವಾ, ನನ್ನ ಅಂಗೀ ಕಸಕೊಳ್ಳಾಂವಾ ? " ಎನ್ನುತ್ತಾ ಆತ ನೀರಿನಲ್ಲೇ ಎದ್ದು ಕುಳಿತ. ಅವನ ಕಣ್ಣುಗಳೆರಡೂ ಗಾಜಿನಂತಾಗಿದ್ದುವು. ಮೂಗಿನಿಂದಲೂ ಬಾಯಿಯಿಂದಲೂ ನೀರು ಸೋರುತ್ತಿತ್ತು.

" ಏಳೋ ಭಾಡಕೌ, ನಿಮ್ಮ ಮುದುಕಿ ಸತ್ತಾಳ. "

" ನಾ ಯಾಕ ಸಾಯಲಿ. ನೀನs ಸಾಯಿ ಭಾಡ್ಯಾ, " ಎಂದು ಕೂಗುತ್ತ ಭೀಮಪ್ಪ ಮೇಲಕ್ಕೇಳಲು ಯತ್ನಿಸಿದ. ಸಾಧ್ಯವಾಗಲಿಲ್ಲ. ಅವನ ದೇಹ ಅತ್ತಿತ್ತ ಒಲೆದು ಮತ್ತೆ ನೀರಿಗೆ ಕುಕ್ಕರಿಸಿತು.

" ಅಯ್ಯಯ್ಯೊ, ನನ್ನ ಹೊಳ್ಯಾಗ ಮುಳುಗಿಸಿದೀರೇನ್ರೋ, ಸತ್ತೆನೊ ನಾ ಸತ್ತಿನಿ, " ಎಂದು ಚೀರುತ್ತ ಭೀಮಪ್ಪ ಧ್ವನಿ ತೆಗೆದು ಅಳತೊಡಗಿದ.

ಸೆರೆಯ ಅಮಲು ಇನ್ನೂ ಪೂರ್ಣವಾಗಿ ತೊಲಗಿಲ್ಲವೆಂಬುದು ತಿಳಿದೊಡನೆ ಯಮನೋವಪ್ಪ ತಂಬಿಗೆಯಲ್ಲಿ ನೀರು ತುಂಬಿ ತುಂಬಿ ಭೀಮಪ್ಪನ ತಲೆಯ ಮೇಲೆ ಸುರಿಯತೊಡಗಿದ. "ಅಯ್ಯಯ್ಯೋ, ನಾ ಸಾಯತೀನರ್ರ್ಯೋ, ಮುಳುಗಿದೆನಿರ್ರ್ಯೋ" ಎಂದು ಕೂಗುತ್ತಲೇ ಇದ್ದ ಭೀಮಪ್ಪ. ಹತ್ತಿಪ್ಪತ್ತು ತಂಬಿಗೆ ನೀರು ತಲೆಯ ಮೇಲೆ ಬಿದ್ದ ಬಳಿಕ ಅವನ ಮೆದುಳು ಕೊಂಚ ಸರಿಯಾದಂತಾಯಿತು.

"ನೀರು ಯಾಕ ಹಾಕತೀಯೋ ?"

ತಂಬಿಗೆಯನ್ನು ರಾಯಾನ ಕೈಗೆ ಕೊಟ್ಟು ಯಮನೋವಪ್ಪ ಹೇಳಿದ:

"ನಿಮ್ಮ ಮುದುಕಿ ಸತ್ತು ಹೋತು. ಅದನ್ನ ಮಣ್ಣಾಗ ಹಾಕಬೇಕಂತಿಯೋ ಇಲ್ಲೋ ?"

"ಮುದುಕಿ ?"

"ಹು. ಮುದುಕಿ. ರಾತ್ರ್ಯಾಗ ಸತ್ತಿತು. ಮಂದಿ ಎಲ್ಲಾ ಕೂಡ್ಯಾರ. ನಿನ್ನ ಹಾದೀನs ನೋಡತಾ ಕುಂತಾರ. ಲಗೂ ಹೋಗು," ಎಂದು ಹೇಳಿ ಯಮನೋವಪ್ಪ ಅವನನ್ನು ಮೇಲಕ್ಕೆಬ್ಬಿಸಿದ. ರಾಯಾ ಅವನ ಎಡತೋಳನ್ನು ಹಿಡಿದ, ಕಲ್ಲ್ಯಾ ಬಲದೋಳನ್ನು ಹಿಡಿದ, ತಿಪ್ಪ್ಯ ಬೆನ್ನಹಿಂದೆ ನಿಂತ. ಭೀಮಪ್ಪನನ್ನು ನಡಿಸಿಕೊಂಡು ಮೂವರೂ ಹಳ್ಳಿಯ ಕಡೆ ಸಾಗಿದರು.

## ಎರಡು

ಮುದುಕಿಯ ಶವವನ್ನು ಮಣ್ಣಿನಲ್ಲಿ ಮುಚ್ಚಿ ಹಳ್ಳಿಯವರೆಲ್ಲ ಮಿಂದು ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಬೇಕಾದರೆ ನಡುಹಗಲು ಕಳೆದು ಹೋಗಿತ್ತು.

ಮಣ್ಣು ಕೊಡಲು ಹೋಗಿದ್ದ ಗಿರಿಯನೊಬ್ಬ ಮಾತ್ರ ಹೋಗದೆ ಹೊಲದ ಕಡೆಗೇ ನಡೆದ. ಹಳ್ಳಿಯಿಂದ ಒಂದು ಮೈಲು ದೂರದಲ್ಲಿ ಹೊಳೆಯ ದಂಡೆಯ ಮೇಲೆ ಅವನ ಹೊಲವಿತ್ತು. ಒಂದೂವರೆ ಎಕರೆಯಷ್ಟು ಸಣ್ಣ

ಹೊಲ. ಅದರ ಅರ್ಧ ಭಾಗದಲ್ಲಿ ಗಿರಿಯ ಆ ವರ್ಷ ಮೆಣಸಿನಕಾಯಿ ಬೆಳೆದಿದ್ದ. ಆ ವೇಳೆಗಾಗಲೇ ಕಾಯಿಗಳನ್ನೆಲ್ಲ ಬಿಡಿಸಿ ಹೊಲದಲ್ಲಿದ್ದ ಕಣದಲ್ಲಿಯೆ ಒಣಗಲು ಹರಡಲಾಗಿತ್ತು. ಗಿರಿಯನ ಅಜ್ಜ ಹಗಲು ಹೊತ್ತಿನಲ್ಲಿ ಅಲ್ಲಿ ಕಾವಲು ಕುಳಿತಿರುತ್ತಿದ್ದ. ರಾತ್ರಿಯಲ್ಲಿ ಗಿರಿಯನೇ ಅಲ್ಲಿ ಮಲಗಿಕೊಂಡಿರುತ್ತಿದ್ದ.

ಅಜ್ಜನೊಬ್ಬನನ್ನುಳಿದು ಇನ್ನಾರೂ ಇರಲಿಲ್ಲ ಗಿರಿಯನಿಗೆ. ಅವನು ಚಿಕ್ಕವನಿರುವಾಗಲೇ ಅವನ ತಂದೆತಾಯಿಗಳಿಬ್ಬರೂ ಸತ್ತು ಹೋಗಿದ್ದರು. ಅಜ್ಜನೇ ಮೊಮ್ಮಗನನ್ನು ಸಾಕಿ ಬೆಳಸಿದ್ದ. ಆತ ಹದಿನೆಂಟರ ಪ್ರಾಯದವನಾದಾಗ ಅವನಿಗೊಂದು ಮದುವೆಯನ್ನೂ ಮಾಡಿದ್ದ. ಆದರೆ ಆ ಹುಡುಗೆಯೂ ದೊಡ್ಡವಳಾಗುವುದಕ್ಕೆ ಮೊದಲೇ ಯಾವುದೋ ರೋಗಕ್ಕೆ ಬಲಿಯಾಗಿ ಸತ್ತುಹೋಗಿದ್ದಳು. ಆ ಮಾತಿಗೆ ಐದಾರು ವರ್ಷ ಕಳೆದುಹೋಗಿದ್ದುವು. ಗಿರಿಯ ಸಾಕಷ್ಟು ಉದ್ದವಾಗಿ ಬಲಶಾಲಿಯಾಗಿ ಬೆಳೆದಿದ್ದ. ಎತ್ತು ಬಿಟ್ಟುಕೊಂಡು ಆತ ಹೊರಟನೆಂದರೆ ಪುಟ್ಟದೊಂದು ಬೆಟ್ಟವೇ ಹೊರಟ ಹಾಗೆ ತೋರುತ್ತಿತ್ತು. ತಾನು ಕಣ್ಣು ಮುಚ್ಚುವುದರೊಳಗಾಗಿ ಮೊಮ್ಮಗನಿಗೆ ಮತ್ತೊಂದು ಮದುವೆ ಮಾಡಿ ಅವನು ಸಂಸಾರ ಮಾಡುವುದನ್ನು ಕಂಡು ಸಂತೋಷಪಡುವ ಆಶೆ ಅಜ್ಜನದು. ಗಿರಿಯನಿಗೆ ಮಾತ್ರ ಆ ಬಗೆಗೆ ಅಂಥ ಆಸ್ಥೆಯೇನೂ ಇರಲಿಲ್ಲ. "ಈಗs ಯಾಕ ಅವಸರ ಅಜ್ಜಾ. ಇನ್ನೊಂದು ನಾಕು ವರುಸ ಹೋಗಲೇಳು" ಎಂದು ನುಡಿದು ಆತ ಅಜ್ಜನ ಆತುರತೆಯನ್ನು ತಡೆದು ನಿಲ್ಲಿಸುತ್ತಿದ್ದ. ಅವನು ಹಿಡಿದಿದ್ದ ಹೊಲವೂ ತೀರ ಚಿಕ್ಕದಾಗಿದ್ದುದರಿಂದ ಕೆಲಸದ ಶ್ರಮವೂ ಹೆಚ್ಚಾಗಿರಲಿಲ್ಲ. ಹೊಲದ ಕೆಲಸ, ಮನೆಯ ಕೆಲಸ ಎರಡನ್ನೂ ಲೀಲಾಜಾಲವಾಗಿ ನೋಡಿಕೊಳ್ಳುತ್ತ ಕಾಲ ತಳ್ಳುತ್ತಿದ್ದ ಗಿರಿಯ.

ಪ್ರತಿದಿನವೂ ಬೆಳ್ಳಿ ಮೂಡುವ ಮೊದಲೇ ಎದ್ದು, ಒಲೆಗೆ ಉರಿ ಹೊತ್ತಿಸಿ, ಹುಳಿಪಲ್ಯವನ್ನೂ ಅಂಬಲಿಯನ್ನೂ ರೊಟ್ಟಿಯನ್ನೂ ಬೇಯಿಸಿ, ಎಲ್ಲವನ್ನೂ ಬುಟ್ಟಿಗೆ ತುಂಬಿ, ಎತ್ತುಗಳನ್ನಟ್ಟಿಕೊಂಡು, ಅಜ್ಜನನ್ನು ಕರೆದುಕೊಂಡು ಹೊಲಕ್ಕೆ ಹೊರಡುವುದು ಅವನ ಪದ್ಧತಿಯಾಗಿತ್ತು. ಬೆಳಗಿನಲ್ಲಿ ಹೊಲಕ್ಕೆ ಬಂದವರು ಸಾಯಂಕಾಲವೇ ಹಿಂದಿರುಗುತ್ತಿದ್ದರು. ಮೂರು

ತಾಸು ಹೊತ್ತೇರಿದಾಗ ಹೊಳೆಯ ದಂಡೆಯ ಮೇಲಿದ್ದ ಮಾವಿನ ಗಿಡದ ನೆರಳಲ್ಲಿ ಕುಳಿತುಕೊಂಡು ಅಜ್ಜ ಮೊಮ್ಮಗ ಇಬ್ಬರೂ 'ನ್ಯಾರಿ' ಮಾಡುತ್ತಿದ್ದರು. ಅನಂತರ ಹೊಲದಲ್ಲಿ ಹೋರಿಗೆ ತೊಡಗುತ್ತಿದ್ದರು.

ಮುದುಕಿಗೆ 'ಮಣ್ಣು ಕೊಡಲು' ಹೋಗಿದ್ದ ಗಿರಿಯ ಆ ದಿನ ಇನ್ನೂ 'ನ್ಯಾರಿ' ಮಾಡಿರಲಿಲ್ಲ. ಸಹಜವಾಗಿಯೆ ಅವನಿಗೆ ತುಂಬಾ ಹಸಿವೆಯಾಗಿತ್ತು. ತನ್ನ ಉದ್ದ ಉದ್ದ ಕಾಲುಗಳನ್ನು ಲಗುಬಗೆಯಿಂದ ಎತ್ತಿಡುತ್ತ ಆತ ಹತ್ತು ಹದಿನೈದು ನಿಮಿಷಗಳೊಳಗಾಗಿ ಹೊಲದ ಹತ್ತಿರ ಬಂದ. ಕಣದ ಹತ್ತಿರವಿದ್ದ ಚಿಕ್ಕ ಗುಡಿಸಲಿನಲ್ಲಿ ಕುಳಿತುಕೊಂಡು, ಅಜ್ಜ ತನ್ನ ಬರವನ್ನೆ ಎದುರು ನೋಡುತ್ತಿದ್ದುದು ಕಾಣಿಸಿತು. ಮಾವಿನ ಗಿಡದ ನೆರಳಲ್ಲಿ ಕಣಿಕೆಯನ್ನು ಮೆಲ್ಲುತ್ತ ನಿಂತಿದ್ದ ಎತ್ತುಗಳೆರಡೂ ಒಡೆಯನನ್ನು ಕಂಡು ಕಿವಿಗಳನ್ನು ನಿಗುರಿಸಿದುವು.

ಒಂದೆರಡು ವರ್ಷಗಳಿಂದ ಅಜ್ಜನ ದೃಷ್ಟಿ ಮಂದವಾಗುತ್ತ ಬಂದಿತ್ತು. ಆತ ಹುಬ್ಬುಗಳ ಹತ್ತಿರ ಬಲಗೈಯಿರಿಸಿ ಮೊಮ್ಮಗನನ್ನು ನಿರುಕಿಸಿ ನೋಡಲು ಯತ್ನಿಸುತ್ತ— "ಯಾಕೋ, ಬಾಳ ಹೊತ್ತಾತಲ್ಲ?" ಎಂದು ಕೇಳಿದ.

"ನೆಂಟರು ಗಿಂಟರು ಬರೂದಿತ್ತಂತ ಕಾಯುತಾ ಕುಂತರು. ತಡಾ ಆತು," ಎಂದು ಉತ್ತರವಿತ್ತು ಗಿರಿಯ— "ನೀ ಇನ್ನೂ ಉಂಡಂಗ ಕಾಣೂದಿಲ್ಲಲಾ? ಇಷ್ಟೊತ್ತು ಹಂಗs ಕುಂತೀಯೇನ? ಉಂಡು ಬಿಡಬೇಕಾಗಿತ್ತು?" ಎಂದ.

"ಇರಲೇಳ. ಈಗರೆ ಏನ ಹೊತ್ತಾಗೈತಿ? ನೀ ಜಳಕಾ ಮಾಡಿ ಬಂದ್ಯೋ ಇಲ್ಲೋ?"

"ಈಗ.... ಇನ್ನೊಂದ ಗಳಿಗ್ಯಾಗ ಮಾಡಿ ಬರ್ತೀನಿ," ಎಂದವನೆ ಗಿರಿಯ ಕೊಂಚ ದೂರದಲ್ಲಿದ್ದ ಮಡುವಿನ ಕಡೆ ಸಾಗಿದ.

ಅವನ ಹೊಲದಿಂದ ಅರ್ಧ ಫರ್ಲಾಂಗಿನಷ್ಟು ದೂರದಲ್ಲಿ ಆ ಮಡುವಿತ್ತು. ಪಶ್ಚಿಮ ದಿಕ್ಕಿನಿಂದ ಹರಿದು ಬರುವ ಹೊಳೆ ಅಲ್ಲಿ ಉತ್ತರಕ್ಕೆ ತಿರುಗಿಕೊಂಡಿದ್ದುದರಿಂದ ಆ ಭಾಗದಲ್ಲಿ ದೊಡ್ಡ ಮಡುವಾಗಿತ್ತು. ವರ್ಷದಲ್ಲಿ ಹನ್ನೆರಡು ತಿಂಗಳುಗಳ ಕಾಲವೂ ನೀರಿನಿಂದ ತುಂಬಿರುತ್ತಿತ್ತು ಆ ಜಾಗ.

ಗಿರಿಯನಿಗೆ ಈಜಾಡುವುದೆಂದರೆ ಬಹಳ ಪ್ರೀತಿ. ದಿನವೂ ಆತ ಅಲ್ಲಿಗೆಬಂದು ಅರ್ಧ ಗಂಟೆಯಷ್ಟು ಹೊತ್ತಾದರೂ ಆ ಮಡುವಿನಲ್ಲಿ ಈಜುತ್ತಿದ್ದ. ಹಳ್ಳಿಯಿಂದ ಆ ಜಾಗ ಬಲು ದೂರವಿದ್ದಿತಾದುದರಿಂದ ಅಲ್ಲಿಗೆ ಬೇರಾರೂ ಬರುತ್ತಿರಲಿಲ್ಲ.

ಮಡುವಿನ ಮೇಲಿದ್ದ ಬಸಿರಿ ಗಿಡದ ಬಳಿ ಬಂದು ಗಿರಿಯ ಅಂಗಿಯನ್ನು ಬಿಚ್ಚುತ್ತಿದ್ದ ಹಾಗೆ ಆಚೆದಂಡೆಯ ಮೇಲೆ ಏನೋ ಸದ್ದಾದ ಹಾಗೆ ಕೇಳಿಸಲು ಅತ್ತ ದೃಷ್ಟಿ ಹೊರಳಿಸಿ ನೋಡಿದ. ಹದಿನೇಳು ಹದಿನೆಂಟು ವರ್ಷದ ತರುಣಿಯೊಬ್ಬಳು ಎಮ್ಮೆಯೊಂದನ್ನು ನೀರಿಗಿಳಿಸುತ್ತಿದ್ದುದು ಕಾಣಿಸಿತು. ಆಕೆ ಅವನಿಗೆ ಅಪರಿಚಿತಳಾಗಿರಲಿಲ್ಲವಾದರೂ ಅಂಥ ವಿಶೇಷ ಪರಿಚಯದವಳೂ ಆಗಿರಲಿಲ್ಲ. “ಬಾಲಿ ಇಂಥಾ ಹೊತ್ತಿನ್ಯಾಗ ಇಲ್ಲಿಗ್ಯಾಕ ಬಂದಳೋ” ಎಂದುಕೊಳ್ಳುತ್ತ ಆತ ಅಂಗಿಯನ್ನು ತೊಳೆಯಲು ನೀರಿಗಿಳಿದ. ಅಲ್ಲಿಂದ ಒಂದು ಒಂದೂವರೆ ಮೈಲು ದೂರದಲ್ಲಿದ್ದ ಕೋಗಿಹಳ್ಳಿಯ ಸಣ್ಣಪ್ಪನ ಮಗಳು ಬಾಲಿ. ಭೀಮಪ್ಪನ ಹಿರಿಯ ಮಗ ಪೈಲ್ವಾನ್ ಗಿಡ್ಡನಿಗೆ ಅವಳನ್ನು ಕೊಟ್ಟಿತ್ತು. ಬಾಲಿ ಮೊದಲನೆಯ ಸಲ ಗಂಡನ ಮನೆಗೆ ಬಂದವಳು ಆರೇಳು ತಿಂಗಳಲ್ಲಿಯೆ ತವರುಮನೆಗೆ ಹೊರಟು ಹೋಗಿದ್ದಳು. ಆ ಮೇಲೆ ಗಂಡನ ಮನೆಗೆ ಕಾಲು ಹಾಕಿರಲಿಲ್ಲ. ಗಿಡ್ಡ ಅವಳನ್ನು ಬಿಟ್ಟ ಹಾಗೆಯೆ ಆಗಿತ್ತು. ಹಳ್ಳಿಯಲ್ಲಿ ಎಲ್ಲರಿಗೂ ಗೊತ್ತಿದ್ದಂತೆ ಈ ಸಂಗತಿ ಗಿರಿಯನಿಗೂ ಗೊತ್ತಾಗಿತ್ತು. ತನಗೇನೂ ಸಂಬಂಧವಿಲ್ಲದ ವಿಷಯಗಳ ಬಗೆಗೆ ಕುತೂಹಲ ತಳೆಯುವುದು ಅವನ ಸ್ವಭಾವವಾಗಿರಲಿಲ್ಲ. “ಏನಾರೆ ಆಗಲೇಳ. ನನಗ್ಯಾಕ ಅದೆಲ್ಲಾ?” ಎಂದುಕೊಂಡು ಆತ ತನ್ನ ಕಾಯಕದಲ್ಲಿ ತನ್ಮಯನಾಗಿದ್ದ.

ಎಮ್ಮೆಯನ್ನು ನೀರಿಗೆ ಬಿಟ್ಟು, ಉಟ್ಟ ಸೀರೆಯನ್ನು ಹಿಂದೆ ತಿರುವಿ ಮೊಳಕಾಲುಗಳ ಮೇಲಕ್ಕೆತ್ತಿ ಕಚ್ಚೆ ಹಾಕಿ, ಬಾಲಿ ಎರಡೂ ಕೈಗಳಲ್ಲಿ ನೀರನ್ನೆತ್ತಿಕೊಂಡು ಮುಖ ತೊಳೆದುಕೊಂಡಳು. ಹಣೆಯ ಮೇಲೆ ಬಂದಿದ್ದ ಕೂದಲುಗಳನ್ನು ಸವರಿ ಹಿಂದಿರುಗಿಸಿಕೊಂಡಳು. ಹೊಳೆಯ ತಿಳಿನೀರನ್ನು ಬೊಗಸೆಯಿಂದೆತ್ತಿ ಕುಡಿಯುತ್ತಾ ಎದುರಿಗೆ ಅಂಗಿ ಒಗೆಯುತ್ತ ನಿಂತಿದ್ದ ಗಿರಿಯನನ್ನು ತುಂಟ ದೃಷ್ಟಿಯಿಂದ ನಿಟ್ಟಿಸತೊಡಗಿದಳು. ಬಿಸಿಲಿನಲ್ಲಿ ಮಿರುಗು

ತ್ತಿದ್ದ, ಎತ್ತರವೂ ಪುಷ್ಟವೂ ಆದ ಆ ತರುಣ ದೇಹಯಷ್ಟಿ ಅವಳನ್ನು ಮುಗ್ಧಳ ನ್ನಾಗಿಸದಿರಲಿಲ್ಲ. ಸೊಂಟದಲ್ಲಿದ್ದ ಕಪಾಟಿಯೊಂದನ್ನುಳಿದು ಬೇರೆ ವಸ್ತ್ರವಿರಲಿಲ್ಲ ಗಿರಿಯನ ಮೈಮೇಲೆ. ಹುರಿಗೊಂಡ ತೋಳು ತೊಡೆ, ಉಕ್ಕಿನಿಂದ ಮಾಡಿ ದಂತಿದ್ದ ವಿಶಾಲವಾದ ಎದೆ, ನೀಳವಾಗಿದ್ದರೂ ಬಲಶಾಲಿಯಾಗಿದ್ದ ಕುತ್ತಿಗೆ, ಕಮ್ಮಾರನ ಕೊಡತಿಯಂತಿದ್ದ ಮುಂಗೈಗಳು, ಕಲ್ಲಿನ ಮೇಲೆ ಅಂಗಿಯನ್ನಪ್ಪಳಿ ಸುವಾಗ ವಿಸ್ತಾರ ಹೊಂದಿ ತಕಪಕನೆ ಕುಣಿಯುತ್ತಿದ್ದ ತೋಳಿನ ಸ್ನಾಯು ಗಳು, ದೇಹದ ಚಲನವಲನದೊಂದಿಗೆ ಅತ್ತ ಇತ್ತ ತೂಗಾಡುತ್ತಿದ್ದ ಕೊರಳ ತಾಯಿತ, ಅಂಗಸೌಷ್ಠವಕ್ಕೆ ಶೋಭೆ ಕೊಡುವಂತೆ ಬೆಳೆದಿದ್ದ ಕಿರುಮೀಸೆ.... ಯಾವ ತರುಣಿಯನ್ನಾದರೂ ಮರುಳುಗೊಳಿಸುವಂಥ ದೇಹ ಗಿರಿಯನದು. ಗಂಡನನ್ನು ಬಿಟ್ಟು ಬಂದು ತವರುಮನೆಯಲ್ಲೇ ಕಾಲ ಕಳೆಯುತ್ತಿದ್ದ ಹರ ಯದ ಬಾಲಿ ಅವನಿಗೆ ಮರುಳಾಗುವುದು ತೀರ ಸಹಜವಾದ ಸಂಗತಿ ಯಾಗಿತ್ತು.

ಗಿರಿಯ ಮಾತ್ರ ಅವಳತ್ತ ದೃಷ್ಟಿ ಹೊರಳಿಸಲೇ ಇಲ್ಲ. ಬಾಲಿ ಒಳ್ಳೆಯ ನಡತೆಯವಳಲ್ಲ, ಮಹಾ ಗಂಡುಬೀರಿ, ಹರಯದ ಹುಡುಗರನ್ನೆಲ್ಲ ಕೆಡಿಸಲು ಯತ್ನಿಸುವಾಕೆ—ಎಂದು ಹಿಂದೊಂದು ಸಲ ಯಾರೋ ಆಡಿದುದನ್ನು ಆತ ಕೇಳಿದ್ದ. ಆಕೆ ಭೀಮಪ್ಪನ ಮನೆಯಲ್ಲಿದ್ದಾಗಲೇ ಯಾರನ್ನೋ ಇಟ್ಟುಕೊಂಡಿ ದ್ದಳೆಂಬ ವದಂತಿಯೂ ಅವನ ಕಿವಿಗೆ ಬಿದ್ದಿತ್ತು. ಅವಳ ಬಗೆಗೆ ಒಂದು ರೀತಿಯ ಭಯವೇ ಅವನಲ್ಲಿ ಮನೆ ಮಾಡಿಕೊಂಡ ಹಾಗಿತ್ತು. ಅಂತೆಯೆ ಆ ಏಕಾಂತ ಸ್ಥಳದಲ್ಲಿ ಅಕಸ್ಮಾತ್ತಾಗಿ ಅವಳನ್ನು ಕಂಡಾಗ ಅವಳೊಂದಿಗೆ ಮಾತು ಬೆಳಸುವ ಗೊಡವೆಗೆ ಬೀಳದೆ ಆತ ತನ್ನಷ್ಟಕ್ಕೆ ತಾನು ಅಂಗಿ ಒಗೆ ಯುತ್ತಲಿದ್ದ.

ಅವನ ದೃಷ್ಟಿಯನ್ನು ತನ್ನೆಡೆಗೆ ಸೆಳೆದುಕೊಳ್ಳಲು ಬಾಲಿ ಬಗೆಬಗೆಯಾಗಿ ಯತ್ನಿಸಿದಳು. ಕೈಗಳಿಂದ ನೀರನ್ನು ಬಡಿದು ಸದ್ದು ಮಾಡಿದಳು. ಬಾಯಿ ಯಲ್ಲಿ ನೀರು ತುಂಬಿಕೊಂಡು ಗುಳು ಗುಳು ಸದ್ದಾಗುವಂತೆ ಉಗುಳಿದಳು. ಸೊಯ್ಯೆಂದು ಸಿಂಬುಳ ಕಳೆದಳು. ಸೆರಗನ್ನು ಸೊಂಟಕ್ಕೆ ಸುತ್ತಿ, ಬೇಕೆಂ ತಲೇ ಸದ್ದು ಮಾಡುತ್ತ ತೋಳುಗಳನ್ನು ತೊಳೆದುಕೊಂಡಳು. ಅವಳು ಮಾಡುತ್ತಿದ್ದ ಸಪ್ಪಳವನ್ನೆಲ್ಲ ಕೇಳಿದರೂ ಕೇಳಿಸದವನಂತೆ ಗಿರಿಯ ಆಚೆ

ದಂಡೆಯ ಮೇಲೆ ಅಂಗಿ ಒಗೆಯುತ್ತಿದ್ದ. ಒಗೆಯುವುದು ಮುಗಿದ ಬಳಿಕ ಮೇಲೆ ಹೋಗಿ ದಂಡೆಯ ಮೇಲೆ ಬೆಳೆದಿದ್ದ ಲಕ್ಕಿಯ ಪೊದೆಯ ಮೇಲೆ ಅಂಗಿಯನ್ನು ಒಣಗಲು ಹಾಕಿದ. ಒಂದು ಕ್ಷಣ ಅಲ್ಲಿಯೇ ನಿಂತುಕೊಂಡು ಮುಂದೇನನ್ನು ಮಾಡುವುದೆಂದು ಯೋಚಿಸುತ್ತಿದ್ದ. ಇನ್ನು ಮಡುವಿಗೆ ಹಾರಿ ಈಜಬೇಕಾಗಿತ್ತು. ಬಾಲಿ ಆಚೆ ದಂಡೆಯ ಮೇಲೆ ತನ್ನ ಜತೆಗೆ ಹುಡುಗಾಟ ಹೂಡಲೆಂದೇ ನಿಂತಿರುವಾಗ ತಾನು ಅವಳೆದುರಿಗೇ ಈಜಾಡುವುದೇ ? ಮಣ್ಣುಕೊಟ್ಟು ಬಂದುದರಿಂದ, ಮೈಲಿಗೆಯನ್ನು ಕಳೆದುಕೊಳ್ಳಲು ಸ್ನಾನ ಮಾಡುವುದಂತೂ ಅಗತ್ಯವಾಗಿತ್ತು. ಅಲ್ಲಿ ಅಜ್ಜ ತಾನು ಬರುವುದನ್ನೇ ಕಾದು ಕುಳಿತಿದ್ದಾನೆ. ಬೇಗ ಜಳಕ ಮುಗಿಸಿಕೊಂಡು ಹೊರಡಲೇಬೇಕು........

ಹಾಗೆ ಯೋಚಿಸುತ್ತ ಗಿರಿಯ ಮಡುವಿಗೆ ಧುಮುಕಿದ. 'ಧುಡುಂ' ಎಂದು ಸದ್ದಾಯಿತು. ಆತ ನೀರಿನಲ್ಲಿ ಮುಳುಗಿ ಮೇಲಕ್ಕೆ ತಲೆಯೆತ್ತುವಷ್ಟರಲ್ಲಿಯೇ ಬಾಲಿ ಕೋಪದಿಂದ ಕೂಗುವುದು ಕೇಳಿಸಿತು.

"ದಂಡೀಮ್ಯಾಗ ಮಂದಿ ಆದಾರ ಅನ್ನೂದು ಕಾಣುದಿಲ್ಲೇನೋ ಭಾಡ್ಯಾ ? ನನ್ನ ಸೀರೀ ಎಲ್ಲಾ ತೋಯಿಸಿಬಿಟ್ಟೆ........ "

ಗಿರಿಯ ಗಾಬರಿಗೊಂಡು ಮತ್ತೆ ನೀರಲ್ಲಿ ಮುಳುಗಿದ. ಒಂದು ನಿಮಿಷ ನೀರಿನೊಳಗೇ ಈಜುತ್ತಿದ್ದು ಮತ್ತೆ ಆತ ತಲೆಯನ್ನು ಮೇಲಕ್ಕೆತ್ತಿದೊಡನೆಯೆ ಬಾಲಿ ಎರಡೂ ಕೈಗಳಿಂದ ನೀರು ಬಡಿದು ಅವನ ಮುಖಕ್ಕೆ ಚಿಮ್ಮಿಸಿದಳು. ನೇರವಾಗಿ ಬೀಸಿಬಂದ ನೀರು ಮೂಗಿನೊಳಸೇರಿದುದರಿಂದ ಆತ ಚಡಪಡಿಸುತ್ತ, "ಇದೆಂಥಾ ದೆವ್ವ ಗಂಟುಬಿತ್ತೊ ಇವಳವ್ವನ," ಎಂದು ಗೊಣಗುತ್ತ ಮೂಗಿನ ಹೊರಳೆಗಳನ್ನು ಕೊಡವಿ ನೀರನ್ನು ಹೊರದೆಗೆಯತೊಡಗಿದ.

"ಯಾಕೋ, ನಾಲಗೀ ಬಾಳ ಉದ್ದ ಮಾಡುತೀ ? ನಮ್ಮ ಅವ್ವನ್ನ ಬಯ್ಯುವಷ್ಟು ಧೈರ್ಯೇ ಏನ ನಿನಗ ? ಯಾರೋ ದೆವ್ವ ? ನಾ ದೆವ್ವನಾಂಗ ಕಾಣತೇನೇನ ನಿನಗ ?" ಎಂದು ಕೂಗುತ್ತ ಬಾಲಿ ಜಗಳಕ್ಕೇ ಸಿದ್ಧವಾಗಿ ನಿಂತಳು.

ನೀರು ಕುಡಿದು ಮುಗಿಸಿದ್ದ ಅವಳ ಎಮ್ಮೆ ಹೊಳೆಯ ಪ್ರವಾಹದಲ್ಲಿ ಬಿದ್ದುಕೊಂಡು ಸ್ನಾನದ ಸುಖವನ್ನನುಭವಿಸುವುದರಲ್ಲಿ ಮಗ್ನವಾಗಿತ್ತು. ಬಾಲಿ

ಅದನ್ನು ಕ್ರೂರದೃಷ್ಟಿಯಿಂದ ನೋಡುತ್ತ— "ಎಂದಾರೆ ನೀರು ಕಂಡೈತೋ ಇಲ್ಲೋ ಹಾಳುರಂಡಿ: ಕರೀ ವೈ ಚೆಲ್ಲಿ ಬಿತ್ತು ನೋಡ," ಎಂದು ಬಯ್ದಳು.

ಎಮ್ಮೆಯನ್ನು ಬಯ್ಯುವ ನೆವದಲ್ಲಿ ಬಾಲಿ ತನ್ನ ಕಪ್ಪು ಬಣ್ಣವನ್ನು ಟೀಕಿಸಿದಳೆಂಬುದನ್ನು ತಿಳಿಯದಿರುವಷ್ಟು ಅಜ್ಞನೇನೂ ಆಗಿರಲಿಲ್ಲ ಗಿರಿಯ. ಅವನ ಸ್ವಾಭಿಮಾನಕ್ಕೆ ಬಲವಾದ ಪೆಟ್ಟು ಬಿದ್ದಂತಾಯಿತು. ಅವಳೊಂದಿಗೆ ಮಾತು ಬೆಳೆಸಬಾರದೆಂದು ಆತ ಮೊದಲೇ ನಿಶ್ಚಯಿಸಿಕೊಂಡನಾದರೂ ಈ ಸಂದರ್ಭದಲ್ಲಿ ಸುಮ್ಮನಿರಲು ಸಾಧ್ಯವಾಗಲಿಲ್ಲ, ಮಡುವಿನ ಮೇಲೆ ತೇಲುತ್ತಿದ್ದ ಹಾಗೆ ಆತ ಅಣಕವಾಡಿದ:

"ಏನೋ ಜರಾ ಬೆಳ್ಳಗ ಅದೀಯಂತ ಒಣಾ ಬಡಿವಾರ ಮಾಡಬ್ಯಾಡ, ತಿಳೀತೇನ? ಗಂಡನ್ನ ಬಿಟ್ಟ ಕುಂತಾಕಿಗೆ ಇಂಥಾ ಡೌಲೆಲ್ಲಾ ಯಾತಕ್ಕ ಬೇಕು ?"

ಬಾಲಿ ಕೆರಳಿದ ಹಾವಿನಂತೆ ಅವನತ್ತ ತಿರುಗಿ ನುಡಿದಳು:

"ನಾ ಗಂಡನ್ನ ಬಿಟ್ಟ ಕುಂದ್ರಲಿ. ಮಿಂಡನ್ನ ಕಟ್ಟಿಕೊಂಡ ಕುಂದ್ರಲಿ, ನಿಮ್ಮಪ್ಪಂದೇನ ಗಂಟು ಹೋಗತೈತ್ಯೋ ಮೂಳಾ! ಬಾಯಾಗಿನ ಹಲ್ಲು ಉದುರ್‍ಯಾವು."

ಅವಳ ಆವೇಶವನ್ನು ಕಂಡು ಗಿರಿಯನಿಗೆ ನಗೆಯನ್ನು ತಡೆಯಲಾಗಲಿಲ್ಲ. ಆತ ಖಹ ಖ ಹಾ ಎಂದು ನಗತೊಡಗಿದ.

ಬಾಲಿಯ ಗೌರವರ್ಣದ ಮುಖ ಸಿಟ್ಟಿನಿಂದ ಕೆಂಪಗಾಯಿತು. "ಯಾಕೋ ಭಾಡ್ಯಾ, ಬಲ್ಲಾಂಗ ಮಾತಾಡಿ ನಗುತೀ ?" ಎನ್ನುತ್ತಾ ಆಕೆ ಅವನನ್ನು ಹೊಡೆಯಲು ಕೈಯೆತ್ತಿ ಮುಂದೆ ಹೆಜ್ಜೆಯಿಟ್ಟೊಡನೆಯೆ ಮಡುವಿನಲ್ಲಿ ಬಿದ್ದುಬಿಟ್ಟಳು.

ಗಿರಿಯ ಗಾಬರಿಯಿಂದ ನೀರಲ್ಲಿ ಮುಳುಗಿ ಅವಳನ್ನು ಮೇಲಕ್ಕೆಳೆಯಲು ಯತ್ನಿಸತೊಡಗಿದ. ಬಾಲಿ ಮುಳುಗಿ ಸಾಯಬಹುದೆಂದೇ ಆತ ತಿಳಿದುಕೊಂಡಿದ್ದ. ಆದರಾಕೆ ಮುಳುಗಲಿಲ್ಲ. ಮಡುವಿನಿಂದ ಮೇಲಕ್ಕೆದ್ದು ಕೈ-ಗಳನ್ನು ನಿಧಾನದಾಗಿ ಬಡಿಯುತ್ತ, ನೀರು ಕುಡಿದು ಉಗುಳುತ್ತ ಸೊಗಸಾಗಿ ಈಜತೊಡಗಿದಳು.

ಅವಳ ಹತ್ತಿರದಲ್ಲಿಯೆ ಈಜಾಡುತ್ತ ಗಿರಿಯ ಮೆಚ್ಚುಗೆಯ ಧ್ವನಿಯಲ್ಲಿ ಕೇಳಿದ:

" ಈಸಾಕ ಬರುತೈತಲ್ಲ ಬಾಲೀ ನಿನಗ ? ಯಾವಾಗ ಕಲಿತು ಕೊಂಡಿ ? "

" ನಿನಗ್ಯಾಕ ಬೇಕು ಅದೆಲ್ಲಾ ? "

" ನೀ ಮುಳುಗೇ ಹೋದಿ ಅಂತ ಅಂಜಿಕಿಯಾಗಿತ್ತು ನೋಡು ನನಗ. "

" ಹಹ ! ವಾರೆ ಗಂಡಸs ! ಅಂಜಿಕಿಯಾತಂತ ಅಂಜಿಕಿ ! " ಎಂದು ಅವಳು ಅಣಕವಾಡಿದಳು.

ಗಿರಿಯ ಮತ್ತೊಂದು ಮಾತನಾಡದೆ ಈಜು ನಿಲ್ಲಿಸಿ ದಂಡೆಗೆ ಬಂದು ಕಪಾಟಿಯನ್ನು ಕಳಚಿ ಧೋತರ ಉಟ್ಟುಕೊಳ್ಳತೊಡಗಿದ. ಆತ ಮಾಡುವು ದನ್ನೆಲ್ಲ ಕಳ್ಳದೃಷ್ಟಿಯಿಂದ ನಿರುಕಿಸುತ್ತ ಬಾಲಿ ಹಾಗೆಯೆ ಈಜಾಡುತ್ತಿದ್ದಳು. ಗಿರಿಯ ಧೋತರ ಉಟ್ಟುಕೊಂಡು ಕಪಾಟಿಯನ್ನು ಹಿಂಡಿ ಕೈಯಲ್ಲಿ ಹಿಡಿದು ಕೊಂಡು, ಲಕ್ಕಿಯ ಪೊದೆಯ ಮೇಲಿನ ಅಂಗಿಯನ್ನು ತೆಗೆದುಕೊಂಡು ತನ್ನ ಹಾದಿ ಹಿಡಿದು ಹೊರಡುತ್ತಲೂ ಅವಳು ಹಠಾತ್ತಾಗಿ ಧ್ವನಿಯೆತ್ತಿ ನುಡಿ ದಳು:

" ಯಾಕಲಾ, ಹೊಂಟಿಯೇನ ? "

ಗಿರಿಯ ಉತ್ತರವೀಯದೆ ಹಾಗೆಯೇ ಮುಂದುವರೆದ.

" ಏಲ್, ಗಿರಿಯಾ ! "

ಆಗಲೂ ಆತ ನಿಲ್ಲಲಿಲ್ಲ.

" ಅಯ್ಯೋ....ಅಯ್ಯಯ್ಯೋ........ ಮುಳುಗಿದೆನೋ.... ಸತ್ತೆನೋ.... ಗಿರಿಯಾ.... " ಎಂದು ಕೂಗಿಕೊಂಡು ಬಾಲಿ ಮಡುವಿನಲ್ಲಿ ಕಣ್ಮರೆಯಾದಳು.

ಅದೆಲ್ಲ ಕೇವಲ ಹುಡುಗಾಟವೆಂಬುದು ಗಿರಿಯನಿಗೆ ತಿಳಿಯಲಿಲ್ಲ. ಈಜಿ ಈಜಿ ಕೈ ಸೋತದ್ದರಿಂದ ಬಾಲಿ ಮುಳುಗಿರಲೂ ಸಾಕು—ಎಂದೇ ಭಾವಿಸಿ ಆತ ಅಂಗಿಯನ್ನೂ ಕಪಾಟಿಯನ್ನೂ ದಂಡೆಯಮೇಲೆ ಬಿಸುಟು ಮತ್ತೆ ಮಡು ವಿಗೆ ಹಾರಿದ. ಕೈಸೋತವರ ಹಾಗೆ ಮುಳುಗುವ ಏಳುವ ನಟನೆ ಮಾಡು ತ್ತಲಿದ್ದ ಬಾಲಿಯನ್ನು ಹಿಡಿದೆಳೆದುಕೊಂಡು ದಂಡೆಗೆ ತಂದು ಅಲ್ಲಿದ್ದ ಬಂಡೆ

ಗಲ್ಲಿನ ಮೇಲೆ ಕೂಡ್ರಿಸಿದ. ಮುಳುಗಿದ್ದವರ ಹಾಗೆಯೆ ಆವಳು ಅವನನ್ನು ಬಿಗಿಯಾಗಿ ತಬ್ಬಿಕೊಂಡಿದ್ದಳು. ಅವಳ ತುಂಬಿದ ಎದೆ ಅವನ ಎದೆಯೊಂದಿಗೆ ತಾಕಲಾಡುತ್ತ ಅವನ ದೇಹದಲ್ಲೆಲ್ಲ ಬೆಂಕಿಯನ್ನೆಬ್ಬಿಸುತ್ತಲಿತ್ತು. ಆ ನುಣ್ಣಗಿನ ತೋಳುಗಳು, ಆ ತೊಡೆಗಳು, ತೊಯ್ದ ಸೀರೆ ಕುಪ್ಪಸಗಳೊಳಗಿನಿಂದ ಎದ್ದು ಕಾಣುವ ಆ ತರುಣ ದೇಹದ ಏರಿಳಿತ, ಉಬ್ಬು ತಗ್ಗುಗಳು.... ತಾನೆಲ್ಲಿರುವೆನೆಂಬುದರ ಅರಿವೇ ಇಲ್ಲದಂತಾಗಿತ್ತು ಗಿರಿಯನಿಗೆ. ಹರಯದ ಹೆಣ್ಣಿನ ಸ್ಪರ್ಶ ಸುಖವನ್ನಾತ ಅನುಭವಿಸುತ್ತಿದ್ದುದು ಅದೇ ಮೊದಲ ಸಲ.

ಬಂಡೆಗಲ್ಲಿನ ಮೇಲೆ ಬಂದು ಕುಳಿತ ಮೇಲೂ ಬಾಲಿ ಗಿರಿಯನನ್ನು ಬಿಡದೆ ಹಾಗೆಯೆ ತಬ್ಬಿಕೊಂಡಿದ್ದಳು. ಅವನಿಂದ ಏನು ಪ್ರತಿಕ್ರಿಯೆ ಬರುವುದೋ ಎಂದು ಒಂದೆರಡು ಕ್ಷಣ ಕಾಯುತ್ತ ಕುಳಿತಳು.

“ನೀರು ಹೊಟ್ಯಾಗ ಹೋತೇನs ಬಾಲೀ?” ಎಂದು ಕೇಳಿದನಾತ.

“ಹೂ.”

“ಈಗ ಆರಾಮು ಆತಿಲ್ಲೋ? ಇಲ್ಲಾ, ಹೊಟ್ಯಾಗಿನ ನೀರು ತಗೀಲೋ?”

ನೀರಲ್ಲಿ ಮುಳುಗಿದವರನ್ನು ಮಲಗಿಸಿ ಅವರ ಹೊಟ್ಟೆಯಲ್ಲಿ ಹೊಕ್ಕ ನೀರನ್ನು ಹೊರತೆಗೆಯುವ ವಿದ್ಯೆಯನ್ನು ಆತ ಎಂದೋ ಕಲಿತುಕೊಂಡಿದ್ದ.

“ನೀರು ತಗೀತಿಯಾ? ತಗೀ ಹಂಗಾದರ,” ಎಂದಳು ಬಾಲಿ.

ಧಡಧಡಿಸುವ ಎದೆಯಿಂದ ಆತ ಅವಳನ್ನು ಎರಡೂ ಕೈಗಳಲ್ಲಿ ಹಿಡಿದುಕೊಂಡು ಹೊಳೆಯ ದಂಡೆಗೆ ತಂದು ಮಳಲ ಹಾಸುಗೆಯ ಮೇಲೆ ಮಲಗಿಸತೊಡಗಿದ. ನಡುಹಗಲಿನ ಬಿಸಿಲಿನಲ್ಲಿ ಕಾಯ್ದು ಕೆಂಡದಂತಾಗಿದ್ದ ಮಳಲಿಗೆ ತನ್ನ ಮೈ ಸೋಂಕಿದೊಡನೆ ಬಾಲಿ “ಅಯ್ಯೋ” ಎಂದು ಚೀರಿ ಎರಡೂ ಕೈಗಳನ್ನು ಗಿರಿಯನ ಕೊರಳಿಗೆ ಸೇರಿಸಿ, “ಇಲ್ಲಿ ಬ್ಯಾಡ ಗಿರಿಯಾ, ಬಾಳ ಸುಡತೈತಿ,” ಎಂದಳು.

ಹತ್ತಿರದಲ್ಲಿಯೆ ಲಕ್ಕಿಯ ಪೊದೆ. ಅದರ ನಡುವೆ ಹಸುರು ಹುಲ್ಲು ಬೆಳೆದ ಜಾಗ. ಮೇಲೆ ಕೊಡೆ ಹಿಡಿದು ನಿಂತಂತಿದ್ದ ಬಸಿರಿಮರ. ಬಾಲಿಯನ್ನು ಅಲ್ಲಿಗೇ ಹೊತ್ತು ತಂದು ಗಿರಿಯ ಹುಲ್ಲಿನ ಹಾಸಿಗೆಯ ಮೇಲೆ ಅವ

ಳನ್ನು ಆಂಗಾತವಾಗಿ ಮಲಗಿಸಿದ. ಅವನ ಕೊರಳಿಗೆ ಸುತ್ತಿದ್ದ ತನ್ನ ಕೈ ಗಳನ್ನು ಅವಳು ಇನ್ನೂ ತೆಗೆದಿರಲಿಲ್ಲ.

ನೀರು ಕುಡಿದವರ ಹೊಟ್ಟೆ ಉಬ್ಬಿ ಗರ್ಭಿಣಿಯರ ಹೊಟ್ಟೆಯಂತಾಗು ವುದೆಂಬ ವಿಷಯ ಗಿರಿಯನಿಗೆ ಗೊತ್ತಿದ್ದಿತು. ಬಾಲಿಯ ಹೊಟ್ಟೆಯೇನೂ ಹಾಗೆ ಉಬ್ಬಿರಲಿಲ್ಲ. ಹುಲ್ಲಿನ ಮೇಲೆ ಮಲಗಿಸಿದೊಡನೆ ಅದು ಇನ್ನೂ ಒಳಕ್ಕೆ ಹೋಯಿತು. ಗಿರಿಯನಿಗೆ ಆಶ್ಚರ್ಯವಾಗದಿರಲಿಲ್ಲ. ಬಾಲಿ ನೀರು ಕುಡಿದದ್ದು, ಕೈ ಸೋತು ಮುಳುಗಿದ್ದು ಎಲ್ಲವೂ ಸುಳ್ಳೇನೋ ಎಂದುಕೊಂಡ. ಎಂಥ ನಾಟಕ ಮಾಡಲೂ ಹಿಂಜರಿಯುವವಳಲ್ಲ ಈ ಗಂಡುಬೀರಿ....

"ಹೊಟ್ಟೇ ಒತ್ತಲಾ ಬಾಲೀ ?"

"ಹೊಟ್ಟೇ ಒತ್ತುತೀಯಾ? ಹಹ್ಹಹ್ಹಹ್ಹಹ್ಹಾ !" ಎಂದು ಆಕೆ ತುಂಟತನದಿಂದ ನಗತೊಡಗಿದಳು. ಅದರೊಂದಿಗೆ ಅವಳ ಕಣ್ಣು, ಅವಳ ವಕ್ಷಸ್ಥಳ, ಅವಳ ಇನ್ನಿತರ ಅಂಗಾಂಗಗಳೆಲ್ಲವೂ ನಕ್ಕಂತಾಯಿತು.

ಮೇಲೆ, ಗಿಡದ ಕೊಂಬೆಯಲ್ಲಿ ಕುಳಿತಿದ್ದ ಹಕ್ಕಿಯೊಂದು ಸಿಳ್ಳುಹಾಕಿತು. ಗಿರಿಯ ಬೆಚ್ಚಿಬಿದ್ದು ಕೊಂಚ ದೂರ ಸರಿದ. ಆತನ ಗಾಬರಿಯನ್ನು ಕಂಡು ಬಾಲಿ ಕಿಲಕಿಲನೆ ನಗುತ್ತ, "ಯಾರೂ ಬಂದಿಲ್ಲೇಳು. ಎಷ್ಟರೆ ಅಂಜ ತೀಯೋ ನೀ !" ಎಂದಳು.

ನಡುಗುತ್ತಿದ್ದ ಕೈಗಳಿಂದ ಅವಳನ್ನು ಹಿಡಿದು ತಬ್ಬಿಕೊಳ್ಳುತ್ತ ಗಿರಿಯ ನೆಂದ: "ಬಾಲೀ !"

ಅವನ ತಲೆಗೂದಲನ್ನು ಸವರುತ್ತ ಬಾಲಿಯೆಂದಳು: "ಗಿರಿಯಾ !"

ಗಿಡದ ಮೇಲೆ ಕುಳಿತಿದ್ದ ಹಕ್ಕಿ ಮತ್ತೆ ಸ್ವರವೆತ್ತಿ ಸಿಳ್ಳು ಹಾಕತೊಡ ಗಿತು. ಹತ್ತಿರದಲ್ಲಿಯೇ ಹರಿದುಹೋಗುತ್ತಿದ್ದ ಹೊಳೆಯ ಪ್ರವಾಹದ ಸದ್ದು ಲಾವಣಿಯ ಹಾಡಿನಂತೆ ಕೇಳಿಬರತೊಡಗಿತು.

ಅರ್ಧ ತಾಸು ಹಾಗೆ ಕಳೆದಬಳಿಕ ,ತನ್ನ ಬರವನ್ನೇ ಎದುರುನೋಡುತ್ತ ಗುಡಿಸಲಿನಲ್ಲಿ ಕುಳಿತ ಅಜ್ಜನ ನೆನಪು ಬಂತು ಗಿರಿಯನಿಗೆ. ಬಾಲಿಯ ಆಲಿಂಗನದಿಂದ ದೂರವಾಗಿ ಮೇಲಕ್ಕೇಳಲು ಪ್ರಯತ್ನಿಸಿದ. ಆಷ್ಟು ಬೇಗ ಅವನನ್ನು ಬಿಡುವ ಮನಸ್ಸು ಅವಳಿಗಿದ್ದಂತೆ ತೋರಲಿಲ್ಲ.

" ಯಾಕ ಅವಸರಾ ಮಾಡತೀಯೋ ? " ಎಂದು ಅವಳು ಬೇಸರದ ಧ್ವನಿಯಲ್ಲಿ ಕೇಳಿದಳು.

" ಹೊತ್ತಾತು ಬಾಲೀ. ಹೊಲದಾಗ ಅಜ್ಜ ಕಾಯುತಾ ಕುಂತಾನ."

" ಕುಂತರ ಕುಂತಿರತಾನ. ನೀಯೇನ ಅವನ ಹೇಣತಿಯೇನ ಅವಸರಾ ಮಾಡಾಕ ? "

" ಇನ್ನs ಉಂಡs ಇಲ್ಲ ಬಾಲೀ. "

" ಉಂಡಿಲ್ಲಾ ? " ಎನ್ನುತ್ತ ಅವಳು ನಗತೊಡಗಿದಳು.

" ಇಲ್ಲ ಬಾಲೀ. ಮುದುಕಿಗೆ ಮಣ್ಣು ಕೊಟ್ಟು ಇದೇ ಈಗ ಬಂದಿದ್ದಿನಿ. "

" ಮುದುಕಿ ! " ಎನ್ನುತ್ತ ಬಾಲಿ ಎದ್ದು ಕುಳಿತಳು. " ಅವಳ ಹಂತೀಲಿ ಬಾಳ ಗಂಟು ಇತ್ತಂತ. ಇನ್ನಮ್ಯಾಲ ಅದೆಲ್ಲಾ ಸಿಗತೈತಿ ನೋಡು ಅವರಿಗೆ ! "

" ಸಿಕ್ಕರ ಸಿಗಲೀಳ. ನಮಗ್ಯಾಕ ಅದೆಲ್ಲಾ ?" ಎಂದು ಹೇಳುತ್ತ ಗಿರಿಯ ಎದ್ದು ನಿಂತ. " ಇನ್ನ ಈ ದೋತರಾ ಬ್ಯಾರೆ ಒಣಗಿಸಾಕಬೇಕಲ್ಲ ?"

" ನಿನ್ನ ದೋತರದ್ದೇನ ಹಚ್ಚೀದಿ ? ನನ್ನ ಸೀರಿ ಒಣಗಾಕಬೇಕಲ್ಲಾ? ಹ್ಯಾಂಗ ಮಾಡೂದು ? ಕಪಾಟೀ ಹಾಕಿ ಆ ದೋತರಾ ತಾ ಇಲ್ಲಿ. ಅದನ್ನುಟ್ಟುಕೊಂಡು ಇದನ್ನ ಒಣಗಿಸಿ ನಿನ್ನ ದೋತರಾ ತಂದುಕೊಡತೀನಿ...."

ಗಿರಿಯ, ಧೋತರವನ್ನು ಬಿಚ್ಚಿ ಅವಳಿಗೆ ಕೊಟ್ಟು ಅಂಗಿ ತೊಟ್ಟುಕೊಳ್ಳುತ್ತ ಹೊಲದ ಕಡೆ ನಡೆದ. ಬಾಲಿ ತೃಪ್ತಿಯ ನಗೆ ತುಳುಕಿಸುತ್ತ ಸೀರೆ ಕಳೆಯುತೊಡಗಿದಳು.

ಮೊಮ್ಮಗನ ಬರವನ್ನೇ ಎದುರು ನೋಡುತ್ತಲಿದ್ದ ಅಜ್ಜ, ಅವನನ್ನು ಕಂಡೊಡನೆಯೆ— " ಇಷ್ಟ್ಯಾಕ ತಡಾ ಆತೋ ? " ಎಂದು ಕೇಳಿದ.

ಅಜ್ಜನ ಪ್ರಶ್ನೆಗೆ ಏನು ಉತ್ತರವೀಯುವುದೆಂದು ಯೋಚಿಸುತ್ತ ಒಂದು ಕ್ಷಣ ಸುಮ್ಮನೆ ನಿಂತಿದ್ದು, ಅನಂತರ ಗಿರಿಯನೆಂದ: " ಬಾಲಿ ಮಡುವಿನಾಗ ಮುಳುಗಾಕಹತ್ತಿದ್ದಳು. ಅವಳನ್ನ ಉಳಿಸಾಕ ನಿಂತು ಹೊತ್ತಾತು. "

" ಬಾಲಿ ? "

" ಗಿಡ್ಡನ ಹೇಣತಿ. "

"ಇಲ್ಲೀ ತನಕ ಯಾಕ ಬಂದಿದ್ದಳಂತ ಆಕಿ?"

"ಎಮ್ಮಿಗೆ ನೀರು ಕುಡಿಸಾಕ ಬಂದವಳು ಮಡದಾಗ ಬಿದ್ದಳು........ ಎತ್ತಿ ತಗದು ಬಂದಿನಿ. ಸೀರಿ ಎಲ್ಲಾ ತೋಯಿತಲ್ಲ. ನನ್ನ ಧೋತರಾ ಕೊಟ್ಟು ಬಂದೀನಿ. ಸೀರಿ ಒಣಗಿಸಿದ ಮ್ಯಾಲ ಬರ್ತಾಳ ಧೋತರಾ ಕೊಡಾಕ. ಏಳಜ್ಜ, ಕೈ ತೊಳಕೊ," ಎಂದ ಗಿರಿಯ.

ಅವನಿಗಾಗ ತುಂಬ ಹಸಿವೆಯಾಗಿದ್ದರೂ ಸಹ ಬಾಲಿಯನ್ನು ಬಿಟ್ಟು ರೊಟ್ಟಿ ತಿನ್ನಬೇಕಾದರೆ ಹೇಗೆ ಹೇಗೋ ಅನ್ನಿಸತೊಡಗಿತು. ಅವಳ ಸೀರೆ ಒಣಗುವ ವರೆಗೂ ಕುಳಿತಿದ್ದು ಅವಳನ್ನು ಊಟಕ್ಕೆ ಕರೆದು ತಂದಿದ್ದರೆ ಚೆನ್ನಾಗುತ್ತಿತ್ತು ಎಂದೂ ಅವನಿಗೆನ್ನಿಸಿತು. ತಿಂದ ಹಣ್ಣಿನ ರುಚಿಯನ್ನು ನೆನೆದು ನಾಲಗೆ ಚಪ್ಪರಿಸಿಕೊಳ್ಳುವ ಹಾಗೆ ಲಕ್ಕಿಯ ಪೊದೆಯ ನಡುವೆ ತಾನು ಅವಳೊಡನೆ ಏಕವಾಗಿ ಬೆರೆತು ಅನುಭವಿಸಿದ ಸುಖವನ್ನು ಸ್ಮರಿಸಿ ಮನಸ್ಸಿನಲ್ಲೇ ಪುಲಕಿತನಾಗತೊಡಗಿದ ಗಿರಿಯ. ಅವಳನ್ನೂ ಜತೆಯಲ್ಲಿ ಕರೆದು ಕೊಂಡು ಬರಬೇಕಾಗಿತ್ತು. ತನ್ನ ಪಕ್ಕದಲ್ಲಿ ಕೂಡ್ರಿಸಿಕೊಂಡು ರೊಟ್ಟಿ ತಿನ್ನ ಬೇಕಾಗಿತ್ತು. ಎಂಥ ಬುದ್ಧಿಗೇಡಿ ತಾನು! ಆಗಲೇ ಈ ಯೋಚನೆ ಹೊಳೆ ಯಲಿಲ್ಲವಲ್ಲ ತನ್ನ ತಲೆಗೆ!

ತಾವು ಊಟ ಮುಗಿಸುವುದರೊಳಗಾಗಿ ಅವಳು ಬರಬಹುದೆಂದು ಗಿರಿಯ ನಿರೀಕ್ಷಿಸುತ್ತಿದ್ದ. ಅವಳು ಬರಲಿಲ್ಲ. ಊಟ ಮುಗಿಸಿ ತಂಬಾಕು ಸೇದುತ್ತ ಅಜ್ಜ ಮೊಮ್ಮಗ ಇಬ್ಬರೂ ಮಾತನಾಡುತ್ತ ಕುಳಿತರು. ಒಂದು ಗಂಟೆ ಕಳೆದರೂ ಬಾಲಿ ಬರಲೇ ಇಲ್ಲ.

"ಆ ಹುಡಿಗಿ ಯಾಕ ಬರಲಿಲ್ಲ ಇನ್ನs? ದೋತರಾ ತಕೊಂಡು ಹೋಗಿಬಿಟ್ಟಳೋ ಏನು ಮಣ್ಣೋ" ಎಂದ ಅಜ್ಜ.

"ಹಂಗೆಂಗ ಒಯ್ಯುತಾಳ!"

"ಒಳೆ ಗಂಡುಬೀರಿ ಹುಡಿಗಿ ಅದು ಗಿರಿಯ. ದೋತರಾ ಅಷ್ಟs ಯಾಕ, ನಿನ್ನs ಒಯ್ದಾಳ ಆಕಿ!" ಎಂದು ನುಡಿದು ಅಜ್ಜ ನಗತೊಡಗಿದ.

"ಒಯ್ದಾಳ ಯಾಕ, ಒಯ್ದs ಬಿಟ್ಟಾಳ," ಎಂದು ಮನಸ್ಸಿನಲ್ಲೇ ಹೇಳಿಕೊಳ್ಳುತ್ತ ಗಿರಿಯನೂ ನಕ್ಕ.

"ಪ್ರತ್ಯಕ್ಷ ಬಂದ ಹೆಣ್ಣು. ಹಿಂಗೆಲ್ಲ ಎವ್ವಾ ಮೇಸುತಾ ತಿರುಗ ಬಾರದು. ಆ ಭೀಮುಗ ಬುದ್ಧಿ ಇಲ್ಲ. ಸೊಸೀನ್ನ ತವರಿನಾಗ ಬಿಟ್ಟು ಕುಂತಾನ."

ಗಿರಿಯ ಕುತೂಹಲದಿಂದ ಕೇಳಿದ: "ಬಾಲೀನ್ನ ಹಂಗs ಯಾಕ ಬಿಟ್ಟಾರಂತ ಅಜ್ಜಾ ?"

"ಏನೋಪಾ ಯಾಂಬಲ್ಲ! ಮಂದಿ ಏನೇನೋ ಆಡಿಕೊಂತಿರತಾರ. ಅದರಾಗ ಏಸೊಂದು ಖರೇವ್ರೋ ಏಸೊಂದು ಸುಳ್ಳೋ ಮಾದೇವಗs ಗೊತ್ತು."

"ಹಿಂಗs ಏಸು ದಿನಾ ಅಂತ ತವರಿನಾಗ ಇರಬೇಕು ಬಾಲಿ? ಉಡ್ಕೀ ಮಾಡಿಕೊಳ್ಳಾಕ ಬರೂದಿಲ್ಲೇನ?"

"ಬಂದೀತು....ಬಂದೀತು...." ಎಂದು ನುಡಿದು, ಅಜ್ಜ ನಗುನಗುತ್ತಾ ಕೇಳಿದ:

"ಯಾಕ ಗಿರಿಯಾ? ಬಾಲಿ ಏನಾರ ಮಾಟಾ ಮಾಡಿ ಕಳಿಸಿವಳೋ ಏನ ನಿನಗ? ನೀನs ಉಡಿಕಿ ಆಗಬೇಕಂತೀಯೇನ ಆಕೀನ್ನ?"

ಗಿರಿಯನಿಗೆ ಬಲು ನಾಚಿಕೆಯಾಯಿತು. ಎತ್ತುಗಳಿಗೆ ಮೇವು ಹಾಕುವ ನೆವದಿಂದ ಅವನು ಎದ್ದು ಮಾಪಿನ ಗಿಡದ ಕಡೆ ನಡೆದ.

ಮತ್ತೆ ಎರಡು ಗಂಟೆಗಳಷ್ಟು ಸಮಯಉರುಳಿದರೂ ಬಾಲಿ ಆಗಮಿಸ ಲಿಲ್ಲ. ತನ್ನ ಧೋತರವನ್ನು ತೆಗೆದುಕೊಂಡೇ ಹೊರಟು ಹೋಗಿರಬೇಕು ಆ ಗಂಡುಬೀರಿ, ಇನ್ನಾವ ಆಟ ಹೂಡಿರುವಳೋ ಆಕೆ....ಎಂದು ಯೋಚಿಸುತ್ತ ಗಿರಿಯ ಗಿಡದ ನೆಳಲಲ್ಲಿ ಮಲಗಿಕೊಂಡಿದ್ದು ಬಿಸಿಲಿನ ಉಗ್ರತೆ ಕಡಿಮೆ ಯಾಗುತ್ತ ಬಂದ ಬಳಿಕ ಎದ್ದು ಮೆಣಸಿನಕಾಯಿಗಳನ್ನು ತಿರುವಿ ಹಾಕ ತೊಡಗಿದ.

ಹೊತ್ತು ಮುಳುಗುವ ವೇಳೆಗೆ, ಆತ ಮನೆಯ ಕಡೆ ಹೊರಡುವ ಸಿದ್ಧತೆಯಲ್ಲಿದ್ದಾಗ ಸಾಹುಕಾರ ಧರ್ಮಣ್ಣಾ ತಮ್ಮ ಹೊಲದ ಕಡೆಗೇ ಬರುತ್ತಿ ದ್ದುದನ್ನು ಕಂಡು ಒಂದು ನಿಮಿಷ ತಡೆದು ನಿಂತ.

ಕಣದ ಹತ್ತಿರ ಬರುತ್ತಾ ಧರ್ಮಣ್ಣನೆಂದ: "ಏನು ಗಿರಿಯಾ, ದಗದ ಮುಗೀತೇನ?"

" ಎಂಥಾ ದಗದರೀ ಧಣೇರs ? ಈ ಚೋಟುದ್ದ ಹೊಲದಾಗಿನ ದಗದ ಆದ್ರೂ ಏಸು ! ಬರ್‍ರಿ, ಕುಂಡರ್‍ರಿ, " ಎಂದು ಹೇಳುತ್ತಾ ಅಜ್ಜ ಕಂಬಳಿಯನ್ನು ಹಾಸಿ ಸಾಹುಕಾರನನ್ನು ಸ್ವಾಗತಿಸಿದ.

ಧರ್ಮಣ್ಣನೇನೂ ಅಂಥ ಸಿರಿವಂತನಲ್ಲ. ಇಪ್ಪತ್ತೈದು ವರ್ಷಗಳಿಗೆ ಮೊದಲು ಅವನಲ್ಲಿ ಒಂದು ಬಿಡಿಗಾಸೂ ಇರಲಿಲ್ಲ. ಹೆಂಡತಿಯ ಕೊರಳಿಲ್ಲಿದ್ದ ಒಂದೆರಡು ಒಡವೆ ಮಾರಿ ಆತ ಸಣ್ಣದೊಂದು ಕಿರಾಣಿ ಅಂಗಡಿ ಹಾಕಿದ. ಅದನ್ನೇ ಬೆಳಸುತ್ತ ಬಂದು ಅಲ್ಪಸ್ವಲ್ಪ ಹಣ ಮಾಡಿಕೊಂಡ ಬಳಿಕ ಇದ್ದಲಿಯ ಕಂಟ್ರಾಕ್ಟು ಹಿಡಿದು ಅದರಲ್ಲಿ ಲಾಭ ಮಾಡಿಕೊಂಡ. ಯುದ್ಧ ಕಾಲದಲ್ಲಿ ಸಕ್ಕರೆ, ಸೀಮೆಯೆಣ್ಣೆ, ಬಟ್ಟೆ ಮೊದಲಾದವುಗಳ ಕಳ್ಳ ವ್ಯಾಪಾರ ನಡಸಿ ಸಾವಿರಾರು ರೂಪಾಯಿ ಸಂಪಾದಿಸಿ ಇನಾಮುದಾರರಿಂದ ಹೊಲ ಕೊಂಡುಕೊಂಡದ್ದಲ್ಲದೆ ದೊಡ್ಡದೊಂದು ಮನೆಯನ್ನೂ ಕಟ್ಟಿಸಿದ. ಯುದ್ಧಾನಂತರದ ದಿನಗಳಲ್ಲೂ ಅವನ ಅಂಗಡಿಗೆ ಲಾಭವಾಗುವುದು ನಿಲ್ಲಲಿಲ್ಲ. ಧರ್ಮಣ್ಣ ಮತ್ತೊಂದು ಹೊಲ ಕೊಂಡುಕೊಂಡ. ಅಂದಿನಿಂದ ಹಳ್ಳಿಯವರು ಅವನನ್ನು ' ಸಾಹುಕಾರ ' ' ಧಣಿಯು ' ಎಂಬುದಾಗಿ ಕರೆಯುತ್ತ ಬಂದಿದ್ದರು.

" ಮತ್ತೇನ ಮುದುಕಾ, ಹೆಂಗಿದ್ದೀ ? " ಎನ್ನುತ್ತಾ ಧರ್ಮಣ್ಣ ಕಂಬಳಿಯ ಮೇಲೆ ಕುಳಿತುಕೊಂಡು ಹೊಲದ ಮೇಲೆಲ್ಲ ದೃಷ್ಟಿಯನ್ನು ಓಡಿಯಾಡಿಸಿದ.

" ಏನೋ, ಹಿಂಗ ಆದೀನಿ ನೋಡ್ರಿ ಧಣೇರs. ವಯಸ್ಸಾತು. ಮುದುಕ ಆದಿನಿ. ಎಲ್ಲಾ ಆತು. "

" ಹೊಲಾ ಸಣ್ಣದಪ್ಪ ಬಹಳ. ನೀ ಹೇಳೂದು ಖರೇ. ಇದರಾಗ ಏನು ದಗದ ಆದೀತು ? ನಿನ್ನ ಮೊಮ್ಮಗನ್ನ ನೋಡಿದರ ಇಂಥಾ ನಾಕು ಹೊಲದಾಗ ದುಡಿಯುವವನಂಗ ಅದಾನ. ಹಾ, ಏನಂತೀ ? "

ಮುದುಕನ ಮುಖದ ಮೇಲೆ ಆನಂದ-ಅಭಿಮಾನ ಬೆರೆತ ನಗೆ ಹರಡಿತು. ಆವನೆಂದ: " ದುಡಿದಾನು ಅನ್ನರಿ ಧಣೇರs ಆದರs ಈಗಿನ ದಿನದಾಗ ಹೊಲಾ ಎಲ್ಲಿ ಸಿಗತಾವು ? "

" ಸಿಗತಾವೆಲ್ಲಿ ಅನ್ನುತಾ ಹಿಂಗs ಕುಂತರ ಅವೇನು ತಾವಾಗೇ ಬರುತಾವೇನೋ ಮಳ್ಳs ? "

" ಮತ್ತs ? "

" ಅಲ್ಲಿ ಇಲ್ಲಿ ಕೇಳಿ ನೋಡ್ತಿರಬೇಕು. ಎಲ್ಲ್ಯಾದರೂ ಖಾಲಿ ಬಿದ್ದಾವೋ ಏನು ನೋಡುತಿರಬೇಕು. "

" ಹೂಂ. ನೆನಪಾತು ಈಗ. ನಿನ್ನೆ ಭೀಮನ ಹೊಲಾ ಕಬಜಾ ತಗೊಂಡಿರಂತಲ್ಲ ? "

" ತಗೊಳ್ಳದs ಬಿಡುತೀನೇನ ? ಎಂಥಾ ಸೊಕ್ಕಂತೀ ಅವಗ ? ನಾಕು ವರಸಾತು, ಪಾಳೇನs ಕೊಡಾಕಿಲ್ಲ. ಕೇಳಿ ಕೇಳಿ ಬ್ಯಾಸತ್ತು ದಾವೆ ಹಾಕಬೇಕಾತು. ಮಕ್ಕಳಿಬ್ಬರೂ ದೊಡ್ಡವರಾಗ್ಯಾರ, ಹಿರ್‍ಯಾಂವ ಪೈಲ್ವಾನ ಅದಾನ ಅಂತ ದಿಮಾಕು ಅವಗ. ಅದರಾಗ ಆ ಕಿಡಿಗೇಡಿ ಕಾಮ್ಯಾಂದು ಬ್ಯಾರೆ ಕಲಿಸೂಕಿ. ಊರಾಗ ತಮ್ಮ ವಿರುದ್ಧ ಹೋಗಾಕ ಯಾರಿಗೂ ಧೈರ್‍ಯೇ ಇಲ್ಲಂತ ಬಡಿವಾರ ಕೊಚ್ಚಿಕೊಂತ ತಿರುಗತಿದ್ದರು. ಒಮ್ಮೆ ಇಳಿದಂ ಗಾತು ಅವರ ಸೊಕ್ಕು. "

ಮುದುಕ ಮಾತನಾಡಲಿಲ್ಲ. ಧರ್ಮಣ್ಣನ ಮಾತು ಆಲಿಸುತ್ತ ಸುಮ್ಮನೆ ಕುಳಿತಿದ್ದ. ಧರ್ಮಣ್ಣನೇ ಮತ್ತೆ ಹೇಳಿದ:

" ಸರಕಾರದವರು ಸೆರೇ ಕುಡೀಬಾರದಂತ ಕಾಯ್ದೆ ಮಾಡಿ ಬಹಾಳ ಚಲೋ ಕೆಲಸಾ ಮಾಡಿದರು ನೋಡು ಮುದುಕಾ. ಈ ಕಾಯ್ದೆದಿಂದಲೇ ಕಾಮ್ಯಾನ ಗುಂಪಿನ ಸೊಕ್ಕು ಅರ್ಧಕ್ಕರ್ಧ ಇಳಿದಂಗಾತು. "

" ಅದೆಂಗ ಇಳಿದೀತು ಧಣೇರs ? ಕಾಯ್ದೆ ಬಂದದ್ದೂ ಅವರಿಗೆ ಲಾಭನೇ ಆತಲ್ಲ ? " ಎಂದ ಗಿರಿಯ.

ಧರ್ಮಣ್ಣ ಅವನ ಕಡೆ ತಿರುಗಿ ನಗುತ್ತ ನುಡಿದ:

" ಲಾಭ ಆತು ಅಂತೀಯಾ ? ಆತು ಅನ್ನೂದೂ ಖರೇ. ಸೆರೇಬಂದಿ ಕಾಯದೆ ಬರದಿದ್ದರ ಕಾಮ್ಯಾ ಭಟ್ಟಿಸೆರೇದ ಉದ್ಯೋಗ ಹೂಡಾಕ ಬರ್‍ತಿರಲಿಲ್ಲ ಖರೆ. ಖರೆ. ಆದರs ಮೊದಲಿನ ಹಂಗ ಹಾಡೇಹಗಲು ಕುಡಿದು ಊರಾಗ ಎಲ್ಲಾರನೂ ಅಂಜಿಸಿಕೊಂತ ತಿರುಗತಿದ್ದರಲ್ಲಾ ಅವರು--ಅದೆಲ್ಲಾ ನಿಂತಿ ತಲ್ಲ ? "

" ಮೊದಲಿನ ಹಂಗ ಈಗ ಗೊಂದಲಾ ಹಾಕೂಹಂಗಿಲ್ಲ. ಅದಷ್ಟು ಖರೆ. "

"ಅದೇನು ಸಣ್ಣ ಮಾತೇನೋ ಮುದುಕಾ! ನಿನಗೂ ಗೊತ್ತೈತಲ್ಲಾ, ಈ ಕುಡುಕರ ಮ್ಯಾಳದ ಕಾಟದಿಂದ ನಮ್ಮಂಥವರು ಹಳ್ಳಿಯೊಳಗ ಬಾಳೇ ಮಾಡಿಕೊಂಡಿರೂದs ತ್ರಾಸ ಆಗಿತ್ತು. ಇಪ್ಪತ್ನಾಲ್ಕು ತಾಸೂ ಕುಡಿಯೂವೇನು, ಹೊಲಸು ಹೊಲಸು ಬೈಗಳಾ ಬೈಯತಾ ಓಣೀ ಓಣೀ ತಿರುಗೂವೇನು, ಕುಡಿಯೂದಕ್ಕ ರೊಕ್ಕಾ ಕೊಡಿರಂತ ಧಮಕೀ ಹಾಕೂವೇನು, ಕೊಡೂದಿಲ್ಲ ಅಂದವರ ಅಂಗಡಿಯ ಮ್ಯಾಲ ಮನೀ ಮ್ಯಾಲ ಕಲ್ಲು ತೂರುವವೇನು, ಬಣವಿಗೋ ಗುಡಿಸಲಕೋ ಬೆಂಕೀ ಹಚ್ಚುವವೇನು, ಸಿಕ್ಕವರನ್ನು ಹಿಡಿದು ಬಡಿಯೂದೇನು, ಹೆಂಗಸರ ಮೈಮ್ಯಾಲ ಹೋಗೂದೇನು— ಆಹಾ, ಅವರನ್ನು ಕೇಳುವವರು ಯಾರಿದ್ದರು ಮುದುಕಾ ಹಳ್ಳಿಯೊಳಗ? ಅವರ ವಿರುದ್ಧ ದನಿ ಎತ್ತುವರು ಯಾರಿದ್ದರು?"

"ಪೋಲೀಸರs ಅವರನ್ನ ಕೆಣಕೂದಕ್ಕ ಅಂಜತಿದ್ದರಲ್ಲರೀ. ಇನ್ನ ಊರವರೇನು ಮಾಡ್ಯಾರು?"

"ಹಾಂ....ಹಾಂ.... ಖರೇ ಹೇಳಿದಿ. ಪೋಲೀಸರು....ಪಾಪ........ ಪೋಲೀಸರಾದರೂ ಏನ ಮಾಡ್ಯಾರು ಈ ಪುಂಡರ ಗುಂಪಿಗೆ? ಹದಿನೈದು ಹಳ್ಳಿಗಳಿಗೆಲ್ಲಾ ಕೂಡಿ ಇರೂದು ಒಂದs ಒಂದು ಪೋಲೀಸ್ ಠಾಣೆ. ಅದರಾಗ ಇರುವವರು ಮೂರು ಮಂದಿ ಪೋಲೀಸರು. ಬಂದೂಕು ಇಲ್ಲಾ, ಹತ್ಯಾರ ಇಲ್ಲಾ. ಹದಿನೈದು ಹಳ್ಳ್ಯಾಗಿನ ಕುಡುಕರ ಬಂದೋಬಸ್ತಿ ಈ ಮೂರು ಮಂದಿ ಏನಂತ ಮಾಡಿಯಾರು? ಹೂಂ. ಕುಡುಕರದs ರಾಜ್ಯ ಆಗಿತ್ತಲ್ಲಾ ಆಗ?— ಕಾಯದೇ ಬಂದ ಮ್ಯಾಲ, ಹುಲಿ ಒಮ್ಮೆಲೆ ಇಲಿ ಆದಂಗ ಮನ್ಯಾಗ ಅಡಗಿಕೊಂಡರು ನೋಡು ಈ ಪುಂಡರೆಲ್ಲಾ. ಇವರ ಉಪದ್ರ ತಪ್ಪಿತು. ಸೊಕ್ಕು ಇಳೀತು."

"ಸರಿ ಕುಡಿಯೂದೇನೂ ನಿಂತಿಲ್ಲಲ್ಲಾ?

"ಇಲ್ಲ. ಅದು ಖರೇ. ಕಾಮ್ಯಾನಂಥವರೇ ಭಟ್ಟಿ ಸೆರೇನೂ ತಯಾರು ಮಾಡಾಕ ಹತ್ತಿದಾರ. ಅದೂ ಖರೇ. ಆದರೂ ಎಲ್ಲಾ ಕದ್ದು ಮುಚ್ಚಿ ನಡೀಬೇಕು. ಕುಡಿದರೂ ಗದ್ದಲ ಮಾಡುವಂಗಿಲ್ಲ. ಕಾಟ ತಪ್ಪಿತು. ಈ ಕಾಯದೇ ಇರದಿದ್ದರ ಭೀಮ್ಯಾನ ಕೈಯಿಂದ ನನಗ ಹೊಲಾ ಸಿಗೂದು ಎಲ್ಲಾರೆ ಶಕ್ಯ ಆಗತಿತ್ತೇನು?"

"ಇನ್ನೇನು ಅದು ನಿಮ್ಮ ಕೈಯಾಗs ಬಂದಂಗಾತೇನ್ರಿ ?"

"ಬಂದಂಗs ಅನ್ನು. ಒಮ್ಮೆ ಕಬಜಾ ಬಂತ ಅಂದರ ಗೆದ್ದಂಗs. ಭೀವ್ಯಾ ಅಪೀಲು ಮಾಡತಾನಂತ. ಮಾಡಲೊಲ್ಲನ್ಯಾಕ. ಅದರಾಗೂ ಗೆದಿಯಾಕ ಬಂದೀತು. ಈಗ ಮುಂದಿನ ವ್ಯವಸ್ಥಾ ಮಾಡಬೇಕಲ್ಲಾ ?"

"ಏನ ಮಾಡಬೇಕಂತ ಮಾಡೀರಿ ?"

"ಅದನ್ನs ವಿಚಾರ ಮಾಡುತಾ ಇದೀನಿ ಮುದುಕಾ. ಟೆನನ್ಸೀ ಕಾಯದೇ ಪ್ರಕಾರ ಬಿಡಿಸಿಕೊಂಡ ಹೊಲಾ ಬ್ಯಾರೆಯವರಿಗೆ ಹಚ್ಚಾಕ ಬರೂದಿಲ್ಲ. ಮನೀಲೇ ಮಾಡಿಸಬೇಕಾಗುತ್ತೈತಿ."

"ಮನೀಲೇ ಅಂದರs ? ನೀವs ಕುರುಪೀ ಹಿಡೀತಿರೇನ್ರಿ ?

"ನನಗ್ಹ್ಯಾಂಗ ಸಾಧಿಸೀತೋ ಆದೆಲ್ಲಾ ? ಅಂಗಡ್ಯಾಗ ಕುಂತು ವ್ಯಾಪಾರ ಮಾಡಿದವಗ ಹೊಲದಾಗ ದುಡ್ಯಾಕ ಹೆಂಗ ಬಂದೀತು ? ಆಳು ಹಚ್ಚಿ ಮಾಡಿಸಬಹುದು. ಆದರs ಅದೂ ಯಾಕೋ ನನ್ನ ಮನಸೀಗೆ ಬರೂದಿಲ್ಲ. ನಿನ್ನ ಮೊಮ್ಮಗನಂಥ ಹುರುಪಿನವಗ ಹೊಲಾ ಹಚ್ಚಬೇಕಂತ ವಿಚಾರ ಮಾಡೀನಿ. ನಿಮಗೂ ಸಾಕಷ್ಟು ಕೆಲಸ ಇಲ್ಲ. ನಿಮಗೂ ನಾಕು ದುಡ್ಡು ಸಿಗಲಿ, ನನಗೂ ನಾಕು ದುಡ್ಡು ಸಿಗಲಿ. ಆ, ಏನಂತೀ ?"

ಇನ್ನೊಂದು ಹೊಲ ಹಿಡಿಯಬೇಕೆಂಬ ಬಯಕೆ ಗಿರಿಯನಿಗೂ ಇತ್ತು ಎಷ್ಟೋ ವರ್ಷಗಳಿಂದ. ಮತ್ತೊಂದು ಹೊಲ ಮಾಡಿ ಸ್ವಲ್ಪ ಹಣ ಮಾಡಿಕೊಂಡು, ಇಂದೋ ನಾಳೆಯೋ ಬೀಳುವಂತಿದ್ದ ಹಳೆಯ ಮನೆಯನ್ನು ಕೆಡವಿಸಿ ಹೊಸ ಮನೆ ಕಟ್ಟಿಸಿ, ಮೊಮ್ಮಗನಿಗೆ ಮತ್ತೊಂದು ಮದುವೆ ಮಾಡಿ, ಅವರಿಬ್ಬರೂ ಆ ಹೊಸಮನೆಯಲ್ಲಿ ಸಂಸಾರ ಸಾಗಿಸುವದನ್ನು ಕಂಡು, ಮರಿಮಕ್ಕಳನ್ನು ನೋಡಿ ಪ್ರಾಣ ಬಿಡಬೇಕೆಂದು ಮುದುಕನೂ ಅನೇಕ ಸಲ ಯೋಚಿಸಿದ್ದ. ಆದರೆ ಹೊಲ ಹೊಲ ಎಂದು ಎಲ್ಲರೂ ಬಾಯಿ ಬಿಡುತ್ತಿದ್ದ ಆ ಕಾಲದಲ್ಲಿ ಹೊಲ ಸಿಗುವುದು ಬಹುಶಃ ಅಸಾಧ್ಯವೇ ಆಗಿದ್ದುದರಿಂದ ಅಜ್ಜ ಮೊಮ್ಮಕ್ಕಳ ಆ ಬಯಕೆ ಕೇವಲ ಬಯಕೆಯಾಗಿಯೇ ಉಳಿದಿತ್ತು. ಇಂದು ಆಕಸ್ಮಾತ್ತಾಗಿ, ತಾನಾಗಿಯೇ ಆ ಸಂದರ್ಭ ಒದಗಿ ಬಂದುದರಿಂದ ಅವರಿಬ್ಬರಿಗೂ ತುಂಬಾ ಹರುಷವಾಯಿತು.

" ನಾನೇನನ್ನೂದು ಧಣೇರs ? ನೀವು ಹೇಳಿದಾಂಗ ಮಾಡುತೀವಿ. ಯಾಕೋ ಗಿರಿಯಾ ? " ಎಂದ ಮುದುಕ.

ಗಿರಿಯ ಸುಮ್ಮನೆ ತಲೆ ಕೊಡವಿದ.

" ನಿನ್ನ ವ್ಯಾಲ ನನಗ ನಂಬಿಕಿ ಐತಿ ಮುದುಕಾ. ಬ್ಯಾರೆಯವರ ಹಾಂಗಲ್ಲ ನೀ. ಸೆರೆ-ಗಿರೆ ಕುಡಿಯೂದಿಲ್ಲ, ಲಫಂಗರ ಗುಂಪಿನ್ಯಾಗ ಕೂಡುವ ದಿಲ್ಲ. ಎಲ್ಲಾ ಗೊತ್ತೈತಿ ನನಗ. ಗಿರಿಯನೂ ನಿನ್ನಂಗs ಸಂಭಾವಿತನಾಂಗ ಅದಾನ ಅನ್ನೂದೂ ಗೊತ್ತೈತಿ. ಅದಕ್ಕs ಈ ಹೊಲಾ ನಿಮಗ ಹಚ್ಚುವದು ನಾ. ಹದಿನೈದು ಸಾವಿರ ರೂಪಾಯಿ ಆ ಇನಾಮುದಾರನ ಮುಂದ ಸುರುವಿ ಖರೀದಿ ಮಾಡಿದ ಹೊಲಾ. ಇದರಾಗ ನನಗ ಏನಾರ ಬರಾಕ ಬೇಕೋ ಬ್ಯಾಡೋ ? ಭೀಮ್ಯಾ ಪಾಳಿ ಕೊಟ್ಟುಕೊಂಡು ಸಂಭಾವಿತನಂಗ ಇದ್ದಿದ್ದರ ನಾಯೇನು ಬಿಡಿಸತಿರಲಿಲ್ಲ ಅವನ್ನ. ಆದರವ ಹಂಗ ಮಾಡಿದ. ನೀವೂ ಅವನಂಗ ಮಾಡುವದಿಲ್ಲ ಅನ್ನುವ ನಂಬಿಕಿಯಿಂದಲೇ ನಿಮಗ ಹಚ್ಚುತ್ತೀನಿ. "

" ನಂಬಿದವರಿಗೆ ನಾವೆಂದೂ ತಿರುಗಿ ಬೀಳೊದಿಲ್ಲ ಧಣೇರs. ?

" ಹೂಂ. ಹೂಂ. ನನಗೆಲ್ಲಾ ಗೊತ್ತೈತಿ. ಅದಕ್ಕs ನಿಮಗs ಹಚ್ಚಬೇಕಂತ ಮಾಡಿದ್ದು ನಾ. ಹೂಂ. ಅದೆಲ್ಲಾ ಆತು. ಪಾಳೀದ್ದು ಹೆಂಗ ಮಾಡೂದು ? "

" ನಿಮಗ ತಿಳಿದಂಗ ಮಾಡಿರಿ ಧಣೇರs " ಎಂದು ಮುದುಕ ತನಗೆ ಸಹಜವಾದ ಸರಳತೆಯಿಂದ ನುಡಿದ.

" ನೋಡು ಮುದುಕಾ. ಪಾಳೀ-ಗೀಳೀ ಅಂದರ ಸುಮ್ಮನ ಒಣಾ ತ್ರಾಸ ಆಗುತೈತಿ. ರುಪಾಯಿಯ ತಂಟೀ ಬ್ಯಾಡs ಬ್ಯಾಡ. ಬೆಳಿಯೊಳಗ ಅರ್ಧಾ ಪಾಲು ಕೊಟ್ಟು ಬಿಟ್ಟರ ಸಾಕು. "

" ಹಂಗs ಆಗಲಿ ಧಣೇರs. "

" ಹೂಂ. ಇನ್ನೊಂದು ಮಾತು. ಪಾಲಿನ ವ್ಯಾಲ ನಿಮಗ ನಾ ಹೊಲಾ ಹಚ್ಚಿರೂದು ನಮ್ಮ ನಿಮ್ಮಲ್ಲೇ ಇರಬೇಕು ಹಂ. ಯಾರಾದರೂ ಕೇಳಿದರ ಕೂಲಿ ತಕ್ಕೊಂಡು ಮಾಡುತೀವಿ ಅಂತ ಹೇಳಬೇಕು."

" ಹಂಗs ಹೇಳಿದರಾತು ಬಿಡ್ರಿ. ನಮ್ಮನ್ನ ಕೇಳೂದಕ್ಕಾದ್ರೂ ಯಾರು ಬರ್ತಾರ ? "

" ಏಯ್. ಹಂಗನ್ನಾಕ ಬರೂದಿಲ್ಲ. ಹೊಲದ ದಾವೆ ಇನ್ನೂ ಮುಗಿದಿಲ್ಲ. ಹುಷಾರಾಗಿರಾಕಬೇಕು. ಹೂಂ. ನಾಳೆಯಿಂದನs ಸುರೂ ಮಾಡಿ ಬಿಡತೀರೇನ ನೋಡ್ರಿ ಕೆಲಸಾ. ಮೊದಲು ಗಳೇ ಹೊಡದು ಬಿಟ್ಟರಾತು. "

" ಈ ಮೆಣಸಿನಕಾಯಿ ನಾಳೆ ಮನೀಗೆ ದಾಟಿಸತೀವಿ ನಾಡದರಿಂದ ಸುರೂ ಮಾಡೂಣ್ರೀ, " ಎಂದ ಗಿರಿಯ.

" ಹಂಗೇ ಮಾಡು. ನಾ ಜರಾ ಹಂಗs ತಿರುಗಾಡಿಕೊಂಡು ಬರ್ತೀನಿ" ಎಂದು ಹೇಳಿ ಧರ್ಮಣ್ಣ ಎದ್ದು ಹೊಳೆಯ ಕಡೆ ನಡೆದ. ಗಿರಿಯನೂ ಎತ್ತುಗಳನ್ನಟ್ಟಿಕೊಂಡು ಮನೆಗೆ ಹೊರಟ.

ಬೇಗ ಬೇಗ ಮನೆಗೆ ಬಂದು, ನವಣೆಯನ್ನ ಮಜ್ಜಿಗೆಯ ಅಂಬ್ರ ಅಟ್ಟು ಅವಸರವಸರವಾಗಿ ಊಟ ಮುಗಿಸಿ, ಎತ್ತುಗಳಿಗೆ ಮೇವು ಹಾಕಿ ಗಿರಿಯ ಹೊಲಕ್ಕೆ ಹಿಂದಿರುಗಿ ಬಂದು ಮುದುಕನನ್ನು ಮನೆಗೆ ಕಳಿಸಿದ. ಆ ವೇಳೆಗಾಗಲೆ ಶೈಗುಗಪ್ಪು ಪಸರಿಸುತ್ತಿತ್ತು. ಹವೆಯಲ್ಲಿನ ಉಷ್ಣತೆ ಕಡಮೆಯಾಗುತ್ತ ಬಂದು, ಚಳಿ ಹೆಚ್ಚತೊಡಗಿತ್ತು.

ಎಂದಿನಂತೆ ಕಣದಲ್ಲಿ ಉರಿಹಚ್ಚಿ, ಅದರ ಹತ್ತಿರ ಕುಳಿತುಕೊಂಡು ಬೀಡಿ ಸೇದತೊಡಗಿದ ಗಿರಿಯ. ಕಣ, ಹೊಲ, ಸುತ್ತಲಿನ ಪ್ರದೇಶ, ಎದುರಿನ ಗುಡ್ಡ ಎಲ್ಲವೂ ಎಂದಿನಂತೆಯೇ ಇತ್ತು. ಗಿರಿಯ ಮಾತ್ರ ಎಂದಿನಂತಿರಲಿಲ್ಲ. ಅವನ ಮನಸ್ಸಿನ ಶಾಂತಿ ಕದಡಿ ಹೋಗಿ ಒಂದು ಬಗೆಯ ಅತೃಪ್ತಿ ಅವನನ್ನು ಕಳವಳಕ್ಕೀಡು ಮಾಡಿತ್ತು.

ಗಿರಿಯ ತನಗೆ ತಾನೇ ಹೇಳಿಕೊಂಡ:

" ಏನ ಪುರಮಾಸಿ ಹೆಣ್ಣಾಲೇ ಅದು ! "

ಹತ್ತಿರದ ಮಾವಿನ ಗಿಡದಲ್ಲಿ ಗೂಡು ಕಟ್ಟಿದ್ದ ಹಕ್ಕಿಯೊಂದು ಧ್ವನಿ ತೆಗೆದು ಕೂಗಿತು. ಅದರೊಂದಿಗೆ ಗಿರಿಯನ ದೃಷ್ಟಿಯೆದುರಿಗೆ ಲಕ್ಕಿಯ ಪೊದೆಯೂ ಅದರ ಮೇಲಿನ ಬಸರಿಗಿಡವೂ ಬಂದು ನಿಂತುಕೊಂಡಂತಾಯಿತು. ಪೊದೆಯ ನಡುವೆ ಮಲಗಿದ್ದ ಬಾಲಿ....ಅವಳೊಂದಿಗೆ ತಾನು ಕಳೆದ ಸುಖದ ಸಮಯ. ಗಿರಿಯನ ಮನಸ್ಸು ಪುಟಿದೆದ್ದು ಆಕಾಶಕ್ಕೆ ನೆಗೆದಂತಾಯಿತು. ಕಾಲುಗಳನ್ನು ನೀಳವಾಗಿ ಚಾಚಿ ಕಂಬಳಿಯ ಮೇಲೆ ತಲೆಯನ್ನಿರಿಸಿ ಚಿಕ್ಕೆ

ಗಳನ್ನು ದಿಟ್ಟಿಸುತ್ತ ಆತ ಎಲ್ಲಿಯೋ ಎಂದೋ ಕಲಿತುಕೊಂಡಿದ್ದ ಲಾವಣಿಯೊಂದನ್ನು ಧ್ವನಿಯೆತ್ತಿ ಹಾಡತೊಡಗಿದ:

"ಗಿಡ್ಡ ಪೋರಿ ಮಡ್ಡ ಹೆಣ್ಣಿ ಮಟಕಣ್
ಕಣ್ಣ ತಿರವಿ ಚಕ್ಕಣ್
ನಿಂತ ನೀ ನಕ್ಕಣ್
ಉಳ್ಳತಾವ ಮುತ್ತಾ
ವಸ್ತಕಾರಿ ಪಟ್ಟಿ ವಾಲೀಗಂಟಿ ಮೂಗಿನಾಗ ಸರಜಾಮು ನತ್ತಾ
ಶ್ರೀ ಸಾನಿಥಮು ಪಥನೀಸ ಸರೀಗಮು ನಾರಿ ನಿನ್ನ ಗತ್ತಾ
ನನ್ನ ಕಂಡು ಹೋಗಬ್ಯಾಡ ಚದೆಣ್
ಓಡಿದ್ದಾಂಗ ಬೆದೆಣ್ ಕಾಲ್ಪುಣಿವಿ ಎತ್ತಾ."

ನೀರವವಾಗಿದ್ದ ವಾತಾವರಣದಲ್ಲಿ ಲಾವಣಿಯ ಹಾಡು ದುಮುದುಮಿಸಿ ಗುಡ್ಡದ ವರೆಗೂ ಹೋಗಿ ಹಿಂದಿರುಗಿ ಬರತೊಡಗಿತು. ಗಿರಿಯ ಮತ್ತೊಂದು ಬೀಡಿ ಹಚ್ಚಿ ಸೇದುತ್ತ ಸೀಳು ಧ್ವನಿಯಲ್ಲಿ ಹಾಡತೊಡಗಿದ:

"ಏನು ಮುಂಗಾರಿ ಮಳೀ ಹಾಂಗ ಸಿಡಲ್
ಬಿದ್ದಿತು ಖಡಲ್
ಎದೀ ಆಂತು ಧಡಲ್
ಆಗಿ ನಿಂತೆ ಮೂಕಾ
ನಿನ್ನ ಸುರತ ಕಂಡು ಮೈಮುರತ ನಿಂತ ಮಾತಾಡದ್ದಾರಿತ ತರ್ಕಾ
ಮತ್ತ ಯೂದ ಹಚ್ಚಿ ಶೋಧ ಮಾಡಿ ಕೇಳತೀನಿ ಒಂದ ಸೋಕಾ
ಕುಡು ಭರೋಸಾ ಮಾಡೂನು ಸರಸ
ಬೆಳ್ಳ ಬೆಳತನಕಾ
ಬೆಳ್ಳ ಬೆಳತನಕಾ ...... "

ಮುಂದಿನ ಚರಣ ನೆನಪಿಗೆ ಬರಲಿಲ್ಲ ಗಿರಿಯನಿಗೆ. "ಬೆಳ್ಳ ಬೆಳತನಕಾ" ಎಂದು ಎರಡು ಮೂರು ಸಲ ಹೇಳಿ, "ಥೂ, ಇವನಪ್ಪನ" ಎನ್ನುತ್ತ ಮೇಲಕ್ಕೆದ್ದು ಕುಳಿತ. 'ಬೆಳ್ಳಬೆಳತನಕ' ತನಗೆ ನಿದ್ದೆ ಹತ್ತುವುದೇ ಸಾಧ್ಯವಿಲ್ಲವೆಂದು ಅವನಿಗೆನ್ನಿಸಿತು. ಎದುರಿಗೆ ಉರಿಯುತ್ತಿದ್ದ ಬೆಂಕಿಯ ಜ್ವಾಲೆಗಳಲ್ಲಿ ಬಾಲಿಯ ಮುಖವೇ ಕಾಣಿಸಿದಂತಾಯಿತು.

"ಎಲಾ ಇವನ, ಎಷ್ಟು ಲಗೂ ಅವಳ ಹುಚ್ಚು ಹಿಡೀತು ನನಗ! ಅವಳೇನ ಮಾಟಾ ಮಾಡಿದಳೋ!" ಎಂದುಕೊಳ್ಳುತ್ತಾ ಆತ ಅಲ್ಲಿಂದೆದ್ದು

ಹೊಲದಲ್ಲಿ ಹಾಗೆ ಹೀಗೆ ತಿರುಗಾಡಿದ. ಲಾವಣಿಯ ಮುಂದಿನ ಚರಣಗಳು ಅವನ ನಾಲಗೆಯ ಮೇಲೆ ಕುಣಿಯತೊಡಗಿದ್ದುವು:

"ನಿನ್ನ ಎದೀ ಮ್ಯಾಲ ಕುಚಾಗಳು ಬುಗರಿ
ನಿಂತಾವು ನಿಗರಿ
ಗಂಡೆರಳಿ ಚಿಗರಿ
ಹಾಂಗ ನಿನ್ನ ರೂಕಾ
ಸಣ್ಣ ಸೀರೀ ಉಟ್ಟು ಓಣಿಗುಂಟ ಪೋರೀ ಎಷ್ಟು ಮಾಡತಿ ಮುರಕಾ
ನೀರ ಘೇರೀ ಹಾಂಗ ನಿರಗೀ ಒದ್ದು ನಾರಿ ನಡಿವುದು ನಾಜೂಕಾ...."

ಗಿರಿಯ ಅಸ್ವಸ್ಥ ಮನಸ್ಸಿನಿಂದ ಅತ್ತಿತ್ತ ತಿರುಗಿದ. ತಿರುಗುವುದೂ ಬೇಸರವಾಗಲು ಮತ್ತೆ ಬಂದು ಬೆಂಕಿಯ ಬಳಿ ಕುಳಿತುಕೊಂಡ. ಅಲ್ಲಿ ಕುಳಿತಿರುವುದೂ ಬೇಸರವಾಗಲು ಮತ್ತೆ ಎದ್ದು ಮಾವಿನ ಗಿಡದ ಹತ್ತರ ಹೋಗಿ ಇರುಳಕೀಟಗಳ ಹುಚ್ಚು ಗದ್ದಲವನ್ನು ಕೇಳುತ್ತ ನಿಂತ. ಅದೂ ಬೇಸರಕ್ಕಿಟ್ಟುಕೊಳ್ಳಲು, ಹೊಳೆಗೆ ಹೋಗಿ ನೀರು ಕುಡಿದು ಬಂದು ನಿದ್ರಿಸಲು ಯತ್ನಿಸಿದರಾಯಿತೆಂದುಕೊಂಡು ಅತ್ತ ಹೊರಟ.

ಹೊಳೆಯ ಬಳಿ ಬಂದು, ನೀರು ಕುಡಿಯುತ್ತಿದ್ದ ಹಾಗೆ ಅವನಿಗೆ ಹಠಾತ್ತಾಗಿ ತನ್ನ ಧೋತರದ ನೆನಪು ಬಂತು. ಅದನ್ನು ತೆಗೆದುಕೊಂಡು ಬರುವ ನೆವದಿಂದ ತಾನು ಕೋರಿಹಳ್ಳಿಗೆ ಹೋಗಿ ಬಾಲಿಯನ್ನು ಕಂಡು ಅವಳೊಂದಿಗೆ ಒಂದೆರಡು ಮಾತನಾಡಿ ಬಂದರೆ ಹೇಗೆ—ಎಂಬ ಯೋಚನೆ ಹೊಳೆಯಿತು. "ಎಲಾ ಇವನ, ಇಷ್ಟೊತ್ತು ಯಾಕ ಹೊಳೀಲಿಲ್ಲಲೇ ನನಗ? ಬಾಲಿ ಅದನ್ನು ಬೇಕಂತs ಒಯ್ದಾಳೋ ಏನೋ. ಧೋತರಾ ತರಾಕ ನಾ ಅಲ್ಲಿ ಹೋಗೇ ಹೋಗ್ತೀನಿ ಅಂತ ಅವಳ ಹಂಚಿಕೀನೋ ಏನೋ. ಬಲೆ ಬೆರಕಿ ಹುಡುಗಿ ಬಾಲಿ. ಆಗ ನನ್ನ ಬಯ್ದಾಂಗ ಆಟಾ ಮಾಡಿದಾಕಿ ಕಡೀಕ ಹೆಂಗ ಮಲಗಿಕೊಂಡಳಲ್ಲಿ........ರಾತ್ರಿಗೂ ನಾ ಬರಲಿ ಅಂತ ಅವಳ ಬಯಕಿಯೊ ಏನೊ. ಎಲಾ ಇವನ, ಎಂಥಾ ಧಡ್ಡನಪಾ ನಾ? ಆ ಹೆಣ್ಣು ಹುಡುಗಿಗೆ ತಿಳಿಯೂದು ನನಗ ತಿಳೀಲಿಲ್ಲಲಾ....!" ಎಂದು ತನಗೆ ತಾನೇ ಹೇಳಿಕೊಂಡ. "ಹೋಗಲೇ? ಹೋಗಿ ಒಂದ್ಯಾಡ್ತು ತಾಸು ಇದ್ದು ಬರಲೇನ?" ಎಂದು ತನ್ನನ್ನು ತಾನೇ ಕೇಳಿಕೊಂಡ. "ಹೆಂಗೂ ಕತ್ತಲಾಗ್ಯೆತಿ. ರಾತ್ರಿ ನಾ ಕಣದಾಗಿರತೇನಂತ ಎಲ್ಲಾರಿಗೂ ಗೊತ್ತೈತಿ. ಯಾರೂ ಇತ್ತ ಹಾಯೂ

ದಿಲ್ಲ. ಮೆಣಸಿನಕಾಯಿ ಹೋಗೂ ಅಂಜಿಕೀನೂ ಇಲ್ಲ. ಹೋಗಿ ಬಂದ ರಾತು " ಎಂದು ಹೇಳಿಕೊಳ್ಳುತ್ತ ಹೊಳೆಯನ್ನು ದಾಟಿ ಬಂದು ಹೊಲಗಳಲ್ಲಿ ಹಾಯ್ದು ಕೋಗಿಹಳ್ಳಿಯ ಕಡೆ ಭರದಿಂದ ಸಾಗಿದ.

ಆತ ಹಳ್ಳಿಗೆ ಬಂದು ಮುಟ್ಟುವಷ್ಟರಲ್ಲಿ ಮುಕ್ಕಾಲು ಪಾಲು ಮನೆಗಳ ಬಾಗಿಲುಗಳೆಲ್ಲ ಮುಚ್ಚಿಕೊಂಡಿದ್ದುವು. ಊರ ಹೊರಗಿನ ಓಣಿಯಲ್ಲೇ ಸಣ್ಣವ್ವನ ಮನೆಯಿತ್ತು. ಗಿರಿಯ ಒಂದೆರಡು ಬಾರಿ ಅದನ್ನು ನೋಡಿಯೂ ಇದ್ದನಾದುದರಿಂದ ಆ ರಾತ್ರಿಯಲ್ಲಿ ಅದನ್ನು ಹುಡುಕಲು ತೊಂದರೆಯೇನೂ ಆಗಲಿಲ್ಲ.

ಮುಚ್ಚಿದ್ದ ಬಾಗಿಲನ್ನು ಬೆರಳುಗಳಿಂದ ತಟ್ಟಿ ಆತ ಕೂಗುತ್ತಲೂ ಬಾಲಿಯೆ ಎದ್ದು ಬಂದು ಬಾಗಿಲು ತೆಗೆದಳು. ಒಳಗಡೆ ದೀಪವಿರಲಿಲ್ಲ. ಅವಳು ಬಾಗಿಲು ತೆಗೆದೊಡನೆ ಆಡುಗಳ ಮಲಮೂತ್ರಗಳ ವಾಸನೆ ಬೀಸಿ ಬಂದಿತು.

" ಇಂಥಾ ರಾತ್ರ್ಯಾಗ ಯಾಕ ಬಂದ್ಯೋ ? " ಎಂದು ಬಾಲಿ ಮೆಲ್ಲಗಿನ ಧ್ವನಿಯಲ್ಲಿ ಕೇಳಿದಳು.

" ನನ್ನ ದೋತರಾ ಹಂಗs ತಗೊಂಡು ಬರಬೇಕೇನ ಸೀ ? " ಗಿರಿಯ ತಡವರಿಸುತ್ತ ನುಡಿದ.

" ನಿನ್ನ ದೋತರ ? ನಂಗೇನ ಗೊತ್ತು ? "

" ಆ ? " ಎಂದು ಉದ್ಗಾರ ತೆಗೆದು ಗಿರಿಯು ಬೆರಗುಗೊಂಡು ನಿಂತು ಕೊಂಡ. ಬಾಲಿ ಮತ್ತೆ ಹುಡುಗಾಟಕ್ಕಾರಂಭಿಸಿದುದು ಸ್ಪಷ್ಟವಾಗಿತ್ತು.

" ಅತ್ತಿ ಎಲ್ಲಿದಾಳ ಬಾಲೀ ? "

" ಊರಾಗಿಲ್ಲ ಆಕಿ. "

ಗಿರಿಯನ ಎದೆ ವೇಗವಾಗಿ ಬಡಿದುಕೊಳ್ಳಲಾರಂಭಿಸಿತು. " ಹಂಗಾದರ ನಾ ಹೋಗುತೀನಿ " ಎಂದು ನುಡಿದು ಆತ ಹೊರಡಲು ಸಿದ್ಧನಾದ.

" ಹೋಗುತಿಯೇನ ? ಹೋಗು ಹಂಗಾದರ " ಎಂದಳು ಬಾಲಿ.

ಆತ ಗೊಂದಲದಲ್ಲಿ ಸಿಲುಕಿ ಬಿದ್ದು ತಲೆ ಕೆದರಿಕೊಳ್ಳತೊಡಗಿದ. ' ಹೋಗುತೀನಿ ' ಎಂದು ಹೇಳಿದುದಾಗಿದೆ. ' ಹೋಗು ' ಎಂದು ಅವಳೂ ಹೇಳಿಬಿಟ್ಟಳು. ಧೋತರವನ್ನೂ ಅವಳು ಕೊಡಲಿಲ್ಲ. ಮನೆಯಲ್ಲಿ ಬೇರೆ

ಯಾರೂ ಇಲ್ಲ, ಬಾಲಿಯೊಬ್ಬಳೇ ಒಬ್ಬಳು, ರಾತ್ರಿಯೆಲ್ಲಾ ಒಬ್ಬಳೇ ಒಬ್ಬಳು. 'ಹೋದರ ಹೋಗು' ಎಂದು ಆಕೆ ಹೇಳುವುದು ಮನಃಪೂರ್ವಕವಾದ ಮಾತಾಗಿರಬಹುದೇ? ಅಥವಾ, ಮಧ್ಯಾಹ್ನ ಹೊಳೆಯಮೇಲೆ ಆಟವಾಡಿ ದಂತೆ, ಈಗಲೂ ಆಕೆ ಆಟವಾಡುತ್ತಿರಬಹುದೇ ? ತಾನೀಗ ಹೊರಟು ಬಿಡು ವುದೇ ? ಅಥವಾ....ಅಥವಾ....

"ಓಂಗ ಬಾಗಿಲದಾಗ ನಿಂತರ ನೋಡಿದವರೇನಂದಾರು ? ಇಷ್ಟು ಕೂಡಾ ತಿಳಿಯೂದಿಲ್ಲಲ್ಲೋ ನಿನಗ ? ಎಂಥಾ ಬುದ್ಧಿಗೇಡಿ ಅದೀಯೋ ? " ಎಂದು ವ್ಯಂಗ್ಯ ಬೆರೆತ ಸ್ವರದಲ್ಲಿ ಬಾಲಿ ನುಡಿದಳು.

" ಅಂ....ಹಂ....ಅಂ.... " ಎನ್ನುತ್ತ ಗಿರಿಯ ಅಲ್ಲಿಂದ ಹೊರಟುಬಿಡಲು ಹೆಜ್ಜೆಯಿಡುತ್ತಿದ್ದಂತೆಯೆ ಅವಳು ಅವನ ಕೈ ಹಿಡಿದು ಮನೆಯೊಳಗಡೆ ಎಳೆದು ಕೊಂಡು ಬಾಗಿಲು ಮುಚ್ಚಿ ಚಿಲಕ ಹಾಕಿದಳು. ಕತ್ತಲೆಯಲ್ಲಿಯೆ ಅವನನ್ನು ನಡೆಸುತ್ತ ಪಡಸಾಲೆಯಲ್ಲಿದ್ದ ಹಾಸುಗೆಗೆ ಕರೆದೊಯ್ದಳು.

" ಎಂಥಾ ಧಡ್ಡ ಅದೀಯೋ ಗಿರಿಯಾ ನೀ ? ನಿಮ್ಮಪ್ಪನೂ ನಿನ್ನಂಥಾ ಕ್ವಾಣನೇ ಇದ್ದೋ, ಯಾಂಬಲ್ಲ ! " ಎಂದು ನುಡಿದು ಅವಳು ನಗತೊಡಗಿ ದಳು.

ಗಿರಿಯನೂ ನಗುತ್ತ ಹೇಳಿದ: " ನಿನ್ನಂಥಾ ಬೆರಕೀ ಹೆಣ್ಣಿನ ಮುಂದ ನಾವೆಲ್ಲಾ ಧಡ್ಡರs ಬಿಡು. "

" ಇಲ್ಲೀತನಕಾ ಬಂದೀದಿ ಯಾಕ, ಮನೀ ಒಳಗ ಸುದ್ಧಾ ಬರದs ಹಂಗs ಹೊಂಟೀದಿ ಯಾಕ ? ಏನ ಮಳ್ಳ ಅದೀಯೋ ನೀ ? "

" ಮತ್ತs ? ನೀ ಹೋಗು ಅಂದರ ಹೋಗಾಕs ಬೇಕಲ್ಲ ? "

" ಅರೆ ! ಇಷ್ಟು ದೂರದಿಂದ ಬಂದವನ್ನ ಹಂಗs ಕಳಿಸ್ತಾರೇನೋ ಯಾರರೆ ? ಅದರಾಗ ಮನ್ಯಾಗ ಬ್ಯಾರೆ ಯಾರೂ ಇಲ್ಲ ಇವತ್ತು.... "

ಕೆಲಹೊತ್ತು ಕಳೆದ ಬಳಿಕ ಗಿರಿಯ ಕೇಳಿದ:

" ನಾ ಇಲ್ಲಿ ಬಂದದ್ದು ಅತ್ತಿಗೆ ಗೊತ್ತಾದರ ಹೆಂಗ ಬಾಲಿ? "

"ಆದರ ಆತು, " ಎಂದು ಅವಳು ನಿರ್ಲಕ್ಷ್ಯದಿಂದ ನುಡಿದಳು.

" ಗಿಡ್ಡಗ ಗೊತ್ತಾದರ ? "

"ಆದರ ಆತು " ಬಾಲಿ ತಿರಸ್ಕಾರ ಬೆರೆತ ಧ್ವನಿಯಿಂದ ಹೇಳಿದಳು.

" ನಿನ್ನಂಥಾ ಹೇಣತಿ ಸಿಕ್ಕದ್ದು ಅವನ ಪುಣ್ಯಾ ಅನಬೇಕು ನೋಡು ಬಾಲೀ. ಅವಗೇನು ಧಾಡಿಯಾಗಿತ್ತು ನಿನ್ನ ಬಿಟ್ಟುಬಿಡಾಕ ? "

" ಅವಗ ಆದ ಧಾಡಿ ಬ್ಯಾರಿ. "

" ಅಂದರs "

ಬಾಲಿ ಸ್ವಲ್ಪ ಹೊತ್ತು ಸುಮ್ಮನಿದ್ದು ಅನಂತರ ಹೇಳಿದಳು:

" ಹೋಗಲಿ ಬಿಡು. ಅದೆಲ್ಲಾ ಯಾಕಂತ ನಿನಗ ? ಅವಗ ನಾ ಬ್ಯಾಡಾದಿನಿ. ನನಗ ಅವ ಬ್ಯಾಡಾದ. ಸಂಬಂಧ ಮುಗಿದಂಗಾತು. ಆದ ದ್ದೆಲ್ಲಾ ಚಲೋನs ಆತಲ್ಲ ? "

" ಮುಂದ ಹೆಂಗ ಬಾಲೀ ? ಎಷ್ಟು ದಿನ ಅಂತ ಹೀಂಗs ಇರಾಕಿ ? "

" ಅಂದರs ? " ಬಾಲಿ ಏರಿಸಿದ ಧ್ವನಿಯಲ್ಲಿ ಕೇಳಿಗಳು.

ಗಿರಿಯನಿಗೆ ಕೊಂಚ ಭಯವಾಗದಿರಲಿಲ್ಲ. ಬಾಲಿಯದು ಸಿಟ್ಟಿನ ಸ್ವಭಾವವೆಂದು ತೋರುತ್ತದೆ. ಅವಳು ಯಾವಾಗ, ಯಾವ ಮಾತಿಗೆ ಸಿಟ್ಟು ಮಾಡಿಕೊಳ್ಳಬಹುದೆಂಬುದನ್ನು ತಿಳಿದುಕೊಳ್ಳುವುದೂ ಕಷ್ಟ. ಎಚ್ಚರಿಕೆ ಯಿಂದ ಮಾತನಾಡುವುದು ತನಗೆ ತಿಳಿಯದು. ಮನಸ್ಸಿನಲ್ಲಿ ಬಂದ ವಿಚಾರ ವನ್ನು ಹಿಂದೆಮುಂದೆ ನೋಡದೆ ಆಡಿಬಿಡುತ್ತಾನೆ. ತನ್ನ ನೇರವಾದ ಮಾತಿ ನಿಂದ ಬಾಲಿಗೆ ಸಿಟ್ಟು ಬಂದಿತೋ ಏನೊ........

" ಅಂದರss....ಅಂದರss....ಹೀಂಗs ಎಷ್ಟು ದಿನಾಂತ ನೀ ತವರು ಮನ್ಯಾಗs ಇರುವಾಕಿ ಅಂತ ಕೇಳಿದಿನಿ. ಗಿಡ್ಡನ ಸಂಬಂಧ ಅಂತೂ ತೀರಿತು. ಮತ್ತೊಂದು ಮದುವೀ ಯಾಕಾಗಬಾರದು ? "

" ಮದುವಿ ? ಮತ್ತೊಂದು ಮದುವೀ ? " ಬಾಲಿ ನಗತೊಡಗಿದಳು: " ಮದುವೀ ಮಾತಾಡೂದಕ್ಕಂತs ಇಲ್ಲಿ ಬಂದಿದ್ದ್ಯೇ ಏನ ಮತ್ತ ? ಹಹ್ಹಹ್ಹಾ.... ಮದುವಿ.... "

ಗಿರಿಯ ತಬ್ಬಿಬ್ಬಾಗಿ ಉತ್ತರವಿತ್ತ: " ಹಂಗೇನೂ ಅಲ್ಲ ಬಾಲೀ........ ದೋತರಾ ಒಯ್ಯ್ಯಾಣಂತ ಬಂದಿದ್ದಿನಿ. "

" ಹಹ್ಹಹ್ಹಾ.... ದೋತರಾ ಒಯ್ಯ್ಯಾಣಂತ ಬಂದಿದ್ದಿ ? ಹಹ್ಹಹ್ಹಾ...."

ಅವಳ ನಗುವಿಗೆ ಕಾರಣವೇನೆಂಬುದೇ ಗಿರಿಯನಿಗೆ ತಿಳಿಯದಂತಾ ಯಿತು. ತರುಣಿಯರ ನಗೆಗೆ ಕಾರಣವೇನೂ ಅವಶ್ಯವಿಲ್ಲವೆಂಬ ಸಂಗತಿ.

ಪಾಪ, ಅವನಿಗೆ ಗೊತ್ತಿರಲಿಲ್ಲ. ಮಾತನಾಡುವದರಲ್ಲಿ ತಾನೆಲ್ಲೋ ತಪ್ಪಿರ ಬೇಕು, ಅಂತೆಯೆ ಬಾಲಿ ತನ್ನನ್ನು ಹಾಸ್ಯ ಮಾಡಿ ನಗುತ್ತಿರಬೇಕು— ಎಂದು ಕೊಂಡು ಆತ ಅಸ್ವಸ್ಥನಾಗಿ ಕುಳಿತುಕೊಂಡ.

" ಮದುವಿ....ಮದುವಿ....ನನ್ನ ಮದುವಿ ಆಗ್ತೀಯೇನೋ ಗಿರಿಯಾ? " ನಗೆಯ ಲಹರಿಯಲ್ಲಿಯೆ ಅವಳು ಕೇಳಿದಳು.

" ಅಂ....ಹಂ....ಹಂ....ಹಂ.... " ಎಂದು ತೊದಲಿದ ಗಿರಿಯ.

" ನೆಟ್ಟಿಗ ಮಾತಾಡಾಕ ಕೂಡಾ ಬರೂದಿಲ್ಲ. ನನ್ನ ಮದುವಿ ಆಗು ತಾನಂತ ! ಹಹ್ಹಹ್ಹಾ ! " ಎಂದು ನಗೆಯೆಬ್ಬಿಸಿದಳು ಬಾಲಿ.

## ಮೂರು

ಬೆಳಗಾಯಿತು. ಎಲ್ಲಕ್ಕೂ ಮೊದಲು ಮೂಡಣ ಕ್ಷಿತಿಜದ ಅಂಚಿನ ಮೇಲೆ ಬಿಳಿಯ ಬಣ್ಣವೇರಿತು. ನಿಧಾನವಾಗಿ ಆ ಬಣ್ಣ ಉಜ್ವಲವಾಗುತ್ತ ಬಂದು, ಪ್ರಕಾಶದ ಪಟ್ಟಿಗೆ ಪಟ್ಟಿಯೇ ಆಕಾಶಕ್ಕೇರಿತು. ಗುಡ್ಡದ ನೆತ್ತಿ ಯಿಂದ ರವಿಬಿಂಬ ಮೇಲಕ್ಕೆದ್ದಿತು. ಒಡನೆಯೆ ರವಿಗಿರಣಗಳ ಚಿನ್ನದ ಹುಡಿ ಹಳ್ಳಿಯ ಮನೆಗಳ ಮೇಲೂ ಗುಡಿಸಲುಗಳ ಮೇಲೂ ಸುರಿಯತೊಡಗಿತು. ಹಕ್ಕಿಗಳ ಹಿಂಡು ಸಾಲುಗಟ್ಟಿಕೊಂಡು ಹಾರುತ್ತ ದಿನದ ಆಹಾರದ ಬೇಟೆಗೆ ಹೊರಟಿದುದು ಕಾಣಿಸಿತು. ಸೃಷ್ಟಿಯೆಲ್ಲವೂ ಎಚ್ಚತ್ತುಕೊಂಡು ಮೈ ಕೊಡವಿ ಕೊಳ್ಳುತ್ತಿದ್ದಂತೆ ತೋರುತ್ತಿತ್ತು.

ಒಲೆಯೆದುರಿಗೆ ಕುಳಿತುಕೊಂಡು ಅಜ್ಜ ಅಂಬಲಿ ಮಾಡುತ್ತಲಿದ್ದ. ಹುಳಿ ಪಲ್ಯವನ್ನು ಮೊದಲೇ ಮಾಡಿಮುದಾಗಿತ್ತು. ಇನ್ನು ರೊಟ್ಟಿ ಬಡಿಯುವದಷ್ಟು ಉಳಿದಿತ್ತು. ಗಿರಿಯನೂ ಆಗಲೆ ಮನೆಗೆ ಬಂದು ಎತ್ತುಗಳ ಸಗಣಿ ಬಳಿದು ತಿಪ್ಪೆಗೆ ಸಾಗಿಸುವುದರಲ್ಲಿ ತೊಡಗಿದ್ದ. ಆ ಕೆಲಸ ಮುಗಿಯುತ್ತಲೂ ಒಲೆಯೆ ದುರಿಗೆ ಬಂದು ಕುಳಿತು ಆತನೇ ರೊಟ್ಟಿ ಮಾಡುವನು. ಈಚೆಗೆ ಕೆಲವು

ವರ್ಷಗಳಿಂದ ರೊಟ್ಟಿ ಮಾಡುವುದನ್ನು ಬಿಟ್ಟುಬಿಟ್ಟಿದ್ದಾನೆ. ಮೊದಲಿನ ಹಾಗೆ ಈಗ ಅವನ ತೋಳುಗಳಲ್ಲಿ ಶಕ್ತಿಯಿಲ್ಲ. ಹಿಟ್ಟು ನಾದುವುದು, ರೊಟ್ಟಿ ತಟ್ಟು ವುದು ಅವನಿಂದ ಸಾಧ್ಯವಿಲ್ಲವಾಗಿದೆ. ಹೆಂಗುಸಿನ ಹಾಗೆ ಗಿರಿಯ ಒಲೆಯ ಮುಂದೆ ಕುಳಿತು ಅಡುಗೆ ಮಾಡುವುದೂ ಮುದುಕನಿಗೆ ಸರಿಬರುವುದಿಲ್ಲ. "ಮನಿಯಾಗ ಒಂದು ಹೆಣ್ಣಿದ್ದರನs ಚಂದ ಗಿರಿಯಾ. ಲಗೂ ಮದುವಿಯಾಗಪಾ," ಎಂಬುದಾಗಿ ಆತ ಸಾವಿರ ಸಲವಾದರೂ ಹೇಳಿರಬಹುದು. ಗಿರಿಯ ಮಾತ್ರ ಆ ವಿಷಯವಾಗಿ ಆಸಕ್ತಿಯನ್ನೇ ತೋರಿಸಿಲ್ಲ. "ಇನ್ನೇನ ಅವನ ಹಣ್ಯಾಗ ಬರದಾಂಗ ಆಗತೈತಿ," ಎಂದು ತನ್ನನ್ನು ತಾನೇ ಸಮಾಧಾನ ಮಾಡಿಕೊಂಡು ಮುದುಕ ಸುಮ್ಮನಾಗಿದ್ದಾನೆ.

ಸಗಣಿ ಬಳಿಯುವ ಕೆಲಸವನ್ನು ಮುಗಿಸಿ, ಕೈಕಾಲು ಮುಖ ತೊಳೆದುಕೊಂಡು ಗಿರಿಯ ರೊಟ್ಟಿ ಬಡಿಯಲು ಬಂದು ಕುಳಿತೊಡನೆ ಅಜ್ಜ ಕೇಳಿದ:

"ಆ ಹೊಲಾ ಹಿಡಿಯೂದಂತ ಗಟ್ಟಿ ಮಾಡಿದೇನೋ?"

"ನಾಯೇನ ಮಾಡೂದು? ನೋಡಲಾ ನೀನs?" ಎನ್ನುತ್ತ ಗಿರಿಯ ಒಲೆಯ ಮೇಲೆ ರೊಟ್ಟಿಯ ಹಂಚನ್ನಿರಿಸತೊಡಗಿದ.

"ಧರ್ಮಣ್ಣಾ ತಾನಾಗೇ ನಮ್ಮ ಹೊಲದ ತನಕಾ ಬಂದು ಹೇಳಿ ಹೋಗ್ಯಾನ. ನಮಗೂ ಹೊಲಾ ಬೇಕs ಬೇಕು. ಆದರs ಭೀಮ ಏನಂದಾನು ಅನ್ನೂದನ್ನೂ ಯಿಚಾರ ಮಾಡಬೇಕಲಾ? ಹೊಲಾ ಕಬಜಾ ಹೋದಪ್ಪಕ್ಕ ತಳಮಳ ಅಂತಿದ್ದಾನು ಅವ. ಎಲ್ಲರಿಗೂ ತಳಮಳ ಅನ್ನೂದು ಆಗೂದs. ಇನ್ನs ಖಟ್ಲೀ ಬ್ಯಾರೆ ನಡದೈತಂತ. ಇಂಥಾ ವ್ಯಾಳೇದಾಗ—ಭೀಮಗೂ ಧರ್ಮಣ್ಣನಿಗೂ ಈರ್ಷೆ ಬಂದಾಗ—ನಾವು ಅದs ಹೊಲಾ ಮಾಡಾಕ ಹತ್ತಿದಿವಂದರ ಏನಾಗತೈತ್ಯೋ ಯಾಂ ಬಲ್ಲ!"

ಹಿಟ್ಟು ನಾದುತ್ತಲಿದ್ದ ಹಾಗೆ ಗಿರಿಯ ನಿರ್ಲಕ್ಷದ ಧ್ವನಿಯಲ್ಲಿ ನುಡಿದ: "ಆಗೂದೇನ ಬಿಡು. ಭೀಮ ಏನರೆ ಮಾಡ್ಯಾನ ಅಂತೀಯೇನು?"

"ಹ್ಯಾಂಗ ಹೇಳಾಕ ಬಂದೀತು? ಮೊದಲs ಈರ್ಷೆ ಬಂದೈತಿ ಅವಗ. ಅದರಾಗ ಆ ಮುದುಕಿ ಸತ್ತು ಕೈಯಾಗ ನಾಕು ರೂಪಾಯಿ ಒಂದಾವ. ರೊಕ್ಕ ಕೈಯಾಗಿದ್ದಾಗ ಮನುಷ್ಯಾ ಏನ ಮಾಡ್ಯಾನು ಏನ ಮಾಡಾಕಿಲ್ಲನ್ನೂದನ್ನ ಹೇಳಾಕ ಬರೂದಿಲ್ಲ ತಮ್ಮಾ—ಅದರಾಗ ಅವನ

ಹುಡುಗರಿಬ್ಬರೂ ಕುಸ್ತಿ ಪೈಲ್ವಾನರು. ಕಾಮಣ್ಣನೂ ಅವನ ಪುಂಡರೂ ಅವರ ಕಡೇನs ಅದಾರ. ಸೆರೆಗುಡುಕರ ಗುಂಪು ಅಪಾ ಅದು. ಏನ ಮಾಡಾಕಿಲ್ಲ ಅನ್ನೂದನ್ನ ಹೆಂಗ ಹೇಳಾಕ ಬರುತ್ತೈತಿ ? "

" ಬಿಡು ಬಿಡು. ಅವರ ಪುಂಡತನಾ ಎಲ್ಲಾ ಗೊತ್ತೈತಿ ನನಗೂ. ಏನ, ಅವರಷ್ಟs ಗಂಡಸರೇನ ಊರಾಗ ? ನಾವೆಲ್ಲಾ ಏನ ಬಳೀ ತೊಟ್ಟೇದೀ ವೇನ ? "

ಮೊಮ್ಮಗನ ಸುದೃಢ ಶರೀರವನ್ನು ಹೆಮ್ಮೆಯಿಂದ ದಿಟ್ಟಿಸುತ್ತ ಅಜ್ಜ ಹೇಳಿದ:

" ಹಂಗ ಯಾರಂದರೋ ತಮ್ಮಾ? ಆದರೂ, ಅವರ ಕಡೆ ಮಂದಿ ಅದಾರ ರೊಕ್ಕ ಐತಿ ಅನ್ನೂದು ನಾವು ಮರೀಬಾರದು. ನಮ್ಮ ಕಡೆ ಏನೈತಿ ? ಮಂದಿ ಅದಾರs ? ರೊಕ್ಕ ಐತ್ಯೇ ? ಏನೈತಿ ? "

" ಸಾವುಕಾರ ಅದಾನಲ್ಲ ? "

" ಸಾವುಕಾರ ತನ್ನ ಮನ್ಯಾಗ ಕುಂತಿರತಾನ. ಹೊಲದಾಗ ದುಡಿ ಯಾಂವ ನೀ. ಆ ಪುಂಡರ ಮ್ಯಾಳ ನಿನಗ ಏನಾರೆ ಮಾಡಾಕ ಬಂತಂದರ ಸಾವುಕಾರ ಎಲ್ಲಿರತಾನ ? "

" ಏನ ಮಾಡಂತೀ ಹಂಗಾದರ ? "

" ಹೊಲಾ ಹಿಡಿಯೂದಕ್ಕ ಮೊದಲ ಗೌಡನ್ನ ಒಂದ ಮಾತ ಕೇಳಿದರ ನೆಟ್ಟಗಂತ ನನಗನಿಸತೈತಿ. "

" ಹಂಗs ಮಾಡೂಣು. ರೊಟ್ಟೀ ಮಾಡಿದವನs ನಾ ಹೋಗಿ ಬರ್ತೀನಿ, " ಎಂದು ಹೇಳಿ ಗಿರಿಯ ದಪದಪನೆ ರೊಟ್ಟಿ ತಟ್ಟತೊಡಗಿದ.

## ನಾಲ್ಕು

ಆ ಹಳ್ಳಿಯ ಪಾಟೀಲನಾಗಿದ್ದ ಸಿದಗೌಡ ಅಂಥ ಜನಪ್ರಿಯ ವ್ಯಕ್ತಿ ಯೇನೂ ಆಗಿರಲಿಲ್ಲ. ನಿರಕ್ಷರಿಗಳೂ ಅಜ್ಞರೂ ಆದ ಹಳ್ಳಿಗರಿಗೆ ಅವನ

ಬಗೆಗೆ ವಿಶ್ವಾಸವೂ ಇರಲಿಲ್ಲ. ಲಂಚದ ಹಣ ಕೈಗೆ ಬೀಳದಿದ್ದರೆ, ಸಿದಗೌಡ ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ. ಸುತ್ತುಮುತ್ತಲಿನ ಸೀಮೆಯಲ್ಲೆಲ್ಲ 'ಆತ ಲಂಚಬಡಕ ಗೌಡ' ನೆಂದು ಹೆಸರು ಪಡೆದಿದ್ದ. ಅವನ ವೈಯಕ್ತಿಕ ಚಾರಿತ್ರ್ಯವೂ ಸರಿಯಾಗಿರಲಿಲ್ಲ. ಹೆಣ್ಣಿನ ಬಗೆಗೆ ಅವನಿಗಿದ್ದ ಹುಚ್ಚು ಹಳ್ಳಿಯಲ್ಲೆಲ್ಲ ಮನೆಮಾತಾಗಿತ್ತು "ಸಡಿಲುಗಚ್ಚೆಯ ಗೌಡ" ಎಂದೂ ಜನ ಅವನನ್ನು ಸಂಬೋಧಿಸುತ್ತಿದ್ದರು. ಸಿದಗೌಡನಿಗಾಗ ನಲವತ್ತು ವರ್ಷ ವಯಸ್ಸು ಹಳ್ಳಿಯಲ್ಲಿದ್ದ ಎರಡು ಪಕ್ಷಗಳಲ್ಲಿ ಒಂದರ ಮುಖಂಡನಾದ. ಎದುರು ಪಕ್ಷದ ಹಿರಿಯ ಕಾಮಣ್ಣಾ. ಇಪ್ಪತ್ತು ವರ್ಷಗಳಿಂದ ಬೆಳೆದು ಬಂದಿತ್ತು ಆ ವಿರೋಧ. ಹಳ್ಳಿಗೆ ಸಂಬಂಧಪಟ್ಟ ಪ್ರತಿಯೊಂದು ವಿಷಯದಲ್ಲೂ ಆ ಪಕ್ಷೀಯ ಭಾವನೆ ತಲೆಹಾಕದಿರುತ್ತಿರಲಿಲ್ಲ. ಎಷ್ಟೋ ಸಲ ಅದು ವಿಕೋಪಕ್ಕೆ ಹೋಗಿ ಕುಡಗೋಲು ಕೊಡಲಿಗಳ ಹಾರಾಟವೂ ನಡೆದಿತ್ತು. ಒಂದೆರಡು ಕೊಲೆಗಳೂ ಆಗಿಹೋಗಿದ್ದುವು. ಎಷ್ಟೋ ಜನರ ತಲೆಗಳೊಡೆದಿದ್ದುವು. ಕೆಲವರ ಕೈಗಳನ್ನು ಕೆಲವರ ಕಾಲುಗಳನ್ನು ಕಡಿಯಲಾಗಿತ್ತು. ಅವರು ಇವರ ವಿರುದ್ಧ, ಇವರು ಅವರ ವಿರುದ್ಧ ಖಟ್ಲೆ ಹಾಕುವದು, ಹೈಕೋರ್ಟಿನ ವರೆಗೂ ಹೋಗಿ ಹಣ ಹಾಳು ಮಾಡಿಕೊಳ್ಳುವುದು ತೀರ ಸಾಮಾನ್ಯವಾದ ವಿಷಯವಾಗಿತ್ತು. ತಮ್ಮ ತಮ್ಮ ಪಕ್ಷಗಳನ್ನು ಸಾಕಿಕೊಂಡಿದ್ದರು. ಅವರವರ ಗರಡೀಮನೆಗಳೂ ಬೇರೆ ಬೇರೆಯಾಗಿದ್ದವು.

ಇಪ್ಪತ್ತು ವರ್ಷಗಳ ಹಿಂದೆ ಮಾತ್ರ ಆ ಹಳ್ಳಿಯಲ್ಲಿ ಪಕ್ಷಗಳ ಗದ್ದಲವಿರಲಿಲ್ಲ. ಆಗ ಊರಲ್ಲಿ ನಾಲ್ಕು ಜನ ಹಿರಿಯರಿದ್ದರು. ಅವರು ಹೇಳಿದಂತೆ ಕೇಳಿಕೊಂಡು ಹಳ್ಳಿಗರೆಲ್ಲ ತಮ್ಮ ತಮ್ಮ ಕಾಯಕಗಳಲ್ಲಿ ತೊಡಗಿರುತ್ತಿದ್ದರು. ಸಿದಗೌಡ ಕಾಮಣ್ಣ ಇಬ್ಬರೂ ಹರಯಕ್ಕೆ ಬಂದಾಗ ಒಂದು ಹೆಣ್ಣಿನ ನಿಮಿತ್ತವಾಗಿ ಅವರಿಬ್ಬರಿಗೂ ಮನಸ್ತಾಪವಾಗಿತ್ತು. ಇಬ್ಬರೂ ಬಿಸಿರಕ್ತದವರಾಗಿದ್ದುದರಿಂದ ಈರ್ಷೆಗೆ ಕಟ್ಟು ಬಿದ್ದು ಹೊಡೆದಾಡಿದ್ದರು. ಅದೇ ಸಮಯದಲ್ಲಿ ಸಿದಗೌಡನ ತಂದೆ ಕಾಲವಾದುದರಿಂದ ಊರಿನ ಗೌಡಿಕೆಯ ಅಧಿಕಾರ ಅವನ ಕೈಗೆ ಬಂದಿತ್ತು. "ಈ ಕಾಮ್ಯಾ ನನ್ನ ವಿರುದ್ಧ ಹೋಗಿ ಊರಾಗ ಹೆಂಗಿರತಾನ ನೋಡತೇನಿ, "ಸಿವಗೌಡ ಹಟತೊಟ್ಟಿದ್ದ ಹಟವಾದಿತ್ವದಲ್ಲಿ ಸಿದಗೌಡನಿಗೆ ಕಾಮಣ್ಣನೂ ಹಿಂದುಳಿಯುವವನಲ್ಲ. "ನನ್ನ ಎದುರು ಹಾಕ್ಕೊಂಡು

ಈ ಮಗ ಗೌಡಕೀ ಮಾಡತಾನರೆ ಹೆಂಗ ನೋಡತೇನೆ" ಎಂದು ಅವನೂ ಮೀಸೆಯ ಮೇಲೆ ಕೈ ಹಾಕಿದ್ದ. ಹಳ್ಳಿಯಲ್ಲಿ ಪಕ್ಷಗಳು ಹುಟ್ಟಿಕೊಂಡದ್ದು ಹಾಗೆ. ಅಶಿಕ್ಷಿತರಿಂದ ಕೂಡಿದ ಗ್ರಾಮವೆಂದರೆ ಬಿಸಿಲುಗಾಲದ ಕಾಡಿದ್ದ ಹಾಗೆ. ಒಂದು ಕಿಡಿ ಬಿದ್ದರೂ ಸಾಕು. ಪ್ರಚಂಡ ಬೆಂಕಿಯೇಳುವುದು. ಆ ಹಳ್ಳಿಯಲ್ಲಿ ಆದದ್ದೂ ಹಾಗೆ.

ಸಿದಗೌಡ ಕಾಮಣ್ಣಾ ಇಬ್ಬರೂ ಅಶಿಕ್ಷಿತರೇ. ಗೌಡ ತಕ್ಕ ಮಟ್ಟಿಗೆ ಓದಲು ಬರೆಯಲು ಕಲಿತುಕೊಂಡಿದ್ದ. ಕಾಮಣ್ಣಾ ಕೆಲವು ವರ್ಷ ಸಾಲೆಗೆ ಮಣ್ಣು ಹೊತ್ತಿದ್ದನಾದರೂ ಸಹ ಮಾಡುವುದೊಂದನ್ನುಳಿದು ಇನ್ನೆಲ್ಲವನ್ನೂ ಮರೆತುಬಿಟ್ಟಿದ್ದ. ಹಿರಿಯರಿಂದ ಬಂದ ತೋಟವೊಂದರಿಂದ ಅವನ ಮನೆಯ ಖರ್ಚು ನಡೆಯುತ್ತಿತ್ತು. ಕಾಮಣ್ಣಾ ಸುಖವಾಗಿ ಉಂಡು ತಿಂದು ಸಾಕಷ್ಟು ಮೈ ಬೆಳಸಿಕೊಂಡು ಪುಂಡರ ಪುಢಾರಿಯೆನ್ನಿಸಿಕೊಂಡು ಮೆರೆಯುತ್ತಿದ್ದ. ಹಳ್ಳಿಯ ಜನರೆಲ್ಲಾ ತನ್ನ ಮಾತಿನಂತೆ ನಡೆಯಬೇಕು. ತನ್ನ ಆಜ್ಞೆಯನ್ನು ಯಾರೂ ಮೀರಬಾರದು, ತನ್ನನ್ನು ಕಂಡಾಗ ಎಲ್ಲರೂ ನಮಸ್ಕಾರ ಮಾಡುತ್ತಿರಬೇಕು. ಎಂಬ ಆಸೆಯು ಅವನದು. ಗೌಡನ ಪಕ್ಷದ ಜನರನ್ನು ತನ್ನ ಪಕ್ಷಕ್ಕೆಳೆದುಕೊಳ್ಳಲು ಆತ ಬಗೆಬಗೆಯಾಗಿ ಪ್ರಯತ್ನಿಸಿದ್ದ. ಏನಾದರೂ ಮಾಡಿ ಗೌಡನ ಪ್ರತಿಷ್ಠೆಯನ್ನೆಲ್ಲ ಮುರಿದು, ತಾನೊಬ್ಬನೇ ಹಳ್ಳಿಯ ಏಕಮೇವಾದ್ವಿತೀಯ ಮುಂದಾಳುವಾಗಬೇಕೆಂದು ಸಂಕಲ್ಪಿಸಿಕೊಂಡು ಅದಕ್ಕಾಗಿ ಹಲವಾರು ಕುಟಿಲೋಪಾಯ ಯೋಚಿಸುತ್ತ ಬಂದಿದ್ದ. ಗೌಡನ ಹತ್ತಿರ ಹೋಗುವವರಿಗೆಲ್ಲ ಹೆದರಿಕೆ ಬೆದರಿಕೆ ಹಾಕಿದುದಾಗಿತ್ತು, ಚಹವನ್ನೋ ಸೆರೆಯನ್ನೋ ಕುಡಿಸಿ ಒಲಿಸಿಕೊಳ್ಳಲು ಯತ್ನಿಸಿದುದಾಗಿತ್ತು, ಕಾಯದೆ ಕಾನೂನುಗಳ ಬಗೆಗೆ ಗೌಡನಿಗಿಂತ ತನಗೇ ಚೆನ್ನಾಗಿ ತಿಳಿದಿರುವುದಾಗಿ ಪ್ರಚಾರ ಮಾಡಿದುದಾಗಿತ್ತು. ಆಗಾಗ ಹಳ್ಳಿಗೆ ಬರುತ್ತಿದ್ದ ಅಧಿಕಾರಿಗಳನ್ನೂ ಪೋಲೀಸರನ್ನೂ ಮನೆಗೆ ಕರೆದೊಯ್ದು ಅವರಿಗೆ ತೃಪ್ತಿಯಾಗುವಂತೆ ಸರಬರಾಜು ಮಾಡಿ ಅವರನ್ನೆಲ್ಲ ಒಲಿಸಿಕೊಂಡು ಆ ಮೂಲಕ ಹಳ್ಳಿಗರ ಮನಸ್ಸಿನ ಮೇಲೆ ಪ್ರಭಾವ ಬೀಳುವಂತೆ ಮಾಡಿದುದಾಗಿತ್ತು. ಕಾಮಣ್ಣಾ ಎಂಥ ಲಾಗಹೊಡೆದರೂ ಸಹ ಜನರು ಗೌಡನ ಕಡೆ ಹೋಗುವುದನ್ನು ನಿಲ್ಲಿ

ಸಿರಲಿಲ್ಲ. ಕಾಮಣ್ಣ ಒಳಗೊಳಗೇ ಉರಿಯುತ್ತ ಗೌಡನನ್ನು ನಿರ್ಮೂಲ ಮಾಡಲು ಸಮಯ ಕಾಯುತ್ತಿದ್ದ.

ಒಂದು ವರ್ಷದ ಹಿಂದೆ ಭೀಮಪ್ಪ ಕಾಯದೆಯ ತೊಡಕಿಗೆ ಸಿಕ್ಕಿ ಬಿದ್ದಾಗ ಅವನು ಗೌಡನ ಹತ್ತಿರ ಸಲಹೆ ಕೇಳಲು ಹೋಗದಂತೆ ಮಾಡಿದ ವನು ಕಾಮಣ್ಣನೇ. "ಆ ಸುಳೀಮಗ್ಗ ಗೌಡಗ ಏನ ಮಣ್ಣ ತಿಳೀತೈತಂತ ನೀವೆಲ್ಲಾ ಓಡಿಹೋಗತೀರಿ ಅವನ ಹಂತೇಲಿ? ನಮ್ಮ ವಕೀಲರ ಹಂತೇಲಿ ಹೋಗೋಣು ಬಾ. ಎಲ್ಲಾ ಹೇಳತಾರ" ಎಂದು ಹೇಳಿ, ಭೀಮಪ್ಪನನ್ನು ತಾಲೂಕಿನ ಸ್ಥಳಕ್ಕೆ ಕರೆದೊಯ್ದು, ಹೊಸದಾಗಿ ವಕೀಲಿ ವ್ಯವಸಾಯಕ್ಕಾ ರಂಭಿಸಿದ್ದ ಅನನುಭವಿ ತರುಣನೊಬ್ಬನನ್ನೇ ಅವನಿಗೆ ಗಂಟುಹಾಕಿದ್ದ. ಕೇಸು ಗಳ ಅಭಾವದಿಂದ ನಿರುದ್ಯೋಗಿಯಾಗಿದ್ದ ಆ ತರುಣ ವಕೀಲ, ಬಹುದಿನ ಗಳಿಂದ ಉಪವಾಸವಿದ್ದ ಹುಲಿ ಕುರಿಯ ಮೇಲೆ ಬೀಳುವ ಹಾಗೆ, ಭೀಮ ಪ್ಪನ ಕೇಸಿನ ಮೇಲೆ ಹಾರಿಬಿದ್ದು ನೂರಿಪ್ಪತ್ತು ರೂಪಾಯಿ ಫೀಜು ವಸೂಲು ಮಾಡಿಕೊಂಡಿದ್ದನಾದರೂ, ಸರಿಯಾಗಿ ವಾದ ಮಾಡಲಾರದೆ ಖಟ್ಲೆಯನ್ನು ಸೋತುಬಿಟ್ಟಿದ್ದ. "ಇನ್ನs ಅಪೀಲ ಐತೆಲ್ಲಾ? ಯಾಕ ಅಂಜತೀ? ಎಂದು ಹೇಳಿ ಕಾಮಣ್ಣ ಭೀಮಪ್ಪನನ್ನು ಜಿಲ್ಲೆಯ ಸ್ಥಳದಲ್ಲಿದ್ದ ಟೊಪಿಗಿ ವಕೀಲನ ಬಳಿ ಕರೆದೊಯ್ದು ಅಪೀಲಿನ ಅರ್ಜಿಯ ವ್ಯವಸ್ಥೆ ಮಾಡಿದ್ದ. ಟೊಪಿಗಿ ವಕೀಲ ಅದಕ್ಕಾಗಿ ಫೀಜು ಹಣ ಕಿತ್ತುಕೊಂಡಿದ್ದನಾದರೂ ತ್ವರೆಯಿಂದ ಕೆಲಸಮಾಡಿ ರಲಿಲ್ಲವಾದ್ದರಿಂದ, ಮಾಮಲೇದಾರರ ಆಜ್ಞೆಯಂತೆ ಧರ್ಮಣ್ಣನಿಗೆ ಹೊಲ 'ಕಬಜಾ' ಹೋಗಿ ಬಿಟ್ಟಿತ್ತು.

ಈ ಹೊಲದ ಖಟ್ಲೆ ನಡೆದಂದಿನಿಂದ ಸಿದಗೌಡನೂ ಕುತೂಹಲದಿಂದ ಅದರ ಪ್ರಗತಿಯನ್ನು ನಿರೀಕ್ಷಿಸುತ್ತ ಬಂದಿದ್ದ. ಭೀಮಪ್ಪ, ಕಾಮಣ್ಣನ ಬಗೆಗೆ ಸಹಾನುಭೂತಿ ತಳೆದಿದ್ದ. ಕಾಮಣ್ಣನಂಥ ಪುಂಡನನ್ನು ಕೆಣಕಿ ಒಳಗೊ ಳಗೇ ಅಧೈರ್ಯದಿಂದಿದ್ದ ಧರ್ಮಣ್ಣನಿಗೂ ಗೌಡನ ನೆರವಿನ ಅಗತ್ಯವಿತ್ತು. "ಕಾಮ್ಯಾ ಎಷ್ಟು ಹಾರ್ಯಾಡತಾನ ಹಾರ್ಯಾಡಲಿ. ಆ ಹೊಲಾ ಭೀಮ್ಯಾಗ ಹೆಂಗ ಉಳೀತೈತಿ ನೋಡುಣು" ಎಂದು ಹೇಳಿ ಸಿದಗೌಡ ಧರ್ಮಣ್ಣನಿಗೆ ಧೈರ್ಯ ಬರುವಂತೆ ಮಾಡಿದ್ದ. "ಹೊಲ ಕಬಜಾ ಅಂತೂ ಬಂತಲ್ಲ? ಗಳೇ

ಹೊಡಿಯಾಕ ಹೋದಾಗ ಅವರು ಅಡ್ಡ ಬಂದರ ಹೆಂಗ?" ಎಂದು ಧರ್ಮಣ್ಣಾ ಕೇಳಿದಾಗ, ಗೌಡ–''ಅಡ್ಡಬಂದವರನ್ನು ಅನುಮಾನ ಇಲ್ಲದ ಹೊಡದು ಅಟ್ಟ ಬೇಕು. ಅವರ ಮ್ಯಾಲ ಕ್ರಿಮಿನಲ್ ಕೇಸ್ ಮಾಡಿಸತೇನಿ" ಎಂದು ಉತ್ತ ರವಿತ್ತಿದ್ದ. ಆ ಭರವಸೆಯಿಂದಲೇ ಧರ್ಮಣ್ಣಾ ಆ ಹೊಲವನ್ನು ಗಿರಿಯನಿಗೊ ಪ್ಪಿಸಲು ನಿರ್ಧರಿಸಿದ್ದುದು.

ಆ ವಿಚಾರವಾಗಿ ಸಲಹೆ ಕೇಳಲೆಂದು ಗಿರಿಯ ಬಂದಾಗ ಗೌಡ ತನ್ನ ಮನೆಯ ಪಡಸಾಲೆಯಲ್ಲಿ ಚಹ ಕುಡಿಯುತ್ತ ಕುಳಿತುಕೊಂಡಿದ್ದ.

"ಶರಣ್ರೀ ಗೌಡರs"

ಗೌಡ ತಲೆಯೆತ್ತಿ ನೋಡಿದ! "ಯಾರು' ಗಿರಿಯ ಏನ? ಬಾ ಗಿರಿಯಾ, ಕುಂಡ್ರು" ಎಂದು ಹೇಳಿ ಕಪ್ಪಿನಲ್ಲಿ ಉಳಿದಿದ್ದ ಚಹವನ್ನು ಗಿರಿಯನಿಗೆ ಕೊಟ್ಟ.

ಗೌಡನಿಂದ ಚಹ ಪಡೆಯುವುದೇ ಒಂದು ದೊಡ್ಡ ವಿಷಯ ಹಳ್ಳಿಗರಿಗೆ. ಗಿರಿಯ ಆನಂದದಿಂದ ಮುಖವರಳಿಸುತ್ತ ಚಹ ಕುಡಿದು ಮುಗಿಸಿದ.

ಸಿದಗೌಡ ಬೀಡಿಯೊಂದನ್ನು ಹೊತ್ತಿಸಿ. ಸ್ವಲ್ಪ ಸೇದಿ ಅದನ್ನು ಗಿರಿಯ ನಿಗೆ ಕೊಟ್ಟ. ಗೌಡನಿಂದ ಬೀಡಿ ಪಡೆಯುವುದೂ ಒಂದು ಹೆಮ್ಮೆಯ ವಿಷಯ ಹಳ್ಳಿಗರಿಗೆ. ಗಿರಿಯ ಸಂತೋಷದಿಂದ ಉಬ್ಬುತ್ತಾ ಬೀಡಿ ಸೇದ ತೊಡಗಿದ.

"ಹುಂ. ಏನ ಸುದ್ದಿ ಗಿರಿಯಾ?"

ಗಿರಿಯ ತಾನು ಬಂದುದರ ಕಾರಣವನ್ನು ವಿವರಿಸಿದ.

"ಹಂ, ಹಿಂಗೇನ? ಬಾಳ ಚಲೋ ಆತೇಳ. ಧರ್ಮಣ್ಣಾ ನನ್ನ ಮುಂದೂ ಹೇಳಿದಾನ ಮೊದಲs."

"ಹೊಲ ಹಿಡಿಯಾಕ ಅಡ್ಡಿಯೇನ ಇಲ್ಲ ಹೌದಲ್ಲರೀ?"

"ಹಂ? ಅಡ್ಡಿ? ಅಡ್ಡಿ ಯಾರದೋ ಇದರಾಗ? ಧರ್ಮಣ್ಣಾನ ಹೊಲ, ಅವ ಹಚ್ಚುತಾನ ನಿಮಗ. ಹಿಡಿಯಾಕ ಏನಡ್ಡಿ?"

"ಪಾಲಿನಿಂದ ಮಾಡಬೇಕಂತಾನ. ಮುಂದಿಗೆ ಮಾತ್ರ ಕೂಲಿಯಿಂದ ಮಾಡತೀವಿ ಅಂತ ಹೇಳಬೇಕಂತಾನ...."

"ಹುಂ. ಆದರಾಗೂ ಏನು ಮೋಸ ಇಲ್ಲ. ಕಾಂಗ್ರೆಸ ಸರಕಾರ ದವರು ಹೊಸಾ ಕಾಯದೆ ಮಾಡಿದಾರಲ್ಲಾ, ಅದು ಬಾಳ ನಾಜೂಕೈತಿ. ಹಂಗ ಹೇಳಬೇಕಾಗತೈತಿ."

"ನಾಳೆ ಗಳೇ ಹೊಡಿಯೂಣಂತ ಹೇಳಿದಾನರಿ. ಭೀಮ ಕಾಮಣ್ಣಾ ಅಡ್ಡಬಂದರ ಹೆಂಗ ಮಾಡೂದು?"

"ಮಾಡೂವೇನ? ಕೈಯಾಗ ಇದ್ದದ್ದರಿಂದ ಬಡಿದು ಕಳಿಸಿ ಬಿಡು. ಮುಂದಿಂದು ನಾ ನೋಡಿಕೊಂತೀನಿ."

ಗಿರಿಯು ಒಂದು ಕ್ಷಣ ಸುಮ್ಮನೆ ಕುಳಿತಿದ್ದು, ಅನಂತರ ಧ್ವನಿಯೆತ್ತಿ—"ನಾ ಇರಾಂವ ಒಬ್ಬಾಂವ. ಅವರು ಹತ್ತಿಪ್ಪತ್ತು ಮಂದಿ ಬಂದರ ಹೆಂಗ ಮಾಡಲಿ?" ಎಂದು ಕೇಳಿದ.

"ಏನೂ ಅಂಜಬ್ಯಾಡ. ಹಂಗೇನ ನಿನ್ನ ಮೈಮ್ಯಾಲ ಬರೂದಿಲ್ಲ ಅವರು. ಹಂಗೆಲ್ಲಾ ಬಂದರ ಕ್ರಿಮಿನಲ್ ಕೇಸ್ ಆಗುತೈತಿ ಅವರಿಗೂ ಗೊತ್ತೈತಿ. ಏನೂ ಚಿಂತೀ ಮಾಡಬ್ಯಾಡ, ಹೋಗು."

ಗೌಡ ಹಾಗೆ ಸ್ಪಷ್ಟವಾಗಿ ಹೇಳಿದರೂ ಗಿರಿಯುನ ಚಿತ್ತ ಸ್ವಸ್ಥವಾಗಲಿಲ್ಲ. ಆ ದಿನವೆಲ್ಲಾ ಅದೇ ಯೋಚನೆಯೆ ಅವನ ತಲೆಯಲ್ಲಿ ಸುತ್ತುತ್ತಿತ್ತು. ಐದಾರು ಸಲ ಮನೆಯಿಂದ ಹೊಲಕ್ಕೆ, ಹೊಲದಿಂದ ಮನೆಗೆ ಓಡಾಡಿ ಮೆಣಸಿನಕಾಯಿ ಗಳನ್ನೆಲ್ಲ ಹೊತ್ತು ತಂದು ಮನೆಯಲ್ಲಿ, ಗಳಿಗೆಯಲ್ಲಿರಿಸಿದುದಾಯಿತು. ಹೊಲದ ಕಾವಲು ಮಾಡುವ ಕೆಲಸವೊಂದು ತಪ್ಪಿದಂತಾಯಿತು. ಇನ್ನು ಧರ್ಮಣ್ಣನ ಹೊಲದಲ್ಲಿ ಗಳೆ ಹೊಡೆಯಬೇಕು....ತಾನು ಆ ಹೊಲ ಹಿಡಿದ ಸಂಗತಿ ಈಗಾ ಗಲೆ ಭೀಮನಿಗೂ ಅವನ ಗುಂಪಿನವರಿಗೂ ಗೊತ್ತಾಗಿ ಬಿಟ್ಟಿರಬಹುದು. ನಾಳೆ ತಾನು ಗಳೆ ಹೊಡೆಯುವಾಗ ಅವರು ಖಂಡಿತವಾಗಿಯೂ ಅಡ್ಡಿ ಮಾಡುವರು. ಮುಂದೆ? ತಾನು ಆ ಹೊಲ ಹಿಡಿದದ್ದು ಒಳ್ಳೆಯದಾಯಿತೇ ಇಲ್ಲವೆ?

"ಯಾಕಲೇ ತಮ್ಮಾ, ಹಿಂಗಂದೀ?" ಅಜ್ಜ ಕೇಳಿದ.

"ಹೊಲಾ ಹಿಡಿದದ್ದು ನೆಟ್ಟಗಾತೋ ಇಲ್ಲೋ ಅಂತ...."

"ಹೂಂ. ನನಗೂ ಅದs ಚಿಂತಿ ಹತ್ತೈತಿ. ಒಬ್ಬರ ಕೈಯಾಗಿನ ರೊಟ್ಟಿ ಇನ್ನೊಬ್ಬರು ಕಸಕೊಂಡು ತಿನ್ನೂದಂದರ ಬಾಳ ತ್ರಾಸಪ್ಪ. ಹಿಂದೊಮ್ಮೆ ಹಿಂಗನ ಆಗಿತ್ತು. ಮೂವತ್ತು ನಲವತ್ತು ವರ್ಷದ ಹಿಂದೆ ಆ

ಇನಾಂದಾರನ ಹೊಲಾ ನಮ್ಮ ಕೈಯಾಗಿತ್ತು ಆಗ. ಎರಡು ವರ್ಷ ಮಳಿ ಬರಲಿಲ್ಲಂತ ಪಾಳಿ ಕೊಡಾಕಾಗಲಿಲ್ಲ ನಮಗ. ಅಷ್ಟಕ್ಕs ಇನಾಂದಾರ ಆ ಮೂಲೀಮನಿಯ ಗಂಗ್ಯಾಗ ಹೊಲಾ ಹಚ್ಚಿದ. ಕಬಜಾನೂ ತಗೊಂಡು ಬಿಟ್ಟರು. ಅದೊಂದು ಹೊಲಾ ಬಿಟ್ಟರ ಆವಾಗ ನಮಗ ಬ್ಯಾರೆ ಆಧಾರೇನೂ ಇರಾಕಿಲ್ಲ. ರೊಟ್ಟಿಗೂ ತ್ರಾಸ ಆಗುವಂಥಾ ಪರಸಂಗ ಬಂತಲ್ಲಾ ಅಂತ ನಮಗೆಲ್ಲಾರಿಗೂ ಹೊಟ್ಟಿ ಉರಿಯಾಕ ಹತ್ತಿತು. ಗಂಗ್ಯಾಗೂ ನಿಮ್ಮ ಅಪ್ಪಗೂ ಭಯಂಕರ ಬಡಿದಾಟ ಆಗಿ ಹೋತು."

"ಮುಂದ?"

"ಪುಣ್ಯಾಕ್ಕ ಏನೂ ಆಗ್ಲಿಲ್ಲ. ಪಂಚರೆಲ್ಲಾ ಕೂಡಿ ಸಮಾಧಾನ ಮಾಡಿ ಮುಗಿಸಿದರು. ಮಣ್ಣಿಗಾಗಿ ಮನುಷ್ಯನ ಜೀವನs ಹೋಗುತೈತಿ ತಮ್ಮಾ. ಬಾಳ ಹುಷಾರಾಗಿರಬೇಕು."

ಅವರು ಮಾತನಾಡುತ್ತ ಕುಳಿತಿದ್ದ ಹಾಗೆ ತಿಪ್ಪು ಬಂದು— "ಏನ ನಡಸೀರ್ರ್ಯೋ ಅಜ್ಜಾ ?" ಎಂದು ಕೇಳಿದ.

"ಏನಿಲ್ಲಪಾ. ಇದs ಈಗ ಬಂದು ಕುಂತೀವಿ ಹೊಲದಿಂದ. ಬಾರಲಾ. ಕುಂಡ್ರು."

"ಕುಂಡ್ರಾಕ ಸವಡಿಲ್ಲಪಾ. ಗಡಾನs ಹೋಗಬೇಕು. ಕಾಮಣ್ಣಾ ನಿಮ್ಮನ್ನ ಕರಕೊಂಡು ಬಾ ಅಂತ ಹೇಳ್ಯಾನ. ಅದಕ್ಕ ಬಂದಿದ್ದಿನಿ."

"ಕಾಮಣ್ಣಾ ? ಯಾತಕ್ಕ ಕರೀತಾನ?"

"ಎಲ್ಲ್ಯದಾನ ?"

"ಮನ್ಯಾಗs ಅದಾನ," ಎಂದು ಹೇಳಿ ತಿಪ್ಪು ಹೊರಟುಹೋದ.

ಅಜ್ಜ ಮೊಮ್ಮಗ ಇಬ್ಬರೂ ಪರಸ್ಪರರ ಮುಖ ನೋಡಿಕೊಂಡರು. ಅಜ್ಜನೆಂದ:

"ಗೊತ್ತಾತೇನೋ ತಮ್ಮಾ?"

"ಗೊತ್ತಾತು."

"ಅವರೇನು ಹೇಳ್ತಾರನ್ನೂದು ಗೊತ್ತಾತs ?"

"ಗೊತ್ತಾತು."

" ದೊಡ್ಡ ಕಲೇಕಟರ ಸಾಬನಂಗ ಹೇಳಿ ಕಳಿಸುತ್ತಾನ ಸೂಳೀಮಗ ನಮಗ. ಎಂಥಾ ಸೊಕ್ಕು ನೋಡಿದ್ಯಾ ತಮ್ಮಾ!"

" ಹೂಂ. "

" ತಾ ನೋಡಿದರ ತುಡುಗಲೆ ಸೆರೆ ಮಾಡೂ ಲಫಂಗ. ದಿಮಾಕ ನೋಡಿದರ ಇಷ್ಟು....ಇವ ಕರಸಿದಾಗ ನಾವು ಹೋಗಬೇಕು. ನಮ್ಮನ್ನೆಲಾ ತನ್ನ ಚಾಕರಿ ಆಳುಗಳಂತ ತಿಳಕೊಂಡಾನ.... "

" ಹುಂ.... "

" ಹೋಗೂಣೋ, ಬ್ಯಾಡೋ ? "

" ನೀನs ನೋಡು ಹೆಂಗ ಮಾಡೂದು. ಹೋಗೂಣಂದರ ಹೋಗೂಣು. ಬ್ಯಾಡಂದರ ಬ್ಯಾಡ. "

" ಅವ ಅನ್ನೂದರೆ ಏನು ನೋಡೂಣಂತ. ಹೋಗಿ ಬರೂಣು ಏಳು. "

ಬಾಗಿಲಿಗೆ ಬೀಗ ಜಡಿದು ಇಬ್ಬರೂ ಕಾಮಣ್ಣನ ಮನೆಗೆ ಬಂದಾಗ ಆತ ತನ್ನ ಮನೆಯ ಹೊರಗಿನ ಕೊಟಡಿಯಲ್ಲಿ, ಅಲ್ಲಿದ್ದ ಒಂದೇ ಒಂದು ಕುರ್ಚಿಯ ಮೇಲೆ ಕುಳಿತುಕೊಂಡಿದ್ದುದು ಕಾಣಿಸಿತು. ಕೆಳಗಡೆ ಕಂಬಳಿಯ ಮೇಲೆ, ಗೋಡೆಗೊರಗಿ ಕುಳಿತು ಭೀಮಪ್ಪ ಬೀಡಿ ಸೇದುತ್ತಲಿದ್ದ. ಅವನ ಮಕ್ಕಳು–ಗಿಡ್ಡ, ಪುಂಡ ಇಬ್ಬರೂ–ಕೊಟಡಿಯ ಹತ್ತಿರದ ಕಟ್ಟೆಯ ಮೇಲೆ ಕುಳಿತಿದ್ದವರು ಗಿರಿಯುನನ್ನೂ ಅವನ ಅಜ್ಜನನ್ನೂ ಇರಿಯುವ ಹಾಗೆ ಕೆಕ್ಕರಿಸಿ ನೋಡಿದರು.

ಬಂದವರನ್ನು ಕಂಡರೂ ಕಾಣದವನಂತೆ ಕಾಮಣ್ಣ ಸುಮ್ಮನೆ ಕುಳಿತಿದ್ದ. ಭೀಮಪ್ಪನೂ ಬಾಯಿ ಬಿಗಿದುಕೊಂಡಿದ್ದ. ಯಾರೂ ಅವರನ್ನು ಕರೆಯಲಿಲ್ಲ, ಕುಳಿತುಕೊಳ್ಳಲೂ ಹೇಳಲಿಲ್ಲ. ಅಜ್ಜ, ಮೊಮ್ಮಗ ಇಬ್ಬರೂ ತಾವಾಗಿಯೆ ಒಂದೆಡೆ ಕುಳಿತುಕೊಂಡರು.

" ಏನ್ ಕಾಮಣ್ಣ, ಯಾಕ ಕರಿಸಿದಿ ? "

" ಹಂ....ಹಂ.... " ಎನ್ನುತ್ತ ಕಾಮಣ್ಣ ಅಜ್ಜನ ಕಡೆ ದೃಷ್ಟಿ ತಿರುಗಿಸಿದ. " ಬಂದಿಯೇನ ? ನಿನ್ನ ಮೊಮ್ಮಗನೂ ಬಂದಾನೋ ಇಲ್ಲೋ ? ಹೂಂ. ನೀವೇನ ಬರ್ತೀರೋ ಇಲ್ಲೋ ಅಂತ ತಿಳಿದಿದ್ದಿನಿ. ಈಗೇನಪಾ,

ನಿಮ್ಮನ್ನ ಕೇಳುವರು ಯಾರು? ನಮ್ಮಂಥವರದೆಲ್ಲಾ ಏನ ಕಿಮ್ಮತ್ತು ನಿಮಗ? ಹಂ?"

ಕೈಯಲ್ಲಿ ಹಿಡಿದಿದ್ದ ಕುಡಗೋಲಿನಿಂದ ಕಟ್ಟೆಯ ಮೇಲೆ ತಾಳ ಹಾಕುತ್ತ ಪುಂಡ ಮತ್ತೊಮ್ಮೆ ಗಿರಿಯನನ್ನು ಕ್ರೂರವಾಗಿ ದಿಟ್ಟಿಸಿದ. ಪುಂಡ ಎಂಬುದು ಅವನ ಮೂಲ ಹೆಸರೇನೂ ಅಲ್ಲ. ಹಳ್ಳಿಯಲ್ಲೆಲ್ಲ ಅವನೇ ದೊಡ್ಡ ಪುಂಡ ನಾಗಿದ್ದುದರಿಂದ ಜನರು ಅವನನ್ನು ಹಾಗೆ ಕರೆಯುತ್ತಿದ್ದರು. ಕಾಲಕ್ರಮ ದಲ್ಲಿ ಅದೇ ಹೆಸರು ಬಳಕೆಗೆ ಬಂದು ಬಿಟ್ಟಿತ್ತು.

"ಹಿಂಗ್ಯಾಕ ಮಾತಾಡ್ತೀ ಕಾಮಣ್ಣಾ?" ಎಂದ ಅಜ್ಜ.

"ಹಂ? ನುತ್ತೆಂಗ ಮಾತಾಡೂದು? ಮಾತಾಡಾಕರೆ ಕಲಿಸಲಾ ನನಗ? ಹಂ...." ಎಂದು ನುಡಿದು ಅಣಕದ ನಗೆ ನಕ್ಕು ಕಾಮಣ್ಣ ಮುಂದುವರಿಸಿದ. "ನಿಮಗೇನಪಾ, ಯಾವಾಗಲೂ ಸಾವುಕಾರರ ಸಂಗತಿ.... ಕಲಿತವರ ಸಾವಾಸ....ಚಲೋ ಮಾತಾಡಾಕೂ ಬರುತ್ತೈತಿ ನಿಮಗ. ನಾವೇ ನಪಾ, ಹುಂಬರು....ಹಳ್ಳಿಯ ಹುಂಬರು........ನಮಗೇನ್ ಬಂದೀತು ಮಣ್ಣು ಮಾತಾಡಾಕ....ಹುಂ....ಏನ ಹೇಳುತಿದ್ದಿನಿ? ನಮ್ಮದೆಲ್ಲಾ ಏನು ಕಿಮ್ಮತ್ತು ನಿಮಗ? ಆ ಸಾವುಕಾರ ಆ ಗೌಡ ಅದಾರಲ್ಲಾ ನಿಮ್ಮ ಧಣೇರು. ಅವರಽ ದೇವರು ನಿಮಗ.... ಹಂ? ಯಾಕೋ ಭೀಮಾ?"

"ಹುಂಽಽ" ಎಂದ ಭೀಮಪ್ಪ.

ಪುಂಡ ಕೆಮ್ಮಿದ.

ಪೈಲ್ವಾನ್ ಗಿಡ್ಡ ದೃಷ್ಟಿಯನ್ನು ಕೆಳಗಡೆ ಹೊರಳಿಸಿ ತನ್ನ ಉಬ್ಬಿದೆದೆ ಯನ್ನು ನೋಡಿಕೊಂಡ. ಅದೊಂದು ಅಭ್ಯಾಸವೇ ಆದಂತಾಗಿತ್ತು ಗಿಡ್ಡನಿಗೆ. ತನ್ನ ಎದೆಯನ್ನು ಎಷ್ಟು ಸಲ ನೋಡಿಕೊಂಡರೂ ತೃಪ್ತಿಯಾಗುತ್ತಿರಲಿಲ್ಲ ಅವನಿಗೆ.

"ಹಂ....ಏನ ಹೇಳುತಿದ್ದಿನಿ? ಅವರಽ ದೇವರಪ್ಪಾ ನಿಮಗ. ಕಾಮ ಣ್ಣನ ಮಾತು ಯಾಕ ಕೇಳೀರಿ ನೀವು?"

"ಸೊಕ್ಕು ಇಳಿದ ಮ್ಯಾಲ ಕೇಳುತಾರ....ಹುಂ....ಹುಂ...." ಎಂದ ಪುಂಡ.

"ಆ ಮ್ಯಾಲ ಕೇಳಿದರ ಏನುಪಯೋಗ? ಎಲ್ಲಾ ಹಾಳಾದ ಮ್ಯಾಲ?

ಹುಂ....ಅವ ಆ ಗೌಡ ಒಬ್ಬ ನಮ್ಮ ಜಾತಿಗೇ ಮೂಲ ಆಗಿ ಕುಂತಾನ. ನಮ್ಮನಮ್ಮೊಳಗ ಜಗಳಾ ಹಚ್ಚೂದು........ನಾವು ನಾವs ಹಾಳಾಗೂದನ್ನ ನೋಡಿ ನಗೂದು. ರೊಕ್ಕಾ ತಿನ್ನೂದು...ಲಂಚಬಡಕ ಸೂಳೀಮಗಾ.... ಅವನ ಮಾತು ಕೇಳಿಕೊಂಡು ಆ ಹೊಲಾ ಹಿಡಿಯಾಕ ಹೊಂಟೀಯೇನು ನೀ ? "

" ಅವನ ಮಾತ್ಯಾಕ ಕೇಳೂಣು ? ಸಾವುಕಾರ ಹೊಲಾ ಕೂಲಿಗೆ ಹಚ್ಚುತೀನಿ ಅಂದ. ಹೂಂ ಅಂದಿವಿ. "

" ಆ ಹೊಲಾ ಹಿಡಿಯೂದು ಅಂದರ ಬೆಂಕೀ ಹಿಡಿದಂಗ ಅಂತ ತಿಳಕೋ ಮುದುಕಾ. ಹುಡುಗಾಟ ಅಲ್ಲ ಇದೆಲ್ಲಾ. ಭೀಮು, ನೀ, ನಾ ಎಲ್ಲಾ ಒಂದs ಜಾತಿಯವರು. ನಾವೆಲ್ಲಾ ಒಂದಾಗೀ ಇರಾಕ ಬೇಕು. ಬ್ಯಾರೆ ಜಾತಿಯವರ ಮಾತು ಕೇಳಿ ಕೆಡಬ್ಯಾಡ. "

" ಇದರಾಗ ಜಾತೀದೇನ ಸಂಬಂಧ ಐತ್ಯೋ ಕಾಮಣ್ಣಾ ? ಈಗಿರೂ ಚೋಟು ಹೊಲದಾಗ ನಮ್ಮ ಹೊಟ್ಟೆ ಹೆಂಗ ತುಂಬಬೇಕು ? ಗಿರಿಯಗ ಇನ್ನೊಂದು ಮದುವೀ ಆಗಾಕಬೇಕಲ್ಲ ? ಅದಕ್ಕೆಲ್ಲಾ ರೊಕ್ಕ ಬೇಕೋ ಬ್ಯಾಡೋ ? "

ರೊಕ್ಕ ಬೇಕಾದರ ನಾ ಹೇಳಿದಂಗ ಮಾಡಂತ ಹೇಳು ಅವನಗ. ದಿನಾ ಮೂರು ರೂಪಾಯಿ ತನಕಾ ಕೊಡುತೀನಿ ಬಾ ಅಂತ ಹೇಳಿದರ ಅಂಥಾ ಕೆಲಸಾ ನಾ ಮಾಡೂದಿಲ್ಲಂತ ದಿಮಾಕ ಮಾಡಿದ ನಿನ್ನ ಮೊಮ್ಮಗ. ಈ ಗಿಡ್ಡ ಪುಂಡ ಎಲ್ಲಾ ಮಾಡೂದಿಲ್ಲೇನ ? "

" ಅವರು ಮಾಡಿದರ ಮಾಡಲೊಲ್ಲರ‍್ಯಾಕ ? ನನಗೇನ ಬ್ಯಾಡ ಅಂಥಾ ಹೇಸಿ ಕೆಲಸ. ಸೆರೆ ಹೊತ್ತುಕೊಂಡು ಹೋಗಿ ಊರೂರಿಗೆ ಕೊಟ್ಟುಬರೂ ದಂದರೇನ ಕಿಮ್ಮತ್ತಿನ ಕೆಲಸೇನ ? " ಎಂದ ಗಿರಿಯ.

ಗಿಡ್ಡ, ಪುಂಡ ಇಬ್ಬರೂ ಗಿರಿಯನ ಕಡೆ ತಿರುಗಿ ' ಗುರ್‍ರ್ ' ಎಂದರು. ಕಾಮಣ್ಣ ಕೆಮ್ಮಿ, ಉಗುಳು ನುಂಗಿ ಹೇಳಿದ:

" ರೊಕ್ಕ ಬೇಕಂದರ ಸೆರೆ ಹೊರಾಕೂ ತಯಾರಾಗಬೇಕು. ಮಾರಾಕೂ ತಯಾರಾಗಬೇಕು. ಹೇಣತಿ ಏನ ಹಂಗs ಬರ‍್ತಾಳೇನ ? ಏನ, ನಿಮ್ಮ ಗೌಡ ಎಲ್ಲೆರೆ ಕೊಡಸ್ತಾನೋ ಫುಕಟದಾಗ ? ಹುಂ....ಏನಂತೀರಿ ಈಗ,

ಹೇಳಿ ಬಿಡ್ರಿ. ನಮ್ಮ ಮಾತು ಕೇಳಿಕೊಂಡು ಸುಮ್ಮನs ಇರುತೀರೋ, ಇಲ್ಲಾ—ಆ ಗೌಡನ ಮಾತು ಕೇಳಿಕೊಂಡು ಹೊಲಾ ಹಿಡೀತೀರೋ??

"ಮಾಡುತೀವಿ ಅಂತ ಹೇಳಿಬಿಟ್ಟೇವಿ ಧರ್ಮಣ್ಣಾಗ."

"ಹಿಂಗೇನ? ಹಿಡಿದಂಗs ಆಗ್ಯೈತಿ? ಹಿಡೀತೀರಿ ಹಂಗಾದರ ಚಲೋ....ನೋಡು ಮುದುಕಾ. ಒಳ್ಳೆ ಮಾತಿನಾಗ ಕೇಳಿದೀ, ನೆಟ್ಟಗಾತು. ಇಲ್ಲದಿದ್ದರ ಬಾಳ ಫಜೀತಿ ಆಗುತ್ತೈತಿ ನೋಡು. ನಮ್ಮ ವಿರುದ್ಧ ಹೋಗಿ ನೀವು ಈ ಊರಾಗ ಇರುತೀರಿ ಹೆಂಗ? ಬಾಳೆೀವು ಮಾಡುತೀರಿ ಹೆಂಗ? ಈ ಕಾಮಣ್ಣಾನ ಶಕ್ತಿ ಏನು ಅನ್ನೋದು ನಿಮಗ ಗೊತ್ತೈತೋ ಇಲ್ಲೋ? ಊರ ಗೌಡನs ನಿನ್ನ ಕಡೆ ಅದಾನ, ಇವರೇನ ಮಾಡುತಾರಂತ ತಿಳಿದಿರ ಬಹುದು ನೀ, ಗೌಡ ಇದ್ದರ ತನ್ನ ಮನ್ಯಾಗಿರತಾನ. ಪೋಲೀಸ ಹವಾಲ್ದಾರ, ಫೌಜದಾರ, ಇನಸ್ಪೇಟರ್ ಎಲ್ಲಾ ನನ್ನ ಕೈಯಾಗದಾರ. ತಿಳೀತೇನ? ನಾ ಮನಸು ಮಾಡಿದರ ನಿನ್ನ, ನಿನ್ನ ಮೊಮ್ಮಗನ್ನ, ನಿಮ್ಮ ಗೌಡನ್ನ, ನಿಮ್ಮ ಸಾವುಕಾರನ್ನ ಎಲ್ಲಾರನೂ ಕೂಡೇ ಜೇಲಿಗೆ ಹಾಕಿಸ್ತೀನಿ, ತಿಳೀತೇನ? ಯಾಕೋ, ಭೀಮಾ?"

"ಹುಂ...." ಎಂದ, ಭೀಮಪ್ಪ.

ಪುಂಡ ಕೆಮ್ಮಿದ.

ಗಿಡ್ಡ, ಮೀಸೆ ಹುರಿ ಮಾಡಿಕೊಳ್ಳುತ್ತಾ ತನ್ನ ಎದೆ ನೋಡಿಕೊಂಡ.

"ಏನಂತಿಯೋ ಮುದುಕಾ?" ಮತ್ತೆ ಕೇಳಿದ ಕಾಮಣ್ಣಾ.

ಈ ಪ್ರಶ್ನೆಗೆ ಉತ್ತರವೀಯದೆ ಮುದುಕ ಅಲ್ಲಿಂದೆದ್ದು ಹೊರಟುಬಿಟ್ಟ. ಗಿರಿಯನೂ ಅವನನ್ನು ಹಿಂಬಾಲಿಸಿಕೊಂಡು ಹೊರಟ.

ಅವರಿಬ್ಬರೂ ಹೋದ ಬಳಿಕ ಕಾಮಣ್ಣಾ ಕುರ್ಚಿಯಿಂದಿಳಿದು, ಒಳಗಡೆ ಹೋಗಿ, ಸೆರೆ ತುಂಬಿದ ಸೀಸೆಯನ್ನೂ ಕಪ್ಪುಗಳನ್ನೂ ತೆಗೆದುಕೊಂಡು ಬಂದು, ಭೀಮಪ್ಪನ ಜತೆಗೆ ಕುಳಿತು ಆ ಸೀಸೆಯನ್ನೆಲ್ಲ ಬರಿದು ಮಾಡಿದ. ಇಬ್ಬರಿಗೂ ಉತ್ಸಾಹ ಉಕ್ಕೇರಿ ಬಂತು.

"ಅವರೆಲ್ಲಾರನೂ ಜೇಲಿಗೇ ಕಳಿಸಿಬಿಡೂಣು ಭೀಮಾ, ನೀಯೇನೂ ಚಿಂತೀ ಮಾಡಬ್ಯಾಡ" ಎಂದ ಕಾಮಣ್ಣಾ.

"ಅವರನ್ನ ಕಡದs ಬಿಡೂಣು," ಎಂದ ಭೀಮಪ್ಪ.

" ಹುಂ. ಕಡದ್ಕ ಬಿಡೂಣು," ಎಂದ ಕಾಮಣ್ಣ.

" ತುಂಡ ತುಂಡ ಮಾಡಿ ಬುಟ್ಟೀ ತುಂಬೂಣು, " ಎಂದ ಭೀಮಪ್ಪ.

" ಹುಂ. ಬುಟ್ಟೀ ತುಂಬೂಣು, " ಎಂದ ಕಾಮಣ್ಣ.

ಗಿಡ್ಡ ಪುಂಡ ಇಬ್ಬರೂ ಅಲ್ಲಿಂದೆದ್ದು ಬಸವಾಣಿಯ ಚಹದಂಗಡಿಗೆ ಹೊರಟುಹೋಗಿದ್ದರು. ಇಸ್ಪೀಟು ಆಟದಲ್ಲಿ ವೈಮರೆತಿದ್ದ ನಿರುದ್ಯೋಗಿಗಳ ತಂಡ ಅವರನ್ನು ಮೌನದಿಂದಲೇ ಸ್ವಾಗತಿಸಿತು.

ಒಲೆಯೆದುರಿಗೆ, ಬರಿಯದಾದ ಚಹದ ಡಬ್ಬವೊಂದರ ಮೇಲೆ ಕುಳಿತು ಕೊಂಡು ಬಸವಾಣಿ ಅವಲಕ್ಕಿ ಕರಿಯುವುದರಲ್ಲಿ ನಿರತನಾಗಿದ್ದ. ಅವನ ಪ್ರೇಯಸಿ ನಾಗಿ ಕೆಳಗಡೆ ಕುಳಿತುಕೊಂಡು, ಆತ ಕರಿದ ಅವಲಕ್ಕಿಗೆ ಅರಿಸಿಣ ವನ್ನೂ ಖಾರವನ್ನೂ ಬೆರಸಿ ಚೂಡಾ ತಯಾರಿಸುವುದರಲ್ಲಿ ತೊಡಗಿದ್ದಳು. ಬಸವಾಣಿಯ ಹಣೆಯ ಮೇಲಿಳಿದು ಬಂದ ಬೆವರು ಹನಿಹನಿಯಾಗಿ ತೊಟ್ಟಿಕ್ಕು ತ್ತಿತ್ತು. ಅದನ್ನು ಆಗಾಗ ಎಡದೋಳಿನಿಂದ ಒರಸಿಕೊಳ್ಳುತ್ತ ಆತ ನಡು ನಡುವೆ ಬೀಡಿಯನ್ನು ಎಳಿಯುತ್ತಿದ್ದ.

ಪುಂಡ ಒಲೆಯ ಹತ್ತಿರ ಬಂದು, ಚೂಡಾದ ಬುಟ್ಟಿಗೆ ಕೈಹಾಕಿ, ಒಂದು ಮುಷ್ಟಿ ಚೂಡಾ ಎತ್ತಿ ಬಾಯಿಗೆ ಹಾಕಿಕೊಂಡು ನುರಿಸುತ್ತ— " ಹ ಹ ಹ! ಏನ ರುಚಿಕಟ್ಟಾಗಿ ಮಾಡಿದಿಯೇ ನಾಗೀ! " ಎಂದು ನುಡಿದ.

ನಾಗಿ ತಲೆಯೆತ್ತಿ, ಪುಂಡನ ಕಡೆ ದೃಷ್ಟಿ ತಿರುಗಿಸಿ ನಸುನಕ್ಕಳು ಮೂಗಿಲ್ಲದ ಆ ಮುಖದಲ್ಲಿ ನಗೆ ಬಲು ವಿಲಕ್ಷಣವಾಗಿ ಕಾಣುತ್ತಿತ್ತು.

ನಾಗಿ, ಕೇವಲ ಬಸವಾಣಿಯ ಪ್ರೇಯಸಿಯಾಗಿದ್ದಳಾದರೂ ಚಹದಂ ಗಡಿಗೆ ಬರುವ ಗಿರಾಕಿಗಳೆಲ್ಲರೂ ಅವಳನ್ನು ' ನಾಗೀ ' ಎಂದೇ ಸಲುಗೆಯಿಂದ ಸಂಬೋಧಿಸುತ್ತಿದ್ದರು. ಆಗಾಗ ತಮಾಷೆಯ ಮಾತು ಆಡಿ ನಕ್ಕು ನಗಿಸು ವವರೂ ಇದ್ದರು. ನಾಗಿ ಯಾವುದಕ್ಕೂ ಯಾರ ಮೇಲೂ ಮುನಿದುಕೊಳ್ಳದೆ ಎಲ್ಲರೊಡನೆ ಸರಲತನದಿಂದಲೂ ಸಲುಗೆಯಿಂದಲೂ ನಡೆದುಕೊಳ್ಳುತ್ತಿದ್ದಳು. ಬಸವಾಣಿಯೂ ನಗುತ್ತಲೇ ಇರುತ್ತಿದ್ದ. ಅವರಿಬ್ಬರ ಪ್ರಣಯದ ಕಥೆ ಹಳ್ಳಿ ಯವರಿಗೆಲ್ಲ ಚೇಷ್ಟೆಯ ವಿಷಯವಾಗಿತ್ತು. ಮೂರು ವರ್ಷಗಳ ಹಿಂದೆ ಬಸ ವಾಣಿ ಬೇರೊಂದು ಊರಲ್ಲಿ ಚಹದಂಗಡಿ ಇಟ್ಟಿದ್ದಾಗ, ನೆರೆಮನೆಯ ರೈತನ ಹೆಂಡತಿ ನಾಗಿ ಅವನನ್ನು ಕಂಡು ಮರುಳಾಗಿದ್ದಳು. ಇಬ್ಬರಲ್ಲೂ ರಹಸ್ಯ

ವಾಗಿ ಸಂಬಂಧ ಬೆಳೆದು ಬಂದಿತ್ತು. ಆ ರೈತನಿಗೆ ಅದು ಗೊತ್ತಾಗುತ್ತಲೂ ಆತ ಬಸವಾಣಿಯನ್ನು ಕಡಿಯಲು ಪ್ರಯತ್ನಿಸಿದ್ದ. ಅವನ ಕೈಗೆ ಸಿಕ್ಕುಬೀಳದೆ ಬಸವಾಣಿ ಚಾತುರ್ಯದಿಂದ ತಲೆ ತಪ್ಪಿಸಿಕೊಂಡು ಬಂದುಬಿಟ್ಟಿದ್ದ. ನಾಗಿಯ ಮೂಗು ಕುಯ್ದು ಅವಳನ್ನು ಮನೆಯಿಂದ ಹೊರದೂಡಿದ್ದ ರೈತ. ತವರೂರಿನಲ್ಲಿ ಅವಳು ಮುಖ ತೋರಿಸುವಂತಿರಲಿಲ್ಲ. ಸರಿ. ಬಸವಾಣಿಯೇ ಗತಿಯೆಂದು ಅವನಿದ್ದಲ್ಲಿಗೆ ಬಂದು ಬಿಟ್ಟಿದ್ದಳು. ಮೂಗು ಕುಯ್ಯಿಸಿಕೊಂಡವಳನ್ನು ಇಟ್ಟುಕೊಂಡರೆ ಊರೆಲ್ಲವೂ ಹಾಸ್ಯ ಮಾಡುವುದೆಂಬುದು ಗೊತ್ತಿದ್ದರೂ ಬಸವಾಣಿ ಅವಳನ್ನು ಪ್ರೀತಿಯಿಂದ ಇಟ್ಟುಕೊಂಡಿದ್ದ. ಮದುವೆಯಾದ ದಂಪತಿಗಳಿಗಿಂತ ಹೆಚ್ಚಿನ ಪ್ರೀತಿಯಿಂದ ಅವರಿಬ್ಬರೂ ಸಂಸಾರ ಮಾಡಿಕೊಂಡಿದ್ದರು. ನಾಗಿ ಅಲ್ಲಿಗೆ ಬಂದ ಹೊಸದರಲ್ಲಿ ಕೆಲದಿನಗಳ ವರೆಗೆ ಊರವರು ಅವಳನ್ನು ' ಮೂಗಹರಕಿ ' ಎಂದು ಹೀಯಾಳಿಸುತ್ತಿದ್ದರಾದರೂ ಕಾಲಕ್ರಮದಲ್ಲಿ ಅವಳ ಬಗೆಗಿದ್ದ ಜುಗುಪ್ಸೆ ಮರೆಯಾಗಿ ಹೋಗಿತ್ತು. ಅಂಗಡಿಗೆ ಬರುತ್ತಿದ್ದವರೆಲ್ಲ ಅವಳನ್ನು ಸಹಾನುಭೂತಿಯಿಂದ ಕಾಣತೊಡಗಿದ್ದರು. ಅವಳು ಬಲು ರುಚಿಕಟ್ಟಾಗಿ ಚಹ ತಯಾರಿಸುತ್ತಿದ್ದುದೂ ಗಿರಾಕಿಗಳ ಮೆಚ್ಚುಗೆಗೆ ಕಾರಣವಾಗಿರಬಹುದು.

" ಒಂದು ಉಂಡೀ ಕೊಡು ನಾಗೀ, " ಎಂದ ಗಿಡ್ಡ.

ಗಿಡ್ಡನಿಗೆ ಉಂಡೆ ಎಂದರೆ ಬಲು ಆಸೆ. ಬಾದಾಮಿ, ಅಂಟು, ಕೊಬ್ಬರಿ ಚೂರು, ಒಣದ್ರಾಕ್ಷೆ, ಸಕ್ಕರೆ ಕೂಡಿಸಿ ನಾಗಿ ತಯಾರಿಸುತ್ತಿದ್ದ ಉಂಡೆಗಳಿಗೆ ಗಿಡ್ಡನೇ ಮುಖ್ಯ ಗಿರಾಕಿಯಾಗಿದ್ದ. ಪೈಲ್ವಾನನಾಗಿದ್ದ ಆತ ಚಹವನ್ನೆಂದೂ ಮುಟ್ಟುತ್ತಿರಲಿಲ್ಲ. ಚಹದಂಗಡಿಗೆ ಬಂದವನು ಒಂದು ಮೂಲೆಯಲ್ಲಿ ಕುಳಿತುಕೊಂಡು ಇಸ್ಪಿಟ:ಆಟವನ್ನು ನಿರೀಕ್ಷಿಸುತ್ತಿದ್ದ ಹಾಗೆ ಒಂದಾದ ಮೇಲೊಂದರಂತೆ ನಾಲ್ಕೈದು ಉಂಡೆಗಳನ್ನು ತಿಂದು ಮುಗಿಸುತ್ತಿದ್ದ. ಆ ನಂತರ ಒಂದೆರಡು ಪ್ಲೇಟು ಚಕ್ಕಲಿ ತಿಂದು. ಮೇಲೆ ನೀರು ಕುಡಿದು ಬಾಯಿ ಒರಸಿಕೊಳ್ಳುತ್ತ ಇಸ್ಪೀಟಾಟದಲ್ಲಿ ಸುಗ್ಗುತ್ತಿದ್ದ. ಬೀಡಿ, ಸಿಗರೇಟು ಯಾವುದರ ಚಟವೂ ಗಿಡ್ಡನಿಗಿರಲಿಲ್ಲ. ಇಸ್ಪೀಟಿನ ದುರಭ್ಯಾಸವೊಂದನ್ನು ಬಿಟ್ಟರೆ ಇನ್ನಾವ ದುಶ್ಚಟವೂ ಅವನಿಗಿರಲಿಲ್ಲವೆಂದು ಹೇಳಬಹುದು. ಸೆರೆ ಹೊತ್ತುಕೊಂಡು ಹೋಗುವುದರಿಂದ ದೊರೆಯುತ್ತಿದ್ದ ಹಣವೆಲ್ಲವನ್ನೂ ಆತ ಉಂಡೆ. ಚಕ್ಕಲಿ,

ಬಾದಾಮಿ, ಖಾರೀಕು, ಇಸ್ಪೀಟಾಟಗಳಿಗಾಗಿ ಖರ್ಚು ಮಾಡುತ್ತಿದ್ದ. ಗಿಡ್ಡ ಸ್ವಭಾವತಃ ಮಿತಭಾಷಿ. ತಾನಾಗಿಯೆ ಯಾರನ್ನೂ ಮಾತನಾಡಿಸುತ್ತಿರಲಿಲ್ಲ. ಯಾರಾದರೂ ಮಾತನಾಡಿಸಿದಾಗ ಅವಶ್ಯವಿರುವಷ್ಟು ಮಾತ್ರ ಉತ್ತರವೀಯುತ್ತಿದ್ದ. ಅವರು ಹೆಚ್ಚಿನ ರಗಳೆಗಾರಂಭಿಸಿದಾಗ ಅಲ್ಲಿ ನಿಲ್ಲದೆ ಹೊರಟು ಹೋಗುತ್ತಿದ್ದ.

ಅಣ್ಣನ ಸ್ವಭಾವಕ್ಕೆ ಬಹ್ವಂಶಗಳಲ್ಲಿ ವಿರುದ್ಧವಾದ ಸ್ವಭಾವ ಪುಂಡನದು. 'ಕಾಲು ಕೆದರಿ ಜಗಳ ತೆಗೆಯುವ ಗೂಳಿ' ಎಂಬ ಇನ್ನೊಂದು ಹೆಸರನ್ನೂ ಅವನಿಗಿರಿಸಿದ್ದರು ಊರವರು. ಸೆರೆ ಕುಡಿಯುವುದು, ಗಾಂಜಾ ಸೇವಿಸುವುದು, ಕಂಡ ಹೆಂಗುಸರ ಮೇಲೆಲ್ಲ ಕಣ್ಣು ಹಾಕಿ ಅವರನ್ನು ಕೆಡಿಸಲು ಯತ್ನಿಸುವುದು, ತನ್ನ ದುಷ್ಕೃತ್ಯಗಳಿಗೆ ಅಡ್ಡಿ ಮಾಡಿದವರನ್ನು ಹಿಡಿದು ಥಳಿಸುವುದು—ಅವನ ನಿತ್ಯಕ್ರಮಗಳಾಗಿದ್ದುವು. ಸೆರೆಯ ಡಬ್ಬ ಹೊರುವ ಕೆಲಸದಿಂದ ದಿನವೂ ದೊರೆಯುತ್ತಿದ್ದ ಮೂರು ರೂಪಾಯಿ ಅವನ ಖರ್ಚಿಗೆ ಸಾಲುತ್ತಿರಲಿಲ್ಲ. ಊರಲ್ಲೆಲ್ಲ ಸಾಲ ಮಾಡಿಕೊಂಡಿದ್ದ. ಚಹದಂಗಡಿಯಲ್ಲಿ ಸಾಲ ನೂರಾರು ರೂಪಾಯಿಗಳ ವರೆಗೆ ಬೆಳೆದಿತ್ತು, ಅವನಿಂದ ಸಾಲದ ಹಣ ವಸೂಲುಮಾಡಿಕೊಳ್ಳುವುದೂ ಅಸಾಧ್ಯ ವಿಷಯವೆಂಬುದು ಎಲ್ಲರಿಗೂ ಗೊತ್ತಿದ್ದಿತು. ಹಣ ಕೇಳಿದವರ ತಲೆಯನ್ನೇ ಒಡೆಯಲು ಹೋಗುತ್ತಿದ್ದ ಪುಂಡ!

ಬಸವಾಣಿಯ ಚಹದಂಗಡಿಯ ಎದುರಿಗೇ ಸಾರ್ವಜನಿಕ ಭಾವಿಯಿತ್ತು. ಹಳ್ಳಿಗೆಲ್ಲ ಕುಡಿಯುವ ನೀರನ್ನೊದಗಿಸುವ ಬಾವಿಯೆಂದರೆ ಅದೊಂದೇ. ಬೆಳಗಿನಿಂದ ಸಾಯಂಕಾಲದ ವರೆಗೆ ಅಲ್ಲಿ ಹೆಂಗಳೆಯರ ಹಿಂಡು ಸೇರುತ್ತಿತ್ತು. ಚಹದಂಗಡಿಯ ಬಾಗಿಲಲ್ಲಿದ್ದ ಮುರುಕು ಕುರ್ಚಿಯ ಮೇಲೆ ಠೀವಿಯಿಂದ ಕುಳಿತುಕೊಂಡು, ನೀರಿಗೆ ಬರುವ ಪ್ರಾಯದ ಹುಡುಗಿಯರ ಮೇಲೆ ಕಣ್ಣೋಟ ಬಿಡುವುದು, ಆಗಾಗ ಕಚಕ್‌ಪಿಚಕ್ಕೆಂದು ನಗುವುದು ಪುಂಡನ ದಿನಚರಿಯಲ್ಲಿ ಮಹತ್ವದ ಭಾಗವಾಗಿತ್ತು. ಅದರಿಂದಾಗಿ ಅನೇಕ ಬಾರಿ ಬಡಿದಾಟಗಳೂ ನಡೆದಿದ್ದುವು. ಗೌಡನ ಪಕ್ಷದ ಪೈಲ್ವಾನರು ಒಂದು ಸಲ ಪುಂಡನನ್ನು ಮೂಳೆ ಮುರಿಯುವಂತೆ ಥಳಿಸಿದ್ದರು. ಏನೇ ಆದರೂ ಅವನ ಪುಂಡಾಟಿಕೆ ಕಡಿಮೆಯಾಗಿರಲಿಲ್ಲ.

ಪುಂಡನಿಗೊಂದು ಮದುವೆ ಮಾಡಬೇಕೆಂದು ಭೀಮಪ್ಪ ಸಾಕಷ್ಟು

ಯತ್ನಿಸಿದ್ದನಾದರೂ, ಪುಂಡನ ಸಕಲ ಗುಣಸಂಪನ್ನತೆಯನ್ನು ಕೇಳಿ ತಿಳಿದಿದ್ದ ಬಂಧುಗಳಾದರೂ ಅವನಿಗೆ ಹೆಣ್ಣು ಕೊಡಲು ಧೈರ್ಯ ಮಾಡಿರಲಿಲ್ಲವಾದುದ ರಿಂದ ಭೀಮಪ್ಪನ ಪ್ರಯತ್ನ ಯಶಸ್ವಿಯಾಗಿರಲಿಲ್ಲ. ಮದುವೆಯಾಗಿ, ಒಂದೇ ಒಂದು ಹೆಣ್ಣನ್ನು ಕೊರಳಿಗೆ ಕಟ್ಟಿಕೊಂಡು ಒದ್ದಾಡುವ ಇಷ್ಟ ಪುಂಡನಿಗೂ ಇರಲಿಲ್ಲವಾದುದರಿಂದ ಅವನೂ ಆ ವಿಚಾರವಾಗಿ ವಿಶೇಷ ಆಸಕ್ತಿ ತೋರಿಸಿರ ಲಿಲ್ಲ. ಹಳ್ಳಿಯವರನ್ನೆಲ್ಲ ಹೆದರಿಸುತ್ತ, ಸ್ವಚ್ಛಂದವಾಗಿ ವಿಹರಿಸುವುದರಲ್ಲಿ ಇರುವ ಮೋಜು, ಸಂಸಾರಿಯಾಗುವುದರಲ್ಲಿ ಎಲ್ಲಿಂದ ಬಂದೀತು? ಎಂದು ಯೋಚಿಸಿ ಆತ ಮದುವೆಯ ವಿಚಾರವನ್ನೇ ತ್ಯಜಿಸಿಬಿಟ್ಟಿದ್ದ. ತಾರುಣ್ಯದ ತಿಂಡಿಯನ್ನು ತೀರಿಸಿಕೊಳ್ಳಲು ಅಗ್ಗದ ಹೆಣ್ಣುಗಳ ಕೊರತೆಯೂ ಇರಲಿಲ್ಲ ಆ ಹಳ್ಳಿಯಲ್ಲಿ. ಅವನು ತಂದುಕೊಡುವ ಸೆರೆಯ ಆಮಿಷಕ್ಕೋಸ್ಕರ ಅವನ ರಹಸ್ಯಪ್ರಣಯಿನಿಯರಾಗುವ ಹರಿಜನರ ಹೆಂಗಳೆಯರೆಷ್ಟೋ ಜನ. ಅವರು ಬಡವರು. ಆದರೂ ಅನೇಕ ವರ್ಷಗಳಿಂದ ಸೆರೆಯ ಚಟಕ್ಕೆ ಬಲಿಬಿದ್ದವರು. ಕಾಯದೆಯ ನಿರ್ಬಂಧ ಬಂದ ಮಾತ್ರಕ್ಕೇ ಕುಡಿಯುವುದನ್ನು ಬಿಡಲಾರರು. ಹಾಗೆಂದು, ಚಿನ್ನದಂತೆ ತುಟ್ಟಿಯಾದ ಭಟ್ಟಿಸೆರೆಯನ್ನು ಕೊಂಡು ಕುಡಿಯ ಲಾರರು. ಸೆರೆಯಂತೂ ಬೇಕೇ ಬೇಕು. ಸರಿ. ಅದನ್ನು ದೊರಕಿಸಲು ಅವ ರಿಗಿದ್ದುದು ಒಂದೇ ದಾರಿ: ಸೆರೆ ಮಾರುವವರ ಗೆಳೆತನ. ಪುಂಡ, ಕಾಮಣ್ಣಾ, ರಾಯಾ, ತಿಪ್ಪು ಎಲ್ಲರೂ ಹರಿಜನ ಕೇರಿಯಲ್ಲಿ ಅತ್ಯಂತ ಜನಪ್ರಿಯ ವ್ಯಕ್ತಿ ಗಳಾಗಿದ್ದರು. ಪುಂಡನಂತೂ ಆ ಕೇರಿಯ ಅನಭಿಷಿಕ್ತ ರಾಜನಂತಾಗಿ ಬಿಟ್ಟಿದ್ದ.

"ನಾಗಿಯ ಚೂಡಾ ಏನ ರುಚಿಯಪಾ," ಎಂದು ನುಡಿಯುತ್ತಾ ಪುಂಡ ಮತ್ತೊಂದು ಮುಷ್ಟಿ ಚೂಡಾ ಬಾಯಿಗಿಟ್ಟುಕೊಳ್ಳುತ್ತಿದ್ದ ಹಾಗೆ, ಬಸವಾಣಿ ಕೇಳಿದ:

"ನಿಮ್ಮ ಹೊಲಾ ಗಿರಿಯ ಹಿಡೀತಾನಂತ, ಹೌದೇನೋ?"

"ಅವರಪ್ಪ ಬರಬೇಕು, ಹಿಡಿಯಾಕ," ಎಂದ ಪುಂಡ.

"ಅಂದರೇನ, ನಾಳೆ ಬಡಿದಾಟಕ್ಕ ಆಗೂದೇನೋ?"

"ನಮ್ಮ ಎದುರು ಬಡಿದಾಟಕ್ಕ ಬರೂ ಗಂಡಸಾದರೂ ಯಾವ ಅದಾನ ಊರಾಗ?"

" ಹಂಗೆಲ್ಲಾ ಜಂಬಾ ಕೊಚ್ಚಬ್ಯಾಡೋ. ಕ್ರಿಮಿನಲ್ ಮಾಡಿಸುತಾನಂತ ಗೌಡ. "

" ಆವನ ಮ್ಯಾಲ ನಾವs ಮಾಡಿಸುತೀವಿ ಕ್ರಿಮಿನಲ್. ಏನಂತ ತಿಳಿದಾನ ಅವಾ? ನಮ್ಮ ಭಾಗದ ಪೋಲೀಸ ಸಾಹೇಬ ಯಾರದಾರ ಗೊತ್ತೈತೋ ಇಲ್ಲೋ ? "

" ಯಾರಪಾ ಅವರು ? "

" ನಮ್ಮ ಜಾತಿಯವರೋ ಅವರೂ. ನಮ್ಮ ಕಾಮಣ್ಣಗ ಮಾಮಾ ಆಗಬೇಕಂತ. ಅವರ ಹೆಸರು ಕೇಳಿದರ ಜಿಲ್ಲಾಕ್ಕ ಜಿಲ್ಲಾ ಎಲ್ಲಾ ನಡುಗತೈತಿ. ಇನ್ನ ಈ ಗೌಡಂದೇನ ಹಚ್ಚೀದೀ ? ಇವ ಬಾಲಾ ಬಿಚ್ಚಿದರ ಸಾಕು, ಕೊಯ್ದs ಒಗೀತೀವಿ. ಮ್ಯಾಲ ನಮ್ಮ ಸಾಹೇಬ ಅದಾನ ಉಳಿಸಿಕೊಳ್ಳಾಕ " ಎಂದು ಹೇಳುತ್ತಾ ಪುಂಡ ಮತ್ತೊಂದು ಮುಷ್ಟಿಯಷ್ಟು ಚೂಡಾ ಬಾಯಿಗೆ ತುರುಕಿದ.

ಇಸ್ಪೀಟಿನಾಟದಲ್ಲಿ ತೊಡಗಿದ್ದ ನಿರುದ್ಯೋಗಿಗಳಲ್ಲಿ ಕೆಲವರು ಪುಂಡನ ಕಡೆ ತಿರುಗಿ ಆಶ್ಚರ್ಯದಿಂದ ಕೇಳಿದರು:

" ಖರೇ ಏನೋ ಪುಂಡಾ, ದೊಡ್ಡ ಪೋಲೀಸ್ ಸಾಬ ನಮ್ಮ ಜಾತಿಯವ ಬಂದಾನು ? "

" ಬರೀ ನಮ್ಮ ಜಾತಿಯವ ಅಷ್ಟs ಅಲ್ಲಣ್ಯೋ. ನಮ್ಮಾವs ಅವ. ನಮ್ಮ ಕಾಮಣ್ಣನ ಮಾಮಾ. "

" ಹಂಗಾದರ ನಮಗೆಲ್ಲಾ ಚಲೋ ಆತು ಬಿಡೋ. ಯಾರಪ್ಪನ ಅಂಜಿಕೀನೂ ಇಲ್ಲದಂಗ ಯಾವಾಗ ಬೇಕಾದರೂ ಇಸ್ಪೀಟು ಆಡಬಹುದು. ಏನು ಬೇಕಾದ್ದು ಮಾಡಬಹುದು " ಎಂದು ಹಳಬರ ಶಿವರಾಯಿ ನುಡಿದ.

" ಯಾವಾಗ ಬೇಕಾದಾಗ ಎಷ್ಟು ಬೇಕಾದಷ್ಟು ಕುಡೀಬಹುದು " ಎಂದು ಹರಿಜನರ ತಿಮ್ಮ ನುಡಿದ.

" ಯಾವಾಗ ಬೇಕಾದಾಗ ಯಾರ ತಲೀನಾದರೂ ಒಡೀಬಹುದು, " ಎಂದು ನಗುತ್ತ ನುಡಿದ ಬಸವಾಣಿ.

" ದೇವ್ರು ಬಂದಂಗ ಬಂದನೇನೋ ಈ ಸಾಬ ! " ಎಂದಳು ನಾಗಿ.

" ಡಿ. ಎಸ್. ಪಿ. ಸುದ್ಧಾ ಅಂಜುತಾನಂತ ನಮ್ಮ ಸಾಬಗ ! " ಎಂದು

ಹೆಮ್ಮೆಯಿಂದ ಸುಡಿದ ಪುಂಡ.

ಆ ಭಾಗದ 'ಪೋಲೀಸು ಸಾಹೇಬ' ಕಾಮಣ್ಣನಿಗೆ ಮಾವನಾಗಬೇಕಂತೆ—ಎಂಬ ವಾರ್ತೆ ಹಾ ಹಾ ಎನ್ನುವುದರೊಳಗಾಗಿ ಹಳ್ಳಿಯಲ್ಲೆಲ್ಲ ಹರಡಿತು. ಗೌಡ, ಧರ್ಮಣ್ಣ, ಅವರ ಪಕ್ಷದ ಜನರು ಎಲ್ಲರೂ ಒಳಗೊಳಗೇ ಭೀತರಾಗದಿರಲಿಲ್ಲ.

ಧರ್ಮಣ್ಣನನ್ನು ಹುಡುಕಿಕೊಂಡು ಅವನ ಅಂಗಡಿಗೆ ಹೋಗಿ ಸಿದಗೌಡ ಹೇಳಿದ:

"ಸುದ್ದಿ ಕೇಳಿದಿಯಾ ಧರ್ಮಣ್ಣ? ಹೊಸಾದು? ಪೋಲೀಸ ಸಾಬಂದು?"

"ಕೇಳೀನಿ. ಅದರಾಗ ಎಷ್ಟು ಖರೇವೋ ಎಷ್ಟು ಸುಳ್ಳೋ ಯಾಂ ಬಲ್ಲ!"

"ಖರೇ ಇದ್ದರೂ ಇರಬೇಕು. ಮನ್ನೆ ನಾ ಕಚೇರಿಗೆ ಹೋದಾಗ ಫೌಜದಾರರು ಅನ್ನುತಿದ್ದರು—ಕಾಮಣ್ಣನ ಜಾತಿಯು ಸಾಹೇಬ ಬಂದಿದಾನು ಅಂತ."

ಧರ್ಮಣ್ಣ ಅಂತರಂಗದಲ್ಲಿ ದಿಗಿಲುಗೊಂಡಿದ್ದನಾದರೂ ಅದನ್ನು ಬಹಿರಂಗ ಪಡಿಸದೆ ಮಾತನಾಡಿದ:

"ಬಂದರ ಬರಲೇಳು. ಏನಂತೆ! ಪೋಲೀಸ ಖಾತೆಯೊಳಗ ಜಾತಿಗೀತಿ ಬೀಗತನಾ ಬಿಜ್ಜತನಾ ನಡದೀತೇನು? ಈಗೇನು ಕಾಂಗರೇಸ ರಾಜ್ಯ ಐತ್ಯೋ, ಇಲ್ಲಾ ಈ ಜಾತಿಯವರ ರಾಜ್ಯ ಐತ್ಯೋ?"

"ಕಾಂಗರೇಸದವರs ಜಾತಿ ಜಾತಿಗೆ ಜಗಳಾ ಹಚ್ಚಿ, ಕಡೀತನಕಾ ಆಳಬೇಕಂತ ಮಾಡಿದಾರಂತ. ಮನ್ನೆ ಪೇಪರದಾಗ ಬಂದಿತ್ತು."

"ಹಂಗ ಪೇಪರದಾಗ ಬಂದದ್ದೆಲ್ಲಾ ನಂಬುತಾ ಹೋದರ ಬಾಳೇವು ಮಾಡಾಕಾಗಾಕಿಲ್ಲ ಸಿದಗೌಡಾ. ಮಂತ್ರಿಗಳು ಹಂಗೆಲ್ಲಾ ಜಾತಿ ಜಗಳಕ್ಕ ಪುಟ ಕೊಡುವವರಲ್ಲ...."

"ಅವರೇನೋ ಕೊಡಲಿಕ್ಕಿಲ್ಲ. ಆದರs ಅವರಿಗೆ ಗೊತ್ತಾಗದಾಂಗ ಜಿಲ್ಲಾದೊಳಗಿನ ಕಾಂಗ್ರೆಸ್ ಮಂದಿ ಈ ಜಾತಿಯವರನ್ನ ಎತ್ತಿಕಟ್ಟುತಿರಬಹುದು. ನಿನಗ ಗೊತ್ತಿಲ್ಲೇನು ಧರ್ಮಣ್ಣ, ಇಷ್ಟು ದಿನ ಕಾಂಗ್ರೆಸ್ ಚಳ

ವಳಿಗೆಲ್ಲಾ ವಿರೋಧ ಮಾಡುತ್ತಿದ್ದನಲ್ಲಾ—ಆ ಮರಿಯಪ್ಪ, ಮನ್ನೆ ಮನ್ನೆ ಖಾದೀ ಹಾಕ್ಕೊಂಡು ಕಾಂಗ್ರೆಸ್ ಸೇರಿದಾನಂತ...."

"ಯಾರು? ಸಿಂದಿ ಅಂಗಡಿ ಮಕ್ತೆ ಹಿಡಿದಿದ್ದನಲ್ಲಾ ಅವನs?"

"ಅವನs! ಸಿಂದೀ ಮಾರಿ ಮಾರಿ ಸಾವುಕಾರ ಆಗಿದಾನಲ್ಲಾ ಆ ಮರಿಯ. ಅವನ ರೊಕ್ಕದ ಮ್ಯಾಲ ಕಾಂಗ್ರೆಸಿನವರ ಕಣ್ಣು ಬಿದ್ದೈತಿ. ಚುನಾವಣಿ ಅಂತೂ ಸಮೀಪದಾಗs ಬಂತಲ್ಲಾ, ಅದರ ಖರ್ಚಿಗೇನು ಕಡಿಮಿ ಬೇಕs ಹಣಾ? ಮರಿಯನ್ನ ಬಲಿಯೊಳಗ ಹಾಕ್ಕೊಂಡರ ಇತ್ತ ಹಣಾನೂ ಸಿಕ್ಕಂಗಾತು, ಅತ್ತ ಅವರ ಜಾತಿಯ ಹೋಟೂ ಸಿಕ್ಕಂಗಾತು...."

"ಎಲ, ಎಲಾ. ಇಷ್ಟು ಜೆರಿಕೀ ಮಂದಿ ಅದಾರೇನು ಕಾಂಗರೇಸ ದವರು?"

"ಜೆರಿಕಿ ಆಗದಿದ್ದರ ಅಧಿಕಾರ ಹೆಂಗ ಕೈಯಾಗಿಟ್ಟುಕೋತಿದ್ದರು, ಧರ್ಮಣ್ಣಾ? ಮುಂದಿನ ಚುನಾವಣಿಯೊಳಗ ಗೆಲ್ಲುವದಕ್ಕಂತ ಎಂಥಾ ಹೇಸಿ ಕೆಲಸ ಮಾಡೂದಕ್ಕೂ ತಯಾರಾಗುತಾರ ಅವರು, ನೀನs ನೋಡುತೀಯಂತ. ಮರಿಯಪ್ಪ ಕಾಮಣ್ಣ. ಇಂಥಾ ಪುಂಡರಿಗೆಲ್ಲಾ ಅವರು ಸವಲತ್ತು ಕೊಡುತ್ತಿರೂದು ಇನ್ಯಾತಕ್ಕಂತ ತಿಳಿದೀ? ಇವರಿಗೆ ಅನುಕೂಲ ಆಗಲಿ ಅಂತಲೇ ಈ ಜಾತಿಗಳ ಸಾಬರನ್ನ ಈ ಭಾಗಕ್ಕ ವರ್ಗ ಮಾಡಾಕ ಹಚ್ಚಿರಬೇಕು."

"ಈ ಸಾಬ ಬಾಳ ಕೆಟ್ಟದಾನಂತ, ಹೌದೇನು?"

"ನಲವತ್ತೆರಡರ ಚಳವಳೀ ಕಾಲಕ್ಕ ಫೌಜದಾರ ಆಗಿದ್ದ ಇವ. ಎಷ್ಟೋ ಹುಡುಗರನ್ನ ಸಾಯುವ ಹಂಗ ಬಡದಿದ್ದನಂತ. ಬಾಳ ಕ್ರೂರ ಅನ್ನೋದು ಖರೇವು."

"ಹಂಗಾದರ ಗೋಳು ಬಂತಪ್ಪ" ಎಂದು ಮನಸ್ಸಿನಲ್ಲೇ ಹೇಳಿಕೊಂಡ ಧರ್ಮಣ್ಣ.

"ನಾಳೆ ಹೊಡಿಸೇ ಬಡಾವೇನು ಗಳೇ?" ಗೌಡ ಕೇಳಿದ.

"ಹೆಂಗ ಮಾಡೂಣು, ನೀನs ಹೇಳು."

"ಏನ ಆಗೂದು ಆಗಲಿ. ಹೊಡಿಸಿ ಬಿಡು ಧರ್ಮಣ್ಣಾ. ಇವರಿಗೆಲ್ಲಾ ಅಂಜಿ ಕುಂತರ ನಡಿಯೂ ಹಂಗಿಲ್ಲ. ಏನ ಆಗೂದು ಒಮ್ಮೆ ಆಗಿ ಹೋಗಲಿ. ನೋಡಿ ಬಿಡೂಣಂತ ಒಂದು ಕೈ....."

ಅತ್ತ ಗಿರಿಯನೂ ಆ ವಿಚಾರವಾಗಿಯೆ ಯೋಚಿಸುತ್ತ ಕೌದಿಯ ಮೇಲೆ ದೇಹವನ್ನೊರಗಿಸಿದ್ದ. ಎಷ್ಟೋ ಹೊತ್ತಿನವರೆಗೆ ನಿದ್ದೆಯೆ ಬರಲಿಲ್ಲ ಅವನಿಗೆ. ಪಕ್ಕದಲ್ಲಿ ಮಲಗಿದ್ದ ಅಜ್ಜನಿಗೂ ನಿದ್ದೆ ಬಂದಂತಿರಲಿಲ್ಲ.

ಆ ಪಕ್ಕದಿಂದ ಈ ಪಕ್ಕಕ್ಕೆ ಹೊರಳಿ ಹೊರಳಿ ಬೇಸರವಾಗಲು ಗಿರಿಯ ಕೌದಿಯನ್ನು ಬದಿಗೆ ಸರಿಸಿ ಎದ್ದು ಕುಳಿತ. ಕತ್ತಲಲ್ಲೇ ಬಾಲಿಯ ಮುಖ ಕಾಣಿಸಿದಂತೆ ಭಾಸವಾಯಿತು. ಅವಳ ದುಂಡುದೋಳುಗಳು, ರಸಭರಿತ ವಕ್ಷಸ್ಥಳ....ಕೋಗಿಹಳ್ಳಿಗೆ ಹೋಗಿ ಬರಲೇ—ಎಂದು ಎಣಿಕೆ ಹಾಕಿದ ಗಿರಿಯ. ಸರಿ. ಅವನ ಯೋಚನೆಗೆ ಅಡ್ಡಬರುವವರಾರು ? ಹೆಗಲ ಮೇಲೆ ಕಂಬಳಿ ಚೆಲ್ಲಿಕೊಂಡು ಮೇಲಕ್ಕೆದ್ದ.

"ಯಾಕಲೇ ಗಿರಿಯಾ ? ಎತ್ತ ಹೊಂಟೆ ?" ಮುದುಕ ಕೇಳಿದ.

"ಯಾಕೋ ನಿದ್ದಿ ಬರಲೊಲ್ದು. ಹಂಗs ಜರಾ ತಿರುಗಾಡಿಕೊಂಡು ಬರ್ತೀನಿ. ನೀ ಬಾಗಿಲಾ ಹಾಕ್ಕೊಂಡು ಮಲಕ್ಕೋ," ಎಂದು ಹೇಳಿ ಗಿರಿಯ ಮನೆಯಿಂದ ಹೊರಟ. ಅರ್ಧ ಗಂಟೆಯ ವರೆಗೆ ಹಾದಿ ತುಳಿದು ಕೋಗಿ ಹಳ್ಳಿಗೆ ಬಂದುದೂ ಆಯಿತು. ಸಣ್ಣವ್ವನ ಮನೆಯ ಬಳಿ ಬಂದಾಗ, ಮುಚ್ಚಿದ್ದ ಬಾಗಿಲಿನ ಬಿರುಕುಗಳ ಮೂಲಕ, ಒಳಗಡೆ ನಡೆದಿದ್ದ ಮಾತು ಕತೆ ಕೇಳಬರುತ್ತಿತ್ತು. ಬಾಲಿಯೊಬ್ಬಳೇ ಇಲ್ಲ. ಇನ್ನೊಬ್ಬರು ಯಾರೋ ಇದ್ದಾರೆ. ಯಾರು ? ಸಣ್ಣವ್ವನೇ ? ಊರಿಂದ ಬಂದು ಬಿಟ್ಟಳೋ ಏನೋ.

ಒಂದು ಕ್ಷಣ ಬಾಗಿಲಿನಾಚೆಯೆ ನಿಂತುಕೊಂಡು, ಅವರನ್ನು ಕೂಗು ವುದೇ ಬೇಡವೇ ಎಂದು ಯೋಚಿಸುತ್ತಿದ್ದ ಗಿರಿಯ. ಇಂಥ ಅವೇಳೆಯಲ್ಲಿ ತಾನೊಬ್ಬನೇ ಬಂದುದನ್ನು ಕಂಡು ಸಣ್ಣವ್ವ ಏನು ಯೋಚಿಸುವಳೋ ? ಆಕೆ ಊರಲ್ಲಿಲ್ಲದಿರುವ ಸಮಯದಲ್ಲಿ ತಾನು ದಿನವೂ ರಾತ್ರಿ ಬಂದು ಹೋಗುತ್ತಿರ ಬೇಕೆಂದು ತಿಳಿದುಕೊಳ್ಳಲಿಕ್ಕಿಲ್ಲವಷ್ಟೆ ? ಏನೆನ್ನಬಹುದು ಸಣ್ಣವ್ವ, ತನ್ನನ್ನು ಕಂಡು ? ಇಂಥ ರಾತ್ರಿಯಲ್ಲಿ ಬರಲು ಕಾರಣವೇನೆಂದು ಅವಳು ಕೇಳಿದರೆ ಏನೆಂದು ಉತ್ತರವೀಯುವುದು ?

ಗಿರಿಯ ಮತ್ತೊಂದು ನಿಮಿಷ ಹಾಗೆಯೆ ನಿಂತುಕೊಂಡಿದ್ದು, ಅನಂತರ ಮನಸ್ಸನ್ನು ದೃಢಗೊಳಿಸಿ, ಬಾಗಿಲು ಬಡಿದು— "ಅತ್ತೀs" ಎಂದು

ಕೂಗಿದ.

ಎಲೆ ಅಡಕೆ ತಂಬಾಕು ಜಗಿಯುತ್ತಿದ್ದ ಸಣ್ಣವ್ವ, "ಯಾರೋ ಅಂವಾ?" ಎಂದಳು. ಗಿರಿಯನ ಧ್ವನಿಯನ್ನು ಒಡನೆಯೆ ಗುರುತಿಸಿಕೊಂಡ ಬಾಲಿ ಎದ್ದು ಬಂದು ಬಾಗಿಲು ತೆಗೆದಳು.

ಒಳಗಡೆ, ಪಡಸಾಲೆಯ ಗೋಡೆಯ ಮೇಲೆ ಚಿಮಣಿ ದೀಪ ಉರಿಯುತ್ತಿತ್ತು. ಹಾಸಿದ್ದ ಚಾಪೆಯ ಮೇಲೆ, ಗೋಡೆಗೊರಗಿ ಕುಳಿತು ಸಣ್ಣವ್ವ ತಾಂಬೂಲ ಜಗಿಯುತ್ತ ಆಗಾಗ ಪಿಚಕ್ಕೆಂದು ಉಗುಳುತ್ತಲಿದ್ದಳು.

ಸಣ್ಣವ್ವನಿಗಾಗ ನಲವತ್ತೈದು ವರ್ಷವಿರಬಹುದು. ಆ ವಯಸ್ಸಿಗಾಗಲೆ ಅವಳ ತಲೆಗೂದಲು ಅರ್ಧಕ್ಕರ್ಧ ಬೆಳ್ಳಗಾಗಿದ್ದುವು. ಚರ್ಮ ಸುಕ್ಕುಗಟ್ಟಿಕೊಳ್ಳತೊಡಗಿತ್ತು. ಗಂಡನಿರುವ ವರೆಗೂ ಅವನಿಂದ ಹೊಡೆತ ತಿನ್ನುವುದರಲ್ಲೇ ಅವಳ ದಿನಗಳು ಕಳೆದುಹೋಗಿದ್ದುವು. ಅದೊಂದು ಮನೆಯನ್ನು ಬಿಟ್ಟರೆ ಇನ್ನಾವ ಆಸ್ತಿಯೂ ಇರಲಿಲ್ಲ. ಬೇರೆಯವರ ಹೊಲಗಳಲ್ಲಿ ಕೂಲಿ ಮಾಡಿ ಬಂದ ಕಾಳಿನಿಂದ ಹೊಟ್ಟೆ ಹೊರೆಯಬೇಕಾಗಿ ಬಂದಿತ್ತು. ಮೂವತ್ತು ವರ್ಷಗಳ ಕಾಲ ಅವಳದು ನರಕಸದೃಶ ಜೀವನವಾಗಿತ್ತು. ದೈತ್ಯನಂತಿದ್ದ ಗಂಡ ಸತ್ತುಹೋದ ಬಳಿಕ ಸಣ್ಣವ್ವ, ಇದ್ದುದರಲ್ಲೇ ಸ್ವಲ್ಪವಾದರೂ ಸುಖ ಪಡೆಯಲು ಶ್ರಮಿಸುತ್ತ ಬಂದಿದ್ದಳು. ಸಣ್ಣವ್ವ ಕಾಲು ಜಾರಿದವಳು–ಎಂಬುದಾಗಿ ಊರವರೆಲ್ಲ ಆಡಿಕೊಳ್ಳುತ್ತಿದ್ದರಾದರೂ ಅಂಥ ಮಾತುಗಳ ಕಡೆ ಗಮನವೀಯದೆ ಆಕೆ ತನ್ನಿಷ್ಟದಂತೆ ಆಚರಿಸುತ್ತ ಬಂದಿದ್ದಳು. ಗಂಡನ ಮನೆಯಲ್ಲಿ ಬಾಳುವೆ ಮಾಡಲಾರದೆ ಬಾಲಿ ಮನೆಗೆ ಬಂದ ದಿನ ಸಣ್ಣವ್ವನಿಗೆ ಸಂತೋಷವೇ ಆಗಿತ್ತು. "ನಾ ಅಂತೂ ಬಡಿತ ತಿಂದು ನರಳಿದ್ದಾತು. ನನ್ನ ಮಗಳಾದರೂ ನಾಕು ದಿನ ಸುಕದಿಂದ ಇರಲಿ. ನಾಕು ಒಸ್ತಾ ಒಡವೀ ಹಾಕ್ಕೊಂಡು ಮೆರೀಲಿ" ಎಂದು ಹೇಳಿಕೊಂಡು ಬಾಲಿಯನ್ನು ಅಲ್ಲಿಯೆ ನಿಲ್ಲಿಸಿಕೊಂಡು ಬಿಟ್ಟಿದ್ದಳು. ಗಂಡನ ಮನೆಗೆ ಹೋಗುವ ಬಯಕೆ ಬಾಲಿಗೂ ಇರಲಿಲ್ಲ. ಅವಳಿಗೂ 'ಸುಕದಿಂದ' ಇರುವ ಆಸೆ. ಸರಿ. ತಾಯಿ-ಮಕ್ಕಳಿಬ್ಬರೂ ಮೂರು ವರ್ಷಗಳಿಂದ ಬಲು ಮೋಜಿನಿಂದ ಜೀವನ ನಡಸುತ್ತ ಬಂದಿದ್ದರು. ಅವರ ಜೀವನದಲ್ಲಿ ಭಾಗ ವಹಿಸಬಯಸುವ ರಸಿಕರಿಗೂ ಕೊರತೆಯಿರಲಿಲ್ಲ.

" ಏನಡಾ, ಇಂಥಾ ಹೊಟ್ಟಿನಾಗ ಬಂಡೀ? " ಎಂದು ಕೇಳುತ್ತಾ ಸಣ್ಣವ್ವ ರಕ್ತದಂತೆ ಕೆಂಪಗಾಗಿದ್ದ ರಸವನ್ನು ಬಾಗಿಲಿನ ಕಡೆ ಉಗುಳಿದಳು.

ಗಿರಿಯನ ಮುಖದಿಂದ ಮಾತೇ ಹೊರಡಲಿಲ್ಲ. ಆತ ತಬ್ಬಿಬ್ಬಾಗಿ ಕುಳಿತುಕೊಂಡ. ಅಂಥ ಸಂದರ್ಭ ಅವನಿಗೆ ತೀರ ಹೊಸದು. ಅಂಥ ಸಮಯದಲ್ಲಿ ಎಂಥ ಮಾತನಾಡಬೇಕೆಂಬುದನ್ನೂ ಆತ ಅರಿಯ.

ಅವನ ಸ್ವಭಾವವನ್ನು ತಕ್ಕಮಟ್ಟಿಗೆ ಅರಿತುಕೊಂಡಿದ್ದ ಬಾಲಿ ತಾನೇ ಮಾತನಾಡಿದಳು:

" ನಾನs ಹೇಳಿದ್ದಿನೇಳs ಬಾ ಅಂತ. ಬಂದಾನ. "

ಸಣ್ಣವ್ವ ಒಂದು ರೀತಿಯ ನಗೆ ನಕ್ಕಳು. ಗಿರಿಯನೂ ಹಲ್ಲು ಕಿರಿದ. ಅವನ ಗದ್ದವನ್ನು ತಿವಿಯುತ್ತಾ ಬಾಲಿಯೆಂದಳು:

" ಬರಾಂವ ಬಂದಿ. ಹಂಗs ಬರಿಗೈಯಾಗ ಬರಬೇಕೇನೋ ಮೂಳಾ ! ಏನಾರs ತರಬಾರದೂ ? "

ಅವಳ ಮಾತನ್ನು ಅರ್ಥ ಮಾಡಿಕೊಳ್ಳುವಂಥ ತೀಕ್ಷ್ಣ ಬುದ್ಧಿ ಗಿರಿಯನಿಗಿರಲಿಲ್ಲ. ಆತ ಎಳೆಮಗುವಿನಂತೆ ಬಾಲಿಯ ಮುಖವನ್ನೇ ಮಿಕಿ ಮಿಕಿ ನೋಡುತ್ತ ಕುಳಿತ.

" ಇನ್ನs ಮಡುವಿ ಆಗಿಲ್ಲೇನೋ ಗಿಡಿಯಾ ನಿಂದು ? " ಸಣ್ಣವ್ವ ಕೇಳಿದಳು.

" ನನ್ನs ಆಗಬೇಕಂತ ಮಾಡಿದಾನ, ಅವ್ವಾ " ಎಂದು ನಗುತ್ತ ಹೇಳಿದಳು ಬಾಲಿ.

" ಹೌಡೇನೋ ಮೂಳಾ ? " ಎಂದು ನುಡಿದು ಸಣ್ಣವ್ವನೂ ನಗತೊಡಗಿದಳು.

" ಮದುವಿ ಆಗಬೇಕಂತ ಮಾಡಿದಾನ. ಬರುವಾಗ ಮಾತ್ರ ಬರಿಗೈಯಾಗs ಬರುತಾನ. ಬುದ್ಧಿಯಿಲ್ಲದ ಕ್ವಾಣ ! " ಎಂದಳು ಬಾಲಿ.

ತಾನು ಬರಿಗೈಯಲ್ಲಿ ಬರಬಾರದಾಗಿದ್ದಿತೇ ? ಹಾಗಾದರೆ ತರಬೇಕಾಗಿದ್ದುದೇನನ್ನು ? ಗಿರಿಯ ಯೋಚಿಸಿಯೆ ಯೋಚಿಸಿದ. ಏನೂ ಹೊಳೆಯಲಿಲ್ಲ. ಬಾಲಿ ಆಡುವುದೇ ನಿಜವಿರಬೇಕು. ತಾನು ಕೋಣನಾಗಿದ್ದರೂ ಆಗಿರಬಹುದು—ಎಂದುಕೊಂಡ.

ಬಾಯಲ್ಲಿನ ರಸವನ್ನೆಲ್ಲ ಉಗುಳಿ, ನೀರಿನಿಂದ ಬಾಯಿ ಮುಕ್ಕಳಿಸಿ, ಸಣ್ಣವ್ವ ಕೇಳಿದಳು:

" ಇಷ್ಟು ವರ್ಷ ದುಡಿದು ಎಷ್ಟು ಗಂಟು ಮಾಡೀಯೋ ಗಿರಿಯಾ ? "

" ಗಂಟು ? "

" ಅಂದರ ತಿಳೀಲಿಲ್ಲೇನ ? ಏನಾರೆ ಒಸ್ತಾ ಒಡಿವೀ ಮಾಡಿಸಿದಿಯೋ ಇಲ್ಲೋ ? ಹೇಣತಿ ಏನ ಫುಕಟ ಸಿಗುತಾಳೇನ ? "

" ಫುಕಟ ಯಾಕ ಸಿಕ್ಕಾಳು ? ತೆರಾ ಕೊಡಬೇಕಾಗುತ್ತೈತಿ, " ಎಂದು ಉತ್ತರವಿತ್ತು, ಗಿರಿಯ ತನ್ನ ಜಾಣತನವನ್ನು ತಾನೇ ಮೆಚ್ಚಿಕೊಂಡ.

" ತೆರಾ ತೆರಾ ಅಂದರೂ ಎಷ್ಟು ರೂಪಾಯಿ ಕೊಟ್ಟೀ ನೀ ? " ಸಣ್ಣವ್ವ ಅಣಕದ ನಗೆಯೊಂದಿಗೆ ಕೇಳಿದಳು.

" ಅಜ್ಜನ್ನ ಕೇಳಬೇಕು ಅತ್ತೀ. ಇದೆಲ್ಲಾ ಹೆಂಗ ಗೊತ್ತಾಗಬೇಕು ನನಗ ? "

" ಗಂಟೆಲ್ಲಾ ಅಜ್ಜನ ಕೈಯಾಗs ಐತೇನ ? "

" ಎಲ್ಲೀ ಗಂಟs ಅತ್ತೀ ? ನಮುಗೇನ ಸ್ವಂತದ ಹೊಲಾ ಐತ್ಯೇ ? ಗಂಟ ಮಾಡೂಣs ? ಪಾಳೆಕ್ಕ ಹಿಡಿದಿರೂದೂ ಚೋಟುದ್ದ ಹೊಲಾ. ಪಾಳೇದ ರುಪಾಯಿ ಕೊಟ್ಟು ಹೊಟ್ಟಿ ತುಂಬಿಸಿಕೋಬೇಕಾದರ ಸಾಕುಸಾಕಾಗಿ ಹೋಗುತ್ತೈತಿ....ಅದಕ್ಕs ಈ ವರ್ಷದಿಂದ ಧರ್ಮಣ್ಣ ಸಾವುಕಾರನ ಹೊಲಾ ಹಿಡೀಬೇಕಂತ ಮಾಡೀನಿ. "

" ಯಾವ ಹೊಲಾ ? ಭೀಮ್ಯಾ ಹಿಡಿದದ್ದೋ ಏನ? ಕಬಜಾ ಹೋತಂತಲ್ಲಾ ? "

" ಹೌದು ಅತ್ತೀ. ಅದs ಹೊಲಾ. ಧರ್ಮಣ್ಣ ಮಾಡಿರಿ ಅಂತಾನ. ಕಾಮಣ್ಣ ಬ್ಯಾಡ ಅಂತಾನ. ಅವನ ಮಾತಿಗೆ ವಿರುದ್ಧ ಹೋದರ ನೆಟ್ಟಗಾ ಗುವದಿಲ್ಲಂತ ಅಂಜಿಕೀ ಹಾಕಹತ್ತಿದಾನ. "

" ಹಿಂಗೇನ ? ಮಾಡೇ ಬಿಡ ಹಂಗಾದರ. ಅವರೇನ ಮಾಡುತಾರೋ ನೋಡೂಣಂತ " ಎಂದಳು ಬಾಲಿ.

ಗಿರಿಯನಿಗೂ ಹುರುಪು ಬಂದಂತಾಯಿತು. " ಮಾಡೇ ಬಿಡುತೀನಿ. ನಾಯೇನ ಆ ಪುಂಡರಿಗೆ ಅಂಜುತೀನೇನ ? "

" ಹಂಗs ಮಾಡು ಗಿರಿಯಾ. ನನ್ನ ಮಗಳಿಗೆ ಅವರು ತ್ರಾಸ ಕೊಟ್ಟ ದ್ದನ್ನ, ಹೊಡಿದದ್ದು ಬಡಿದದ್ದನ್ನ ನೆನೆದರ ಹೊಟ್ಟ್ಯಾಗ ಬೆಂಕಿ ಬೀಳುತೈತಿ. ಅವರಿಗೂ ಹೊಟ್ಟ್ಯಾಗ ಬೆಂಕಿ ಬೀಳುವ ಹಂಗ ಆಗಬೇಕು. ಹಾಳಾಗಿ ನಿಸತ್ತ ನಾಗಿ ಹೋಗಬೇಕು," ಎಂದು ಹೇಳುತ್ತಾ ಸಣ್ಣವ್ವ ಎರಡು ಕೈಗಳನ್ನೂ ನೆಲ ಕ್ಕೊತ್ತಿ ಚಿಟಿಕೆ ಮುರಿದು ಶಪಿಸಿದಳು.

ಒಂದು ಕ್ಷಣ ಸುಮ್ಮನೆ ಕುಳಿತಿದ್ದು, ಅನಂತರ ಬಾಲಿಯನ್ನು ದಿಟ್ಟಿಸುತ್ತ " ನಾ ಹೋಗಲಾ ಬಾಲೀ ? " ಎಂದು ಕೇಳಿದ ಗಿರಿಯ.

ಮುನ್ನಾ ದಿನದ ಹಾಗೆಯೆ ಅವಳು ತುಂಟ ನಗೆ ಬೀರಿ ನುಡಿದಳು:

" ಹೋಗುತೀಯೇನ ? ಹೋಗು ಹಂಗಾದರ. "

ಆತ ಎದ್ದು ಹೊರಟು ನಿಲ್ಲುತ್ತಲೂ ಸಣ್ಣವ್ವ ಮಗಳ ಕಡೆ ತಿರುಗಿ, ಕಣ್ಣು ಮಿಟುಕಿಸಿ— " ಈಗ ಯಾಕ ಕಳಿಸುತೀಯೇ ? ಬೆಳಗಿನಾಗ ಹೋದಾನು ಬಿಡು," ಎಂದಳು.

" ಹೋಗತೇನು ಅನ್ನುವವನ್ನ ಹಿಡಿದು ಕುಂಡರಸಾಕ ಬರುತೈತೇನ ?" ಎಂದಳು ಬಾಲಿ.

" ಕುಂಡ್ರೋ ಮೂಳಾ, ಬಂದೀದಿ ಯಾಕ, ಹಂಗs ಹೋಗುತೀ ಯಾಕ ? ನಿನಗೇನೂ ಬುದ್ಧಿ ಇದ್ದಂಗ ಕಾಣೂದಿಲ್ಲ," ಎಂದು ನಗುತ್ತ ನುಡಿದಳು ಸಣ್ಣವ್ವ.

ಎರಡು ತಾಸು ಕಳೆದಿರಬಹುದು. ಗಿರಿಯನಿನ್ನೂ ಎಚ್ಚರವಾಗಿಯೇ ಇದ್ದ. ಪಕ್ಕದಲ್ಲಿ ಬಾಲಿ, ಅವನ ಎದೆಯ ಮೇಲೆ ಒಂದು ಕೈಯನ್ನಿರಿಸಿದ ಹಾಗೆ ಗೊರಕೆ ಹೊಡೆಯುತ್ತಿದ್ದಳು. ಕೊಂಚ ದೂರದಲ್ಲಿದ್ದ ಪಡಸಾಲೆಯಲ್ಲಿ ಮಲಗಿದ್ದ ಸಣ್ಣವ್ವ, ಅವಳ ಗೆಣೆಯ ಇಬ್ಬರೂ ಇನ್ನೂ ಎಚ್ಚರವಾಗಿಯೇ ಇದ್ದರು. ಅಂಥ ಅನುಭವ ಗಿರಿಯನಿಗೆ ತೀರ ಹೊಸದು. ಇಲ್ಲಿ—ಅಡುಗೆಯ ಕೊಟಡಿಯಲ್ಲಿ ತಾನು ಬಾಲಿಯೊಂದಿಗೆ ಮಲಗಿದ್ದಾನೆ. ಅಲ್ಲಿ—ಪಡಸಾಲೆ ಯಲ್ಲಿ ಸಣ್ಣವ್ವ ತನ್ನ ಗೆಣೆಯನೊಂದಿಗೆ ರಮಿಸುತ್ತಿದ್ದಾಳೆ. ತಾನು ಬಾಲಿಯ ಗಂಡನಲ್ಲ. ಆ ಗೆಣೆಯ ಸಣ್ಣವ್ವನ ಗಂಡನಲ್ಲ. ದೀಪವನ್ನಾರಿಸಿ ತಾನು ಮಲಗಿದ ಕೊಂಚ ಹೊತ್ತಿನಲ್ಲಿಯೇ ಆ ಗೆಣೆಯ ಬಂದು ಬಾಗಿಲು ತಟ್ಟಿದ್ದ. ಸಣ್ಣವ್ವ ಎದ್ದು ಬಾಗಿಲು ತೆಗೆದು, ಅವನನ್ನು ಒಳಕ್ಕೆ ಕರೆದುಕೊಂಡು ಮತ್ತೆ

ಬಾಗಿಲು ಮುಚ್ಚಿದ್ದಳು. ಕತ್ತಲೆಯಲ್ಲಿ ಆತನಾರೆಂಬುದು ತಿಳಿಯುವಂತಿರಲಿಲ್ಲ. ಯಾರೋ ಯಾರಿಗೆ ಗೊತ್ತು ! ಹಾದರದ ಹಣದಿಂದಲೇ ತಾಯಿ ಮಗಳಿಬ್ಬರೂ ಬದುಕುತ್ತಿರುವರೋ ಏನೊ. ಬಾಲಿ ಒಳ್ಳೆಯ ನಡತೆಯವಳಲ್ಲವೆಂಬುದು ತನಗೆ ಮೊದಲೇ ಗೊತ್ತಿದ್ದಿತಾದರೂ, ಅವಳ ನಡತೆ ಇಷ್ಟು ದೂರ ಇಳಿದಿರಬಹುದೆಂದು ತಾನಾಗ ತಿಳಿದಿರಲಿಲ್ಲ. ಗಂಡನ ಮನೆಯಲ್ಲಿದ್ದಾಗ ಏನೊ ಒಂದು ಸಲ ಕಾಲು ಜಾರಿರಬಹುದು, ತವರುಮನೆಗೆ ಬಂದ ಬಳಿಕ ಒಳ್ಳೆಯವಳಾಗಿರಬೇಕು—ಎಂದೆಲ್ಲ ತಾನು ತಿಳಿದುಕೊಂಡಿದ್ದ. ಒಳ್ಳೆ ತವರು ಮನೆಯೆ ! ತಾಯಿಯೆ ಹಾದರಕ್ಕಿಳಿದಿರುವಾಗ ಮಗಳು ಒಳ್ಳೆಯವಳಾಗಿ ಉಳಿಯುವುದುಂಟೇ ? ಬಾಲಿಯೂ ಕೆಟ್ಟುಹೋಗಿರಲು ಸಾಕು. ಯಾವನೊಬ್ಬನನ್ನು ಇಟ್ಟುಕೊಂಡಿರಬಹುದು—ಅಥವಾ—ಯಾರಿಗೆ ಗೊತ್ತು........ ದಿನವೂ ಒಬ್ಬೊಬ್ಬನನ್ನು ಕರೆದುಕೊಳ್ಳುತ್ತಿರಬಹುದು. ಈ ಕೆಲಸದಿಂದಲೇ ಬದುಕುವವರಿಗೆ ಯಾರಾದರೇನಂತೆ !

ಗಿರಿಯನ ಎದೆ ನಡುಗಿದಂತಾಯಿತು. ಅಂದು ತಾನು ಬಂದೊಡನೆ ಬರಿಗೈಯಿಂದ ಬಂದ ಬಗೆಗೆ ಬಾಲಿ ಅಣಕವಾಡಿದುದನ್ನು ಜ್ಞಾಪಿಸಿಕೊಂಡ. ಆಗ ಅವನಿಗೆ ಆ ಮಾತಿನ ಅರ್ಥವಾಗಿರಲಿಲ್ಲ. ಈಗ ಮಾತ್ರ ಎಲ್ಲವೂ ಸ್ಪಷ್ಟವಾದಂತಾಯಿತು. ಹಣ ಕೇಳುತ್ತಿದ್ದಳು ಬಾಲಿ. ಇತರ ಗೆಣೆಯರಿಂದ ಹಣ ಕೇಳುವಂತೆ ತನ್ನಿಂದಲೂ ಕೇಳುತ್ತಿದ್ದಳು....ಹಣ....ಗೆಣೆಯರು....ಗಿರಿಯನ ಮೈಯೆಲ್ಲವೂ ಕಂಪಿಸಿತು. ಬಾಲಿ ಸೂಳೆ....ರೂಪಾಯಿಗಳಿಗಾಗಿ ಗಂಡುಸರೊಡನೆ ಮಲಗುವ ಸೂಳೆ........ಅವಳ ಅನೇಕ ಗೆಣೆಯರಲ್ಲಿ ತಾನೂ ಒಬ್ಬ ಗೆಣೆಯ....ಇದುವರೆಗೆ ಎಷ್ಟು ಜನ ಇವಳನ್ನು ತಬ್ಬಿಕೊಂಡಿರುವರೋ....ಎಷ್ಟು ಜನರ ಕರಸ್ಪರ್ಶವಾಗಿದೆಯೋ ಇವಳ ಈ ಪುಷ್ಟ ಎದೆಕಟ್ಟಿಗೆ.... ಈಗ ತನ್ನೆದೆಯ ಮೇಲೆ ಬಿದ್ದ ಹಾಗೆ ಇವಳ ಈ ಕೈ ಇದುವರೆಗೆ ಎಷ್ಟು ಜನರ ಎದೆಯ ಮೇಲೆ ಬಿದ್ದಿದೆಯೊ....ಇವಳ ತೋಳು....ಇವಳ ತೊಡೆ........

ಗಿರಿಯ ಒಮ್ಮೆಲೆ ಎದ್ದುಬಿಟ್ಟ. ಅವಳ ಪಕ್ಕದಲ್ಲಿ, ಆ ಕೊಟಡಿಯಲ್ಲಿ ಆ ಮನೆಯಲ್ಲಿ ಉಸಿರಾಡಿಸುವುದೂ ಅಸಹ್ಯಕರವಾಯಿತು. ತಾನೆಂದೂ ಹಾದರಕ್ಕೆ ಬಿದ್ದವನಲ್ಲ. ಕರಡಿಗೆ ಹಗ್ಗ ಕಟ್ಟಿ ಎಳೆಯುವಂತೆ ತನ್ನನ್ನು ಎಳೆದು ತಂದಳು ಬಾಲಿ. ಆಗ ತನ್ನ ಬುದ್ಧಿಯೇ ತನ್ನ ಹಿಡಿತದಲ್ಲಿರಲಿಲ್ಲ....

ಗಿರಿಯ ಎದ್ದು ನಿಂತ, ಮನೆಬಿಟ್ಟು ಹೊರಡಬೇಕೆಂದುಕೊಂಡ. ಪಡ ಸಾಲೆಯಲ್ಲಿ ಇನ್ನೂ ಸದ್ದಾಗುವುದು ಕೇಳಿಸುತ್ತಿತ್ತು. ಅವರ ಕಾಮಕೇಳಿ ಯಿನ್ನೂ ಕೊನೆಗೊಂಡಂತಿರಲಿಲ್ಲ. ಆ ವೇಳೆಯಲ್ಲಿ, ಅವರ ಹತ್ತರ ಹಾಯ್ದು, ಬಾಗಿಲು ತೆಗೆದು ಹೋಗಲು ಸಾಧ್ಯವಾಗುವಂತಿರಲಿಲ್ಲ. "ಥೂ, ಇವನ ಪ್ಪನ" ಎಂದು ಮನಸ್ಸಿನಲ್ಲೇ ಗೊಣಗಿಕೊಳ್ಳುತ್ತ ಗಿರಿಯ ಮತ್ತೆ ಕುಳಿತು ಕೊಂಡ. ಆತ ಕುಳಿತ ಸದ್ದು ಕೇಳಿಸಿತೇನೋ, ಸಣ್ಣವ್ವನ ಗೆಣೆಯ ಪಿಸು ದನಿಯಲ್ಲಿ— "ಯಾರೇ ಅವಾ?" ಎಂದು ಕೇಳಿದ. "ಹೀಂಗs ಒಬ್ಬಾಂವ ನಿನ್ನ ಹಂಗs" ಎಂದು ಉತ್ತರವಿತ್ತಳು ಸಣ್ಣವ್ವ. "ಯಾಕೋ ಎದ್ದ ಹಾಂಗ ಆತಲ್ಲ ಅವ?" ಎಂದ ಗೆಣೆಯ. "ಇಂಥಾ ಹೊತ್ತಿನಾಗ ಯಾತಕ್ಕ ಎದ್ದಾನು? ನಿನಗೇನು ಹುಚ್ಚೋ?" ಎಂದಳು ಸಣ್ಣವ್ವ. "ಇಲ್ಲs ಸಣ್ಣೀ ಎದ್ದಾಂಗ ಕುಂತಾಂಗ ಸಪ್ಪಳಾತು." "ಏನೋ ಇಲಿ ಗಿಲಿ ಓಡ್ಯಾಡಿರಬೇಕು ಬಿಡು," ಎಂದಳು ಸಣ್ಣವ್ವ. ಅವರಿಬ್ಬರನ್ನೂ ಶಪಿಸುತ್ತ ಗಿರಿಯ ಮತ್ತೆ ಹಾಸುಗೆಯ ಮೇಲೊರಗಿದ. ಅವನ ದೇಹದ ಕೆಳಗೆ ಬಾಲಿಯ ತೋಳು ಸಿಕ್ಕಿಬಿದ್ದು, ಅವಳಿಗೆ ಎಚ್ಚರವಾಯಿತು. ಅವಳು ಅವನ ಕಡೆ ಹೊರಳಿ, ತನ್ನ ತೋಳನ್ನು ಎಳೆದುಕೊಂಡು ಅವನ ಎದೆಯ ಸುತ್ತ ಸೇರಿಸಿ ಅವನನ್ನು ಅಪ್ಪಿ ಕೊಂಡಳು. ಎರಡು ತಾಸುಗಳ ಹಿಂದೆ ಅವಳ ಅಪ್ಪುಗೆಯಲ್ಲಿ ಸ್ವರ್ಗವನ್ನೇ ಕಂಡಿದ್ದ ಗಿರಿಯನಿಗೆ ಈಗ ನರಕವನ್ನು ಕಂಡಂತಾಯಿತು. ಅವಳ ಬಾಹು ಬಂಧನದಿಂದ ತಪ್ಪಿಸಿಕೊಳ್ಳಲು ಯತ್ನಿಸಿದ. ಅದೂ ಸಾಧ್ಯವಾಗಲಿಲ್ಲ. ತನ್ನ ದೇಹದಲ್ಲಿನ ಶಕ್ತಿಯೆಲ್ಲವನ್ನೂ ಉಪಯೋಗಿಸಿ ಅವನನ್ನು ಅಪ್ಪಿಕೊಂಡಿ ದ್ದಳು ಬಾಲಿ. ಇದೊಂದು ರಾತ್ರಿಯ ಮಟ್ಟಿಗೆ ಅಷ್ಟೆ ಈ ಹಾಳು ಸಹವಾಸ– ಅನಂತರ ಎಂದೆಂದೂ ಈ ಮನೆಯಲ್ಲಿ ಕಾಲು ಹಾಕುವುದಿಲ್ಲ—ಎಂದು ಮನಸಿ ನಲ್ಲೇ ಹೇಳಿಕೊಳ್ಳುತ್ತ ಗಿರಿಯ ಹಾಗೆಯೆ ಮಲಗಿಕೊಂಡ.

ಆತನಿಗೆ ಎಚ್ಚರವಾದಾಗ ಅರುಣೋದಯದ ಸಮಯವಾಗಿತ್ತು. ಹೊರ ಗಡೆ ಓಣಿಯಲ್ಲಿ ರೈತರ ಚಟುವಟಿಕೆ ನಡೆದಿದ್ದುದು ಕೇಳಬರುತ್ತಿತ್ತು. ಪಕ್ಕದ ಮನೆಗಳಲ್ಲಿ ಬೀಸುವ ಕಲ್ಲುಗಳ ರಾಗ. ಗಿರಿಯ ಕಣ್ಣುಜ್ಜಿಕೊಳ್ಳುತ್ತ ಎದ್ದು ಕುಳಿತ. ಹಂಚುಗಳ ಬಿರುಕುಗಳೊಳಗಿನಿಂದ ತೂರಿಬರುತ್ತಿದ್ದ ಅರುಣಕಿರಣ ಗಳು ಮನೆಯಲ್ಲೆಲ್ಲ ಅಸ್ಪಷ್ಟವಾದ ಪ್ರಕಾಶವನ್ನು ಹರಡಿದ್ದುವು. ಪಡಸಾಲೆ

ಯಲ್ಲಿ ಸಣ್ಣವ್ವ ಒಬ್ಬಳೇ ಬಿದ್ದುಕೊಂಡು ಗಾಢ ನಿದ್ದೆಯಲ್ಲಿ ಮುಳುಗಿದ್ದುದು ಕಾಣಿಸಿತು. "ಅವಳ ಆ ಗೆಣೆಯ ಈಗಾಗಲೆ ಹೋಗಿಬಿಟ್ಟಿರುವನಲ್ಲಾ.... ರಾತ್ರ್ಯಾಗ ಬಂದು ರಾತ್ರ್ಯಾಗs ಹೋಗ್ತಿರಬೇಕು," ಎಂದುಕೊಳ್ಳುತ್ತ ಗಿರಿಯ ಒಂದು ಕ್ಷಣ ಏನನೋ ಯೋಚಿಸಿ, ಅನಂತರ ಬಾಲಿಯನ್ನೂ ಎಬ್ಬಿಸಿದ. ತೋಳುಗಳನ್ನೂ ಎದೆಯನ್ನೂ ಮುರಿದುಕೊಳ್ಳುತ್ತ ಅವಳು ಮೇಲಕ್ಕೆದ್ದಳು.

"ಹೊಂಟಿಯೇನೋ?"

"ಹೋಗಾಕಬೇಕಲ್ಲಾ?"

"ರಾತ್ರಿ ಬಾ ಮತ್ತ," ಎಂದು ಹೇಳಿದವಳೆ ಬಾಲಿ ಮತ್ತೆ ಹಾಸುಗೆಯ ಮೇಲೊರಗಿದಳು. ಅವಳ ಕಣ್ಣುಗಳಲ್ಲಿನ ನಿದ್ದೆ ಇನ್ನೂ ಭಾರವಾಗಿಯೇ ಇತ್ತು.

ಗಿರಿಯ ಬಾಗಿಲು ತೆಗೆದು ಹೊರಗಡೆ ಬಂದ, ಹಾಗೇ ಬಾಗಿಲು ಮುಚ್ಚಿ ಓಣಿಗಿಳಿದು ಹೊರಟ. ಅವನ ಎದೆ ಡವಡವನೆ ಬಡಿದುಕೊಳ್ಳುತ್ತಿತ್ತು. ಯಾರಾದರೂ ತನ್ನನ್ನು ಕಂಡು ಗುರುತಿಸಿದರೇನು ಗತಿ! ಗಿರಿಯ ತ್ವರೆಯಿಂದ ಹೆಜ್ಜೆ ಹಾಕತೊಡಗಿದ. ಊರ ಹೊರಗಡೆ ಬರುವ ವರೆಗೂ ಅತ್ತ ಇತ್ತ ದೃಷ್ಟಿ ತಿರುಗಿಸಲಿಲ್ಲ.

ಎತ್ತುಗಳನ್ನು ಬಿಟ್ಟುಕೊಂಡು ಹೊಲಕ್ಕೆ ಹೊರಟಿದ್ದ ರೈತನೊಬ್ಬ ಇವನನ್ನು ಗುರುತಿಸಿ, "ಯಾಕಲೇ ಗಿರಿಯಾ, ಈಗ ಬೆಳಗಾತೇನ ನಿನಗ?" ಎಂದು ನುಡಿದು ಗಹಗಹಿಸಿ ನಗತೊಡಗಿದ.

ಗಿರಿಯನ ಮನಸ್ಸು ನಾಚಿಕೆಯಿಂದ ಮುದುಡಿಕೊಂಡಂತಾಯಿತು. ಆತ ಉತ್ತರವೀಯದೆ ಹಾಗೆಯೆ ನಡೆಯುತ್ತಿದ್ದ.

"ಹೆಂಗ, ಒಳೇ ಪುರಮಾಸಿ ಆಗೈತೇನೋ ಬಾಲೀ ಗೆಣೆತನಾ?" ಆ ರೈತ ಮತ್ತೆ ಕೇಳಿದ.

"ಅದೂ ಗೊತ್ತಾಗೈತೇನ ಇವನಿಗೆ!" ಎಂದುಕೊಳ್ಳುತ್ತ ಗಿರಿಯ ವೇಗವಾಗಿ ಹೆಜ್ಜೆ ಹಾಕತೊಡಗಿದ.

ಆ ರೈತ ಮಾತ್ರ ಅವನನ್ನು ಅಷ್ಟಕ್ಕೇ ಬಿಡಲಿಲ್ಲ. "ಏಯ್, ಯಾಕ ಓಡುತೀಯೋ ತುಡುಗನಂಗ? ನಿಲ್ಲಲಾ ಒಂದೀಟು. ಚಿಲುಮಿ ಸೇದಿ

ಹೋದೀಯಂತೆ” ಎಂದು ಹೇಳಿದ.

“ಇಲ್ಲೋ ಕರಿಯಾ. ಲಗೂ ಹೋಗಾಕ ಬೇಕಪಾ. ಗಳೇ ಹೊಡಿಯೂದೈತಿ.”

“ಇಷ್ಟೊತ್ತನಕಾ ಗಳೇ ಹೊಡದು ಸಾಕಾಗಿಲ್ಲೇನ ಇನ್ನೂ? ನಿಲ್ಲಲೇ. ಏನ ಅವಸರಾ ಮಾಡುತೀ?” ಎಂದ ಕರಿಯ. ಗಿರಿಯ, ನಡಿಗೆಯ ವೇಗವನ್ನು ತಗ್ಗಿಸಲೇ ಬೇಕಾಗಿ ಬಂದಿತು.

“ಏನಡ್ಡಿಯಿಲ್ಲ ಗಿರಿಯಾ, ಏನಡ್ಡಿಯಿಲ್ಲ. ಚಲೋ ಹೆಣ್ಣs ಗಂಟುಬಿತ್ತೇಳ ನಿನಗ. ನಿಮ್ಮೂರಾಗ ಅವಳಿದ್ದಾಗಿಂದಲೇ ಇತ್ತೇನೋ ಗೆಣೆತನಾ?”

“ಎಲ್ಲೀಡೋ ಮಾರಾಯಾ. ಮನ್ನೆ ಮನ್ನೆ ಆತು ಎಲ್ಲಾ.”

“ಏನಡ್ಡಿಯಿಲ್ಲ....ಏನಡ್ಡಿಯಿಲ್ಲ....” ಎಂದು ಹೇಳುತ್ತ ಕರಿಯ ಮತ್ತೆ ನಗತೊಡಗಿದ. “ನೂರು ಮಂದಿ ಆದರು—ನೀ ನೂರೊಂದರಾಂವ. ಆತೇಳು. ನೀನೂ ಮಜಾ ನೋಡಿಕೊ ಒಂದ್ಯಾಡ್ಡ ವಾರ. ಅವಳ ಬಲಿಯಾಗ ಮಾತ್ರ ಸಿಗಬ್ಯಾಡೋ ಮಳ್ಳs.”

“ಬಲಿಯಾಗ?”

“ಬಲಿ ಅಂದರ ಅಂಥಿಂಥಾ ಬಲಿ ಅಲ್ಲಪಾ ಅದು. ಒಳೇ ಹುಲಿ ಹಿಡಿಯೂವಂಥಾ ಗಟ್ಟಿಮುಟ್ಟ ಬಲಿ. ಬಾಲಿ, ಅವಳಪ್ಪ ಇಬ್ಬರೂ ಬ್ಯಾಟಿಗಾರರೇ. ಅವರ ಬಲೀಗೆ ಬೀಳವಂಥವರು ಹರೇವವರು ಯಾರೂ ಉಳೀಲಿಲ್ಲ ಈ ಊರಾಗ. ಅದಕ್ಕ ಈಗ ಬ್ಯಾರೆ ಊರವರನ್ನ ಹಿಡಿಯೂವಕ್ಕ ಸುರೂ ಮಾಡಿದಾರ....”

“ಅಷ್ಟ ಹಲ್ಕಟ್ ಅದಾರೇನೋ ಕರಿಯಾ ಅವರು?”

“ಹಲ್ಕಟs? ಹಲ್ಕಟ ಅಂತ ನಾ ಯಾಕ ಅನ್ನಬೇಕು? ಅವರು ಎಂಥವರನ್ನೂದು ಊರಿಗೆಲ್ಲಾ ಗೊತ್ತೈತಿ. ಸುತ್ತುಮುತ್ತಲಿನ ಹತ್ತು ಊರಾಗೆಲ್ಲಾ ಎಲ್ಲಾರಿಗೂ ಗೊತ್ತೈತಂತ. ನಿನಗ ಗೊತ್ತಿರಲಿಲ್ಲಾ?”

“ಇಲ್ಲಪಾ. ಖರೇವಂದರೂ ಗೊತ್ತಿರಾಕಿಲ್ಲ.”

“ಹೆ ಹೆ ಹೆ ಹೆ....ಗೊತ್ತಿರಾಕಿಲ್ಲಂತ! ಈಗಾದರೂ ಗೊತ್ತಾತೋ ಇಲ್ಲೋ? ಹ ಹೆ ಹೆ ಹೆ....”

ಅಷ್ಟರಲ್ಲಿ ಕರಿಯನ ಹೊಲ ಸಮೀಪಿಸಿದ್ದಿತು. ಹೊಲದ ಅಂಚಿನ ಮೇಲಿದ್ದ ಜಾಲಿಯ ಗಿಡದ ಕೆಳಗೆ ಎತ್ತುಗಳನ್ನು ಕಟ್ಟಿ ಕರಿಯ ಕುಳಿತು

ಕೊಂಡು, ತಲೆಗೆ ಸುತ್ತಿದ್ದ ಹರಕು ಚಿಂದಿಯೊಳಗಿಂದ ಚಿಲುಮೆಯನ್ನೂ ತಂಬಾಕಿನ ಪುಡಿಯನ್ನೂ ತೆಗೆದು, ತಂಬಾಕನ್ನು ಹದಗೊಳಿಸುತ್ತ ಮಾತನಾಡಿದ.

" ನೀ ಸುಮ್ಮನs ಮದುವೀ ಮಾಡಿಕೊಂಡು ಬಿಡೋ ಗಿರಿಯಾ. ಈ ಹೊಲಸು ಹೆಂಗಸರ ಬಲಿಗೆ ಬೀಳಬ್ಯಾಡ. "

" ಸಣ್ಣವ್ವ ಯಾರನ್ನಿಟ್ಟುಕೊಂಡಾಳೋ ? " ಗಿರಿಯ ಕುತೂಹಲದಿಂದ ಕೇಳಿದ.

" ಅವಳs ? ಅವಳಿಗೇನ ಕಡಮಿಯಪಾ ಗೆಣೇರು ? ಇಲ್ಲಿಯತನಕಾ ಒಂದಿಪ್ಪತ್ತು ಮಂದಿ ಆದರು. ಈಗ ಆ ಕುಲಕರ್ಣಿ ವೆಂಕಪ್ಪನ್ನ ಇಟ್ಟುಕೊಂಡಾಳ, " ಎಂದು ನುಡಿದು ಕರಿಯ ತಂಬಾಕನ್ನು ಚಿಲುಮೆಗೆ ತುಂಬಿ ಗಿರಿಯನ ಕಡೆ ನೀಡಿದ.

ಒಂದು ದಮ್ಮು ಹೊಗೆಯೆಳೆದು ಅದನ್ನು ಭುಗ್ಗೆಂದು ಹೊರಹಾಕುತ್ತ ಗಿರಿಯ ಕೇಳಿದ:

" ವೆಂಕಪ್ಪನ್ನ ಅಂದಿಯಾ ? ಹಾರೋರ ವೆಂಕಪ್ಪ ? ಇಂಥವಳ ಸಂಗಾತ.... ? "

ಕರಿಯ ಖಹಖಹಾ ಎಂದು ನಗುತ್ತ—"ಹಾರೋರಾದರೇನ, ಹೊಲ್ಯಾ ಆದರೇನ, ಹೆಣ್ಣಿನ ಸಂಗಾತ ಮಲಗೂದಕ್ಕ ಜಾತಿ ಎಲ್ಲೀದೋ ಮಳ್ಳs ? ಆ ಸಣ್ಣಿ ಕುಲಕರ್ಣೇನ ಒಳೇ ಮಳ್ಳ ಮಾಡಿದಂಗ ಕಾಣುತೈತಿ. ಯಾಡ್ಡ ಮೂರ ತಿಂಗಳಿಂದ ಹುಚ್ಚು ಹಿಡಿದಾಂಗ ತಿರುಗಾಕ ಹತ್ತಿದಾನ, " ಎಂದು ಹೇಳಿದ.

" ಊರಾಗ ಎಲ್ಲಾರಿಗೂ ಗೊತ್ತಾಗೈತೇನ ಈ ಸುದ್ದಿ ? "

" ಗೊತ್ತಾಗದ ಬಿಡುತೈತೇನ ? ಮಂದಿ ಎಲ್ಲಾ ನಕ್ಕು ನಕ್ಕು ಸಾಯಾಕ ಹತ್ತಿದಾರ. "

" ಬಾಲಿಗೆ ಉಡಿಕೀ ಮಾಡಿಕೊಟ್ಟು ತಾ ದುಡಕೊಂಡು ತಿನ್ನುಕೋತ ಯಾಕ ಇರಬಾರದು ಸಣ್ಣವ್ವ ? "

" ದುಡಕೊಂಡs ತಿನ್ನಾಕ ಹತ್ತಿದಾರಲ್ಲಾ ಈಗಲೂ. "

" ಇದೆಂಥಾ ದುಡಿತೋ, ಥೂ, " ಎಂದ ಗಿರಿಯ.

" ಅಲಲಲಲ ! ಏನ ಒಳೇ ಸಾಜೋಗ ಮಾತಾಡಿದಾಂಗ ಮಾತಾ

ಡುತೀಯಲ್ಲಾ ?' ರಾತ್ರಿ ಅವರ ಮಗ್ಗಲಾಗs ಮಲಗಿ ಮಜಾಮಾಡಿ ಬರೂದು ಮತ್ತ ಥೂ ಅನ್ನೂದು ! ವಾರೆ ವಾ !"

"ಇದೆಲ್ಲಾ ನನಗ ಗೊತ್ತಾರಿಕಿಲ್ಲೋ ಕರಿಯಾ. ಇವತ್ತs ಗೊತ್ತಾತು ನೋಡು ಎಲ್ಲಾ."

"ಇವತ್ತs ಗೊತ್ತಾತಂತ ! ಬಿಡ್‌ಬಿಡು. ಏನಾರೆ ಒಂದ್ ಪಂಟ ಹೊಡೀಬ್ಯಾಡ. ನೀ ಸಾಜೋಗ ಆಗಿದ್ದರ ಅವರ ಮನೀಗೆ ಯಾಕ ಹೋಗಿದ್ದಿ ?"

"ಬಾಲೀನ್ನ ಉಡಿಕೀ ಮಾಡಿಕೋಬೇಕಂತ ಕೇಳಾಕ ಹೋಗಿದ್ದಿ ನಪಾ."

"ಕೇಳಾಕ ಹೋಗಿದ್ದನಂತ! ಹುಂ. ಕೇಳಾಕ ಹೋದಾಂವ ನೀ ಅಲ್ಲೇ ಆವಾಗಲೇ ಉಡಿಕೀ ಶಾಸ್ತ್ರ ಮುಗಿಸಿ ಮಲಗೇ ಬಿಟ್ಟೇನ ?"

"ಆದದ್ದು ಆತು ಕರಿಯಾ. ಇನ್ನಮ್ಯಾಲ ಅವರ ಮನೀಗೆ ಕಾಲು ಹಾಕುವದಿಲ್ಲ." ಎಂದು ನುಡಿದು ಗಿರಿಯ ಎದ್ದು ಬಿಟ್ಟ.

"ಕಾಲು ಹಾಕಬ್ಯಾಡಂತ ನಾಯೇನೂ ಹೇಳುವದಿಲ್ಲ. ಇನ್ನೊಂದು ನಾಕು ದಿನಾ ಮಜಾ ಹೊಡಕೋ. ನಮ್ಮಪ್ಪಂದೇನ ಗಂಟು ಹೋಗುತೈತಿ ?"

## ಐದು

ಮುದುಕಿಯ ಮೃತ್ಯುವಿನೊಂದಿಗೆ ಭೀಮಪ್ಪನಿಗೊಂದು ಪುನರ್ಜನ್ಮವೆ ಆದ ಹಾಗಾಗಿತ್ತು. ತನಗೇ ತಿಳಿಯದಂತೆ ಆತ ಪೂರಾ ಬದಲಾಯಿಸಿದ್ದ. ದಿನದಿಂದ ದಿನಕ್ಕೆ ಅವನಲ್ಲಿ ದಿಟ್ಟತನ ಬೆಳೆಯತೊಡಗಿತ್ತು. ಈ ಮೊದಲು ಧ್ವನಿಯನ್ನೆತ್ತರಿಸಿ ಗಟ್ಟಿಯಾಗಿ ಮಾತನಾಡುವುದಕ್ಕೂ ಸಹ ಹಿಂಜರಿಯುತ್ತಿದ್ದ ಆತ, ಈಚೆಗೆ ಬೈಲಾಟದಲ್ಲಿನ ರಾವಣನ ಪಾತ್ರ ಕೂಗುವಂತೆ ಸ್ವರವೇರಿಸಿ ಕೂಗತೊಡಗಿದ್ದ. ಮೊದಲು, ತನ್ನ ಕೆಲಸವನ್ನುಳಿದು ಬೇರೆ ವಿಷಯಗಳಲ್ಲಿ ಮನಸ್ಸು ತೊಡಗಿಸದಿದ್ದವನು ಈಚೆಗೆ ಊರಿನ 'ಉಸಾಬರಿ' ಗಳಲ್ಲೆಲ್ಲ ಆಸಕ್ತಿ

ತೋರ್ಪಡಿಸುವುದಲ್ಲದೆ ಆ ವಿಷಯಕವಾದ ಹರಟೆಯಲ್ಲೂ ಮುಖ್ಯ ಭಾಗವಹಿಸ ತೊಡಗಿದ್ದ. ಕುಡಿಯುವದರಲ್ಲಂತೂ ಆತ ಎಲ್ಲ ಕುಡುಕರನ್ನೂ ಹಿಂದೆ ಹಾಕಿದಂತಾಗಿತ್ತು. ಬಸವಾಣಿಯ ಚಹದಂಗಡಿಯಲ್ಲಿ ಕುಳಿತುಕೊಂಡು, ಮೀಸೆಯನ್ನು ಹುರಿಮಾಡುತ್ತ, ಹಳಬರ ಶಿವರಾಯಿಯೊಂದಿಗೆ ಮಾತಾಡುತ್ತ ಸಿದಗೌಡ, ಧರ್ಮಣ್ಣ, ಗಿರಿಯ ಎಲ್ಲರನ್ನೂ ಬಾಯಿಗೆ ಬಂದಂತೆ ಬಯ್ಯುತ್ತಿರುವುದು ಅವನ ನಿತ್ಯಕ್ರಮವಾದ ಹಾಗಾಗಿತ್ತು.

"ಪೋಲೀಸ್ ಸಾಬs ಅದಾನ ನಮ್ಮ ಕಡೆ. ಮರಿಯಪ್ಪನೂ ನಮ್ಮಾವನs ಅದಾನ. ಈ ಗೌಡ ಎಷ್ಟು ಲಾಗಾ ಒಗದರೂ ನಮ್ಮ ಮುಂದ ಆಟ ನಡದೀತೇನ ಅವಂದು ? ಇನ್ನೊಂದು ಯಾಡ್ಡ ದಿನದಾಗs ಬರುತಾರ ನನ್ನ ಹುಡುಗರು. ಖಟ್ಲೀನs ರದ್ದಾಗುತ್ತೈತಿ. ಆ ಮ್ಯಾಲ ತೋರಿಸುತೀವಿ ಇವರಿಗೆ ನಮ್ಮ ಕೈ."

ಗಿಡ್ಡ, ಪುಂಡ, ರಾಯಾ, ಲಕ್ಕ ಈ ನಾಲ್ವರನ್ನೂ ಪೋಲೀಸಿನವರು ಬಂಧಿಸಿಕೊಂಡು ಹೋದುದಕ್ಕೆ ಒಂದು ವಾರ ಉರುಳಿತ್ತು. ಗಿರಿಯ ಹೊಲದಲ್ಲಿ ಗಳೇ ಹೊಡೆಯಲು ಬಂದಾಗ ಅವನ ಮೈಮೇಲೆ ಏರಿಹೋಗಿ ಹೊಡೆದರೆಂಬ ಆರೋಪವನ್ನಿಟ್ಟು ಫಿರ್ಯಾದು ಮಾಡಲಾಗಿತ್ತು. ಆ ಫಿರ್ಯಾದವನ್ನು ಗೌಡ ಫೌಜದಾರರ ಕಡೆ ಕಳುಹಿಸುತ್ತಲೂ ಅವರು ಬಂದು ಅಪರಾಧಿಗಳನ್ನು ಬಂಧಿಸಿಕೊಂಡು ತಾಲೂಕಿನ ಸ್ಥಳಕ್ಕೆ ಕರೆದೊಯ್ದು ಪೋಲೀಸು ಲಾಕಪ್‌ನಲ್ಲಿರಿಸಿದ್ದರು. "ಪೋಲೀಸು ಸಾಬ ನಮ್ಮ ಜಾತಿಯವನs ಅದಾನ. ನಮಗ ಯಾರೇನು ಮಾಡುತಾರ ?" ಎಂದು ಊರಲ್ಲೆಲ್ಲ ಜಂಬ ಕೊಚ್ಚುತ್ತ ಅಲೆಯುತ್ತಿದ್ದ ಕಾಮಣ್ಣನ ಗುಂಪಿನವರಿಗೆಲ್ಲ ಮುಖಭಂಗವಾದಂತಾಗಿತ್ತು. 'ದೊಡ್ಡ ಸಾಹೇಬ' ರಿಗೆ ಹೇಳಿಕೊಂಡು ಆ ಖಟ್ಲೆಯೇ ರದ್ದಾಗುವಂತೆ ಮಾಡುವುದಾಗಿ ಕಾಮಣ್ಣ ಹೇಳಿದುದರಿಂದ ಭೀಮಪ್ಪ, ಮುದುಕಿಯ ಆಭರಣಗಳನ್ನು ಜತೆಗೆ ತೆಗೆದುಕೊಂಡು ತಾಲೂಕು ಸ್ಥಳಕ್ಕೆ ಹೋಗಿ ಅಲ್ಲಿ ಅವುಗಳನ್ನೆಲ್ಲ ಮಾರಾಟ ಮಾಡಿದ್ದ. ಮೂರೂವರೆ ಸಾವಿರ ಹಣ ದೊರಕಿತ್ತು. ಒಂದು ಬುಟ್ಟಿ ತುಂಬಾ ಹಣ್ಣುಗಳನ್ನು ತೆಗೆದುಕೊಂಡು 'ದೊಡ್ಡ ಸಾಹೇಬರ' ಭೆಟ್ಟಿಗೆ ಹೋದುದಾಗಿತ್ತು. ಸಾಹೇಬರು ಊರಲ್ಲಿರಲಿಲ್ಲ. ಸರಿ. ಅಲ್ಲಿಂದ ಹಿಂದಿರುಗಿ ಮರಿಯಪ್ಪನ ಮನೆಗೆ ಹೋಗಿದ್ದರು.

" ವಾದಿಯ ಕಡೆ ಸಾಕ್ಷಿ ಅದಾರೋ ಇಲ್ಲೋ ? " ಎಂದು ಆತ ಕೇಳಿದ್ದ.

" ಅದಾರ. "

" ಹಂಗಾದರ ಆರೋಪಿಗಳನ್ನು ಬಿಡಾಕ ಬರೂದಿಲ್ಲ. ಫೌಜದಾರ ಆಗಲಿ, ದೊಡ್ಡ ಸಾಬ ಆಗಲಿ, ಯಾರಿಗೂ ಬರೂದಿಲ್ಲ ಬಿಡಾಕ. ಹಂಗೆಲ್ಲಾ ಬಿಟ್ಟರಂದರ ಅವರs ಸಿಗುತಾರ ಕಾಯದೇದಾಗ. "

" ಮತ್ಹೆಂಗ ಮಾಡೂದು ಮರಿಯಣ್ಣಾ ? ಏನಾರ ಮಾಡಿ ಅವರನ್ನ ಬಿಡಿಸಾಕs ಬೇಕು. ಇಲ್ಲಾಂದರ ಊರಾಗ ನಮ್ಮ ಮಾನ ಹೋಗುತೈತಿ, " ಎಂದು ಹೇಳಿದ್ದ ಭೀಮಪ್ಪ.

" ಈಗ ಬಿಡಿಸೂದು ಅಂದರ ಜ್ಯಾಮೀನ ಮ್ಯಾಲ ಬಿಡಿಸಬೇಕು. ಅದಕ್ಕೆಲ್ಲಾ ಬಾಳ ಖಟಪಟಿ ಮಾಡಬೇಕಾಗುತೈತಿ. ಸರಕಾರೀ ವಕೀಲಗ, ಫೌಜದಾರಗ ಎಲ್ಲಾರಿಗೂ ಕೈ ಬೆಚ್ಚಗ ಮಾಡಾಕ ಬೇಕಾಗುತೈತಿ. "

" ಎಷ್ಟು ಹೋದಷ್ಟು ಹೋಗಲಿ. ಹೆಂಗರೆ ಮಾಡಿ ಅವರನ್ನ ಬಿಡಿಸಿ ಕೊಡಪಾ. ಎಷ್ಟು ಬೇಕಾದಾವು ರುಪಾಯಿ ? "

" ಫೌಜದಾರಗೊಂದೈದು ನೂರು, ಸರಕಾರಿ ವಕೀಲಗೊಂದೈದುನೂರು. ಏನಿಲ್ಲಂದರೂ ಸಾವಿರ ಆದರೂ ಬೇಕಾದಾವು. "

ಭೀಮಪ್ಪ ಮಾತನಾಡದೆ, ಧೋತರದ ಗಂಟು ಬಿಚ್ಚಿ, ಸಾವಿರ ರೂಪಾಯಿಯ ನೋಟುಗಳನ್ನೆಣಿಸಿ ಮರಿಯಪ್ಪನ ಕೈಗೆ ಹಾಕಿದ್ದ.

" ನೀ ಊರಿಗೆ ಹೋಗು ಭೀಮಣ್ಣಾ. ನಾನು, ಕಾಮಣ್ಣಾ ಇಬ್ಬರೂ ಹೋಗಿ ಅವರನ್ನು ಬಿಡಿಸಿ ಕಳಿಸುತೀವಿ, " ಎಂದು ಹೇಳಿ ಅವನನ್ನು ಕಳುಹಿಸಿ ಕೊಟ್ಟಿದ್ದ ಮರಿಯಪ್ಪ. ಮೂರು ದಿನ ಕಳೆದು ಹೋಗಿದ್ದುವು. ಹುಡುಗರಿನ್ನೂ ಊರಿಗೆ ಬಂದಿರಲಿಲ್ಲ. ಇಂದು ಬಂದಾರು, ನಾಳೆ ಬಂದಾರು ಎಂದು ನಿರೀಕ್ಷಿಸುತ್ತಲಿದ್ದ, ಭೀಮಪ್ಪ.

ಖಟ್ಲೆಯನ್ನು ರದ್ದುಪಡಿಸುವ ಅಧಿಕಾರ ' ಪೋಲೀಸು ಸಾಬ ' ನಿಗಿಲ್ಲವೆಂಬುದು ಚೆನ್ನಾಗಿ ಗೊತ್ತಾಗಿದ್ದಿತಾದರೂ ಭೀಮಪ್ಪ ' ಸಾಬ ' ನ ಹೆಸರು ಹೇಳುತ್ತ ಜಂಬ ಕೊಚ್ಚುವದನ್ನು ಇನ್ನೂ ಬಿಟ್ಟಿರಲಿಲ್ಲ.

" ನಮ್ಮ ಸಾಬ ಊರಾಗಿಲ್ಲಂತ ತಡಾ ಆತು ಇಷ್ಟs. ಅಂವಾ ಬಂದರೆ ಬರಲಿ. ನೋಡುತೀಯಂತ ಹೆಂಗಾಗುತೈತಿ. ಆ ಭಾಡ್ಯಾ ಗಿರಿಯನ್ನs

ಹಿಡುಕೊಂಡು ಹೋಗುತ್ತಾನ, ” ಎಂದು ಮೊದಲಾಗಿ ಆತ ಹಳಬರ ಶಿವರಾಯಿಯೊಡನೆ ಹೇಳಿಕೊಳ್ಳುತ್ತಿದ್ದ.

ಶಿವರಾಯಿ ಅಶಿಕ್ಷಿತನೂ ಹುಂಬನೂ ಆಗಿದ್ದನಾದರೂ ಕೊಂಚ ಧೂರ್ತತೆಯೂ ಅವನಲ್ಲಿತ್ತು. ಮುದುಕಿಯ ಗಂಟು ಭೀಮಪ್ಪನ ಕೈಗೆ ಬಂದಂದಿನಿಂದ ಆತ, ಭೀಮಪ್ಪ ಹೇಳಿದುದಕ್ಕೆಲ್ಲ ಹೂಂಗುಟ್ಟುತ್ತ, ಆಗಾಗ ಅವನನ್ನೂ ಅವನ ಮಕ್ಕಳನ್ನೂ ಸ್ತುತಿಸುತ್ತ ದಿನವೂ ನಾಲ್ಕೈದು ಬಾರಿ ಭೆಟ್ಟಿಯಾಗಿ ಚಹ ತಿಂಡಿ ಕೇಳತೊಡಗಿದ್ದ. ಯಾವಾಗಲೂ ಭೀಮಪ್ಪನ ಜತೆಗೇ ಓಡಿಯಾಡುತ್ತ ಅವನಿಂದ ಸೆರೆಯನ್ನೂ ಉಚಿತವಾಗಿ ಪಡೆಯತೊಡಗಿದ್ದ.

“ ಹಿಡೀದs ಬಿಟ್ಟಾರೇನ ? ” ಎಂದ, ಶಿವರಾಯಿ.

ಮತ್ತೆರಡು ದಿನ ಕಳೆದ ತರುವಾಯ ಅಪರಾಧಿಗಳೆಲ್ಲರೂ ಜಾಮೀನಿನ ಮೇಲೆ ಬಿಡುಗಡೆ ಹೊಂದಿ ಊರಿಗೆ ಮರಳಿ ಬಂದರು. ಕುಸ್ತಿಯಲ್ಲಿ ಗೆದ್ದು ಬಂದ ವೀರರನ್ನು ಸ್ವಾಗತಿಸುವಂತೆ ಭೀಮಪ್ಪ ಅವರನ್ನು ಸ್ವಾಗತಿಸಿದ. ಸಮೀಪದ ರೇಲ್ವೆ ನಿಲ್ದಾಣದಿಂದ ಅವರು ಹಳ್ಳಿಯ ಹತ್ತಿರ ಬರುತ್ತಿದ್ದ ಹಾಗೆ, ಹರಿಜನರ ತಿಮ್ಮನೂ ಇನ್ನಿಬ್ಬರೂ ವಾದ್ಯಗಳನ್ನು ನುಡಿಸುತ್ತ ಅವರನ್ನು ಬರಮಾಡಿಕೊಂಡರು. ಗುಲಾಲು ಹಾರಾಡಿತು. ಮೊಹರಂ ಹುಲಿಯ ಹಾಗೆ ಓಣಿಗಳಲ್ಲಿ ಕುಣಿಯುತ್ತ, ಚುರಮುರಿಯ ಕಾಳು ತೂರುತ್ತ ಹಾರಾಡಿದ ಭೀಮಪ್ಪ. ಆ ರಾತ್ರಿ ಗುಂಪಿನವರಿಗೆಲ್ಲ ಕಾಮಣ್ಣನಲ್ಲಿ ಹೋತದ ಊಟವಾಯಿತು. ಊಟ ಮುಗಿಯುತ್ತಲೂ ಒಂದು ಕೊಡದಷ್ಟು ಸೆರೆ ಕುಡಿದು, ಮರಿಯಪ್ಪನನ್ನೂ ‘ ದೊಡ್ಡ ಸಾಹೇಬ ’ ನನ್ನೂ ಹಾಡಿ ಹಾಡಿ ಹೊಗಳುತ್ತ ಎಲ್ಲರೂ ಅರಿವಿಲ್ಲದೆ ಬಿದ್ದುಕೊಂಡರು. ಆ ಮಹಾ ಕೋಲಾಹಲದಿಂದ ದೂರವಿದ್ದವನೆಂದರೆ ಗಿಡ್ಡನೊಬ್ಬನೇ. “ ಇವತ್ತಾದರೂ ಒಂದಿಷ್ಟ ಮಾಂಸ ತಿನ್ನಲೇ. ಏನೂ ಆಗುವದಿಲ್ಲ, ” ಎಂದು ಎಲ್ಲರೂ ಬಲವಂತ ಮಾಡಿದರೂ ಆತ ಅದನ್ನು ಮುಟ್ಟದೆ ಮನೆಗೆ ಬಂದು, ಸ್ವಲ್ಪ ಅನ್ನವನ್ನುಂಡು, ಭಟ್ಟಿಯ ಕೊಳ್ಳದ ಕಡೆ ಹೊರಟು ನಿಂತ.

“ ಇವೊತ್ತಾದರೂ ಮನ್ಯಾಗs ಮಲಕೊಂಡು ಬಿಡೋ ಗಿಡ್ಡಾ. ಆ ಹಾಳ ಕೆಲಸಕ್ಕ ಯಾಕ ಹೋಗುತೀ ? ” ಎಂದಳು, ಸಿದ್ದವ್ವ.

“ ಹೋಗದಿದ್ದರ ಹೆಂಗ ನಡದೀತವ್ವಾ ? ನಾವು ಅತ್ತ ಹೋದಾಗಿಂದ

ಬಾಳ ತ್ರಾಸ ಆಗಿರಬೇಕು ಯಸನೋವಪ್ಪಗ. "

"ಆದರ ಆಗಲೇಳ. ಇದರಿಂದ ನಮಗ ಬರೂ ಲಾಭನೂ ಅಷ್ಟರಾಗs ಐತಿ. ಕತ್ತೆ ದುಡಿದಂಗ ದುಡಿಯುವವರು ನೀವು. ಸಾವುಕಾರ ಆಗಾಂವ ಆ ಕಾವ್ಯಾ.... "

"ಈಗ ದಿವಸಕ್ಕ ಮೂರು ರುಪಾಯಿನಾದರೂ ಸಿಗುತ್ತೈತಲ್ಲ? ಇದೇನ ಕಡಮಿಯಾತೇನ? ಬೆಳಗಿನಿಂದ ಸಂಜೀತನಕ ಹೊಲದಾಗ ಬೆವರು ಸುರಿಸಿದರೂ ಎಂಟಾಣೆ ಕೂಲಿ ಸಿಗಬೇಕಾದರ ಬಾಳ ಆತು. ಮೂರು ರುಪಾಯಿ ಯಾವ ಮಗಗ ಸಿಗುತ್ತೈತಿ? "

"ಎಂಟಾಣೆ ಸಿಕ್ಕರೇನ, ಮೂರು ರುಪಾಯಿ ಸಿಕ್ಕರೇನ. ಎಲ್ಲಾ ಒಂದs. ಅದರಾಗ ಒಂದ ಪೈನಾದ್ರೂ ಮನೀಗೆ ತಂದಕೊಟ್ಟೀರೇನ ಎಂದಾರೆ? "

"ರೊಕ್ಕಾ ತಗೊಂಡೇನ ಮಾಡುತೀ ಬಿಡs. ಪೈಲ್ವಾನ ಅಂದ ಮ್ಯಾಲ ಬದಾಮಿ, ಖಾರೀಕ ಬೇಕೇಬೇಕಾಗುತ್ತೈತಿ. ಅದರ ಖರ್ಚೆಲ್ಲಾ ನನ್ನ ದುಡಿತದಾಗs ನಡಸಿದೇನಲ್ಲಾ—ಅದೇನ ಸಣ್ಣ ಮಾತs? "

"ಪೈಲ್ವಾನ....ಪೈಲ್ವಾನ....ಯಾವಾಗ ನೋಡಿದರೂ ಅದs ಮಾತs. ತಿನ್ನೂದು—ಮೈ ಬೆಳಸಿಕೊಳ್ಳೂದು....ಅವನ್ನ ಬಿಟ್ಟರ ಬ್ಯಾರೆ ಯಾತರದೂ ಲಕ್ಷ್ಯ ಇಲ್ಲ ನಿನಗ. ಅದs ಹುಚ್ಚಿನಾಗ ಹೇಣತೀನ್ನೂ ಕಳಕೊಂಡು ಕುಂತಿ. ಅಲ್ಲಿ ಅಕಿ, ಛಿನಾಲಿ, ಊರ ಬಸವಿಯ ಹಂಗ ನೂರು ಗೆಣೇರನ್ನ ಕಟ್ಟಿಕೊಂಡ ನಮ್ಮ ಮಾನಾ ಮಾರಾಕ ಹತ್ತಿದಾಳ.... "

"ಆಕಿ ಹಾಳಭಾಂವೀ ಬೀಳಲೊಲ್ಲಳ್ಯಾಕ, ನಮಗೇನ ಸಂಬಂಧ ಬರುತ್ತೈತಿ? ಮೂರು ವರ್ಷದ ಹಿಂದs ಬಿಟ್ಟುಬಿಟ್ಟೇನಿ ಆಕೀನ್ನ. ನಾ ಅವಳ ಗಂಡನಲ್ಲ. ಅವಳು ನನ್ನ ಹೇಣತಿ ಅಲ್ಲ.... "

"ಸೋಡಚೀಟೀ ಆದರೂ ಕೊಟ್ಟು ಬಿಟ್ಟರ ಒಂದ ನಿಗ್ಗರ ತಪ್ಪಿಹೋಗುತ್ತೈತಿ. ಆದರs ಆ ಹೊಯ್ಮಾಲಿ ಸಣ್ಣಿಗೆ ಸೋಡಚೀಟಿ ತಗೊಳ್ಳೂದs ಬ್ಯಾಡಾಗ್ಯೈತಿ. ತನ್ನಂಗs ಮಗಳನ್ನೂ ಸೂಳೀನ್ನ ಮಾಡಿ ಚಕ್ಕಂದ ಹೊಡೀಬೇಕಂತ ಮಾಡಿದಾಳ.... "

ಹೆಂಗುಸರ ವಿಷಯ ಹೊರಟೊಡನೆ ಗಿಡ್ಡನಿಗೆ ತಲೆನೋವು ಬಂದಂತಾ

ಗುತ್ತಿತ್ತು. ಆ ವಿಚಾರಗಳಲ್ಲಿ ಅವನಿಗೆ ಕೊಂಚವೂ ಆಸಕ್ತಿಯಿರಲಿಲ್ಲ. "ಏನಾರ ಮಾಡಿಕೊಳ್ಳಲಿ ಬಿಡs," ಎಂದಿಷ್ಟೇ ನುಡಿದು ಆತ ಮನೆಯಿಂದ ಹೊರಟುಬಿಟ್ಟ.

ಆತ ಅಂಗಳಕ್ಕಿಳಿದು ಬಂದಾಗ, ಕೃಷ್ಣಪಕ್ಷದ ಚಂದ್ರ ಆಗ ತಾನೆ ಗುಡ್ಡದ ನೆತ್ತಿಯಿಂದ ಮೇಲಕ್ಕೇರಿ ಬರುತ್ತಿದ್ದುದು ಕಾಣಿಸಿತು. ಕ್ಷಿತಿಜದ ಅಂಚು ತಿಳಿ ಹಳದಿ ಬಣ್ಣದಿಂದ ಬೆಳಗುತ್ತಿತ್ತು. ಮೇಲಕ್ಕೇರಿ ಬಂದ ಕಳಾಹೀನ ಚಂದ್ರ ದೊಡ್ಡದೊಂದು ಕೋಳಿಮೊಟ್ಟೆಯಂತೆ ಕಾಣುತ್ತಿದ್ದ. ಗಿಡ್ಡ ನಿಧಾನವಾಗಿ ಹೆಜ್ಜೆ ಹಾಕುತ್ತ ಮುಂದೆ ಸಾಗಿದ. ಇಸ್ಪೀಟಾಟದ ಹುದ್ದರಿಗಳೆಲ್ಲ ಕಾಮಣ್ಣನ ಮನೆಯಲ್ಲಿ ಸೇರಿ ಕುಡಿದು ಬಿದ್ದಿದ್ದರಾದುದರಿಂದ, ಬಸವಾಣಿಯ ಚಹದಂಗಡಿ ಅಂದು ಭಣ ಭಣ ಎನ್ನುತಿತ್ತು. ಬಸವಾಣಿ ಅಂಗಡಿಯನ್ನು ಮುಚ್ಚುವ ಸನ್ನಾಹದಲ್ಲಿದ್ದುದೂ, ನಾಗಿ ಹಾಸುಗೆ ಸಿದ್ಧಗೊಳಿಸುತ್ತಿದ್ದುದೂ ಕಾಣಿಸಿತು. "ಯಾಕಲಾ ಗಿಡ್ಡಾ, ಹೊಂಟೀನ?" ಎಂದು ಒಳಗಿನಿಂದಲೇ ಕೂಗಿದ ಬಸವಾಣಿ. "ಒಂದು ಉಂಡೀನರೆ ತಿಂದು ಹೋಗಾಕೋ," ಎಂದು ನಗುತ್ತ ನುಡಿದಳು ನಾಗಿ. "ಇದs ಈಗs ಉಂಡು ಬಂದೀನೇ ನಾಗೀ," ಎಂದು ಉತ್ತರವಿತ್ತು ಗಿಡ್ಡ ಮುಂದೆ ಸಾಗಿದ.

ಹೊಳೆ ದಾಟಿ, ಗುಡ್ಡ ಏರಿ ಇಳಿದು ಆತ ಭಟ್ಟಿಯ ಕೊಳ್ಳದ ಬಳಿ ಬರುತ್ತಿದ್ದ ಹಾಗೆ ಭಟ್ಟಿಯ ಸ್ಥಳದಲ್ಲಿ ಯಾರೋ ಮಂಜುಲ ಧ್ವನಿಯಿಂದ ಹಾಡುವುದು ಕೇಳಬರತೊಡಗಿತು. ಗಿಡ್ಡ ಕೊಂಚ ಚಕಿತನಾಗಿ ಅವಸರದಿಂದ ಇಳಿಯತೊಡಗಿದ. ಭಟ್ಟಿಯ ಹತ್ತಿರ ಹಾಡುವುದು ಹಾಗಿರಲಿ, ಅನಾವಶ್ಯಕವಾಗಿ ಮಾತನಾಡುವುದನ್ನೂ ಸಹ ಪ್ರತಿಬಂಧಿಸಿದ್ದ, ಕಾಮಣ್ಣ. ಗುಟ್ಟಾಗಿ ನಡೆಯುವ ಕೆಲಸ. ಸದ್ದಿಲ್ಲದೆ ನಡೆಯಬೇಕಾದುದು ಅಗತ್ಯವಾಗಿತ್ತು. ಇಷ್ಟು ದಿನಗಳ ವರೆಗೂ ಆ ನಿಯಮವನ್ನು ಎಲ್ಲರೂ ಅನುಸರಿಸುತ್ತ ಬಂದಿದ್ದರು. ಇಂದೇನು ಹುಚ್ಚು ಹಿಡಿದಿದೆಯೊ ಏನೊ, ಯಸನೋವಪ್ಪನಿಗೆ!

ಆತ ಭಟ್ಟಿಯ ಹತ್ತಿರಹತ್ತಿರ ಬಂದ ಹಾಗೆ ಹಾಡು ಸ್ಪಷ್ಟವಾಗಿ ಕೇಳಿಸತೊಡಗಿತು:

"ನೂರಾರು ಮಂದಿ ಗೆಣೇರನ ಮಾಡಿದೆ
ಯಾರಿಂಥವರು ಸಿಗಲಿಲ್ಲಾ
ಯಾರಿಂಥವರು ಸಿಗಲಿಲ್ಲಾ...."

ಅದು ಹೆಣ್ಣಿನ ಧ್ವನಿಯೆಂಬುದು ಸ್ಪಷ್ಟವಾಗಿತ್ತು. "ಎಲ, ಎಲಾ, ಹಾಡುವಾಕೀನ ಎಲ್ಲಿಂದ ಹಿಡುಕೊಂಡು ಬಂದಾರಲೇ ಇವರು!" ಎಂದುಕೊಳ್ಳುತ್ತ ಗಿಡ್ಡ ಪೊದೆಯುನ್ನು ದಾಟಿ ಭಟ್ಟಿಯ ಬಳಿ ಬಂದ. ಅಲ್ಲಿನ ದೃಶ್ಯ ಅವನನ್ನು ದಿಙ್ಮೂಢನನ್ನಾಗಿಸಿತು. ಕೊಳ್ಳದ ಮೇಲೇರಿ ಬಂದ ಚಂದ್ರನ ಮಂದ ಬೆಳಕಿನಲ್ಲಿ, ಭಟ್ಟಿಯ ಒಲೆಗಳ ಎದುರಿಗೆ ತರುಣಿಯೊಬ್ಬಳು ಸಂಪೂರ್ಣ ನಗ್ನಳಾಗಿ ನಿಂತು ಹಾಡುತ್ತಲಿದ್ದಳು. ಅವಳ ಕಾಲುಗಳ ಬಳಿ ಕುಳಿತುಕೊಂಡು ಯಸನೋವಪ್ಪ ಮಣ್ಣಿನ ಹರಿವಾಣವೊಂದನ್ನು ಕೈಯಲ್ಲಿ ಹಿಡಿದು, ಅದನ್ನೇ ತಬಲಾದಂತೆ ಉಪಯೋಗಿಸುತ್ತ, ಅವಳ ಹಾಡಿಗೆ ತಾಲದ ಜತೆಯನ್ನು ಮೇಳವಿಸುತ್ತಲಿದ್ದ. ಸೊಂಟದಲ್ಲಿರುವ ಲಂಗೋಟಿಯನ್ನು ಬಿಟ್ಟರೆ ಅವನ ಮೈ ಮೇಲೂ ಬಟ್ಟೆಯಿರಲಿಲ್ಲ. ಅವನಿಂದ ತುಸು ದೂರದಲ್ಲಿ ತಿಪ್ಪುವೂ ಕಲ್ಲನೂ ಕುಳಿತುಕೊಂಡು ಹಾಡಿಗೆ ತಾಳ ಹಾಕುತ್ತಲಿದ್ದರು. ಎಲ್ಲರೂ ಸೆರೆಯ ಅಮಲಿನಲ್ಲಿ ಮೈಮರೆತುದು ಸ್ಪಷ್ಟವಾಗಿ ಗೊತ್ತಾಗುವಂತಿತ್ತು. ಹಾಡುತ್ತಿದ್ದ ಹೆಣ್ಣು ಸಾಕಷ್ಟು ಕುಡಿದಿದ್ದಳೇನೊ, ಕೊರಳೆತ್ತಿ ಹಾಡುತ್ತಿದ್ದ ಹಾಗೆ ಅವಳ ದೇಹ, ಗಾಳಿಗೆ ಹೊಯ್ದಾಡುವ ಜೋಳದ ದಂಟಿನಂತೆ ಅತ್ತಿತ್ತ ತೂಗಾಡುತ್ತಿತ್ತು.

"ಕಾಲು ಬಿದ್ದರು ಇವಗ ಕರುಣ ಹುಟ್ಟುವದಿಲ್ಲ
ನೀತಿ ನಡಾವಳಿಯಿಂದ ಚವ್ವಗೆಟ್ಟಿನೆ,
ಮತಿಗೆಟ್ಟಿನೆ,
ಕೈಲೆ ಕೊಟ್ಟರೆ ನನ್ನ ಸಂಗ ಸಾಯೂತನಕ ಮಾಡೂದಿಲ್ಲ
ಬಾಯಿಲಾಡಿ ಬೆಲ್ಲದಂಥವಗೆ ಬೇಸರಾದೇನೆ,
ಹೇಸಿಯಾದೆನೇ
ಹೇಸಿಯಾದೆನೇ...."

"ಹಾ ಜೀ ಜೀ ಜೀ," ಎಂದು ಹೇಳಿ, ತಿಪ್ಪು ತನ್ನ ಪಾವುಡವನ್ನು ಹಾರಿಸುತ್ತ—"ಹೌದೌದೇ!" ಎಂದು ಕೂಗಿದ.

"ಹೌದೇ ಹುಡುಗೀ," ಎಂದ, ಕಲ್ಲ.

"ಅಹಹಾಹ್ಹಾ!" ಎಂದು ಉದ್ಗಾರ ತೆಗೆದು ಯಸನೋವಪ್ಪ, ಅವಳ ಕಾಲುಗಳ ಮೇಲೆ ತನ್ನ ಹಣೆ ತಿಕ್ಕತೊಡಗಿದ.

ಕೋಪದಿಂದಲೂ ಅಸಹನೆಯಿಂದಲೂ ಕರ್ಕಶವಾದ ಧ್ವನಿಯಲ್ಲಿ ಗಿಡ್ಡ ಕೂಗಿದ: "ಯಸನೋವಪ್ಪಾ."

"ಹಾ, ಹಾ, ಯಸ್," ಎನ್ನುತ್ತ ಯಸನೋವಪ್ಪ ಹೆಣ್ಣಿನ ಕಾಲುಗಳ ಮೇಲಿಂದ ಮುಖವನ್ನೆತ್ತಿ ಗಿಡ್ಡನ ಕಡೆ ತಿರುಗಿದ. "ಬಾರಾಕೆಲೇ ಗೆಣೆಯಾ! ನಿನ್ನ ಹಾದೀನs ನೋಡಾಕ ಹತ್ತಿದ್ವಿನಿ. ಕಲ್ಲ್ಯಾ, ಆ ಗಡಿಗೀ ತತಾರಲೇ ಇತ್ತ. ಕುಡಿ, ಗಿಡ್ಡ್ಯಾ, ಕುಡೀ...."

ಹಾಡುತ್ತಿದ್ದ ಹೆಣ್ಣು ಗಿಡ್ಡನ ಕಡೆ ಹೆಜ್ಜೆಯಿಟ್ಟು, ಅವನ ಕೊರಳಿನಸುತ್ತ ತನ್ನ ಕೈಗಳನ್ನು ಸೇರಿಸಿ, ಮತ್ತೆ ಹಾಡತೊಡಗಿದಳು:

"ಮನ್ನಿಸೋ ನನ್ನಾ, ಗೆಣೆಯಾ, ಮನ್ನಿಸೋ ನನ್ನಾ
ತೆಕ್ಕೀ ಹೊಡದು ಅಪ್ಪಿಕೋ ನನ್ನಾ
ನೀನs ನನಗ ತಕ್ಕ ಗೆಣೆಯಾ ಧಿಕ್ಕರಿಸಬ್ಯಾಡ ನನ್ನಾ
ನನ್ನ ತಪ್ಪು ಕ್ಷಮಾ ಮಾಡೊ ನೀನಾ..."

"ಹಾ ಜೀ ಜೀ ಜೀ," ಎಂದ, ತಿಪ್ಪ.

"ಹೌದಲೇ!" ಎಂದ, ಕಲ್ಲ.

"ಶಾಬ್ಬಾಸ್!" ಎಂದ, ಯಸನೋವಪ್ಪ.

ಹಾವನ್ನು ಕಂಡು ದೂರ ಸರಿಯುವಂತೆ ಗಿಡ್ಡ, ಆ ಹೆಣ್ಣನ್ನು ಬಲವಂತದಿಂದಲೇ ದೂರ ತಳ್ಳಿ, ಕೊಂಚ ಹಿಂದಕ್ಕೆ ಸರಿದುನಿಂತ. ಆತ ನೂಕಿದ ರಭಸಕ್ಕೆ ಹೆಣ್ಣು ಹೊರಳಿ ನೆಲಕ್ಕೆ ಬಿದ್ದುಬಿಟ್ಟಳು.

"ಯಾಕಲೇ, ನಮ್ಮ ಸಕ್ರೀನ ಬಡಿಯಾಕ ಹತ್ತೀದೀ?" ಎಂದು ತೊದಲುತ್ತ ಯಸನೋವಪ್ಪ ಮೇಲಕ್ಕೇಳಲು ಯತ್ನಿಸಿದ, ಏಳಲಾಗಲಿಲ್ಲ; "ಆಯ್ಯೋ ನನ್ನ ಸಕ್ರೀ, ಬಡಿದನೇನ ನಿನ್ನ ಅವಾ, ಬಾಳ ಪೆಟ್ಟ ಹತ್ತಿತೇನs" ಎನ್ನುತ್ತಾ, ಕೈಗಳನ್ನೂ ಕಾಲುಗಳಂತೆ ಉಪಯೋಗಿಸಿ ತೆವಳುತ್ತ ಅವಳ ಬಳಿ ಹೋಗಿ ಅವಳ ಶರೀರವನ್ನು ಮೇಲಕ್ಕೆತ್ತಲು ಯತ್ನಿಸುತ್ತಿದ್ದ ಹಾಗೆ ಅರಿವು ತಪ್ಪಿ ಅವಳ ಮೇಲೇ ಬಿದ್ದುಕೊಂಡುಬಿಟ್ಟ. ಅದನ್ನು ಕಂಡು, ಕಲ್ಲ ಗಟ್ಟಿಯಾಗಿ ಕೈತಟ್ಟಿ "ತಗೊಳ್ಳಲೇ," ಎಂದು ಕೂಗಿದ. "ವಾಹವ್ವಾರೆ ವಾಹವ್ವಾ," ಎಂದ ತಿಪ್ಪ.

ಮುಂದೇನು ಮಾಡುವುದು, ಅವರ ಕೂಗಾಟವನ್ನು ಹೇಗೆ ನಿಲ್ಲಿಸುವುದು—ಎಂದು ಯೋಚಿಸುತ್ತ ಗಿಡ್ಡ ಒಂದು ಕ್ಷಣ ಸುಮ್ಮನೆ ನಿಂತುಕೊಂಡಿದ್ದ. ಅನಂತರ ಥಟ್ಟನೆ ಮುಂದುವರಿದು, ಯಸನೋವಪ್ಪನನ್ನು ಮೇಲಕ್ಕೆತ್ತಿ, ಎಡ

ಗೈಯಿಂದ ಅವನ ದೇಹವನ್ನು ಹಿಡಿದುಕೊಂಡು, ಬಲಗೈಯಿಂದ ಅವನ ಕೆನ್ನೆಗಳನ್ನು ಥಳಿಸತೊಡಗಿದ. ಹತ್ತಿಪ್ಪತ್ತು ಏಟು ಬಿದ್ದ ತರುವಾಯ ಯಸನೋವಪ್ಪನಿಗೆ ಸ್ವಲ್ಪ ತಿಳಿವು ಬಂದಂತಾಯಿತು. ಕಣ್ಣುಗೊಂಬೆಗಳನ್ನು ಗರಗರನೆ ತಿರುಗಿಸುತ್ತ ಆತ--- " ಅಯ್ಯೋ, ಗಲ್ಲಾ ಕಡೀಬ್ಯಾಡ ಬಿಡs ಸಕ್ರೀ........ ನೋವ:ತು....ಬಾಳ ನೋವಾತು.... " ಎಂದು ತೊದಲಿದ.

ಗಿಡ್ಡ ಅವನನ್ನು ದರದರನೆ ಎಳೆದುಕೊಂಡೊಯ್ದು, ಝರಿಯ ನೀರಲ್ಲಿ ಮುಳುಗಿಸಿದ. ಮೂಗಿನಲ್ಲೂ ಬಾಯಿಯಲ್ಲೂ ನೀರು ಸೇರತೊಡಗಿದ ಹಾಗೆ ಯಸನೋವಪ್ಪನ ಅಮಲು ಇಳಿಯತೊಡಗಿತು. ದೇಹವೆಲ್ಲ ಪೂರ್ತಿಯಾಗಿ ತೊಯ್ದು ಹೋಗುತ್ತಲೂ ಆತ ಕಣ್ಣು ಪಿಳುಕಿಸುತ್ತ ಮೇಲಕ್ಕೆದ್ದ. ಆತ ಎಚ್ಚರುಗೊಳ್ಳುವುದನ್ನೆ ಕಾಯುತ್ತಲಿದ್ದ ಗಿಡ್ಡ ಥಟ್ಟನೆ ಮುಂದುವರಿದು ಮತ್ತೊಮ್ಮೆ ಫಳೀರೆಂದು ಕೆನ್ನೆಗೆ ಬಿಗಿದ. ಯಸನೋವಪ್ಪನಿಗೆ ಸಂಪೂರ್ಣವಾಗಿ ಎಚ್ಚರವಾಯಿತು. ತಾನಿರುವುದೆಲ್ಲಿ, ನಡಸಿರುವುದೇನು ಎಂಬುದರ ಅರಿವೂ ಉಂಟಾಯಿತು.

" ಅಯ್ಯಯ್ಯೋ....ಸತ್ತೆನಪಾ ಸತ್ತೆನಿ....ಬಡೀಬ್ಯಾಡೋ ಗಿಡ್ಡಾ. ನಿನ್ನ ಕಾಲು ಬೀಳುತೀನಿ, " ಎಂದು ಆತ ಗೋಗರೆಯತೊಡಗಿದ.

" ನನ್ನ ಕಾಲು ಬೀಳುತೀಯೋ ಭಾಡಕೌ ? ಇದೆಲ್ಲಾ ಏನ ನಡಸೀದಿ ಆಟಾ ? ಇವಳನ್ನು ಯಾರು ಕರಕೊಂಡು ಬಂದರು ? "

" ಹೇಳುತೀನಪಾ, ಎಲ್ಲಾ ಹೇಳುತೀನಿ. ಬಡೀಬ್ಯಾಡ, " ಎನ್ನುತ್ತಾ ಯಸನೋವಪ್ಪ ಮುಗ್ಗರಿಸುತ್ತ ನಡೆದು ಒಲೆಯ ಹತ್ತಿರ ಬಂದು, ಕೈಗಳೆರಡನ್ನೂ ಬೆಂಕಿಯ ಕಡೆ ನೀಡಿ ಕಾಯಿಸುತ್ತ ಕುಳಿತುಕೊಂಡ.

" ಇವರಿಬ್ಬರೂ ಕುಡಿದು ಮಸ್ತ ಆಗ್ಯಾರ. ಇವೊತ್ತ ಕೊಡಾ ಒಯ್ಯುವವರು ಯಾರು ? " ಎಂದು ಕೇಳಿದ ಗಿಡ್ಡ.

" ತಿಮ್ಮನ್ನ ಕಳಿಸುತೀನಂತಿದ್ದ ಕಾಮಣ್ಣ. ಬರಲಿಲ್ಲೇನ ಅಂವಾ ? "

" ಬರುತಾನ ನಾಳೆ ರಾತ್ರಿ. ಇಲ್ಲಿ ನೀವು ಕುಡಿದು ಬಿದ್ದೀರಿ. ಅಲ್ಲಿ ಅವರೆಲ್ಲಾ ಕುಡಿದು ಬಿದ್ದಾರ. ಕುಡುಕ ಸೂಳೀಮಕ್ಕಳು--ನಿಮ್ಮ ಸಂಗ ಸಾಕಾಗಿ ಹೋತು. ಯಾವ ವ್ಯಾಳ್ಯೇದಾಗ ಕುಡೀಬೇಕು, ಯಾವ ವ್ಯಾಳ್ಯೇದಾಗ ಕುಡೀಬಾರದನ್ನೂದು ಕೂಡಾ ತಿಳಿಯೂದಿಲ್ಲ. ಬರೀ ಕುಡಿತ ಅಷ್ಟs

ಸಾಕಾಗುವ ಹಂಗಿಲ್ಲ. ಸೂಳೇರೂ ಬೇಕು ನಿಮಗ....ಎಲ್ಲಿಂದ ಕರತಂದ್ಯೋ ಇವಳನ್ನ? ಯಾರಿವಳು?"

ಯಸನೋವಪ್ಪ ತಲೆಯನ್ನು ಮೇಲಕ್ಕೆತ್ತದೆ, ಹೇಳಿದ: "ಇವಳs? ಇವಳು ಗೊತ್ತಿಲ್ಲೇನ ನಿನಗ? ಜೀ ಜೀ ಪದಾ ಹಾಡುತಾಳಲ್ಲಾ—ಹೊಲೇರ ಸಕ್ರಿ...."

"ಸಕ್ರಿಯೋ ವಿಷಾನೋ....ಇಲ್ಲಿಗ್ಯಾಕ ಬಂದಾಳ ಇವಳು?"

"ಇವತ್ತು ನೀವೆಲ್ಲಾ ಬಿಡುಗಡೆಯಾಗಿ ಬಂದಿರಲ್ಲಾ—ಅಲ್ಲಿ ಊರಾಗ ಅವರೆಲ್ಲಾ ಖುಷೀ ಮಾಡಾಕ ಹತ್ತಿದಾರ, ನಾವೂ ಇಲ್ಲಿ ಏನಾರೆ ಸ್ವಲ್ಪ ಮಜಾ ಮಾಡಿದರಾತು ಅಂತ ನಾನs ಕರಕೊಂಡು ಬಂದಿದ್ದಿನಿ ಸಕ್ರೀನ್ನ...."

"ಹೂಂ. ಮಜಾ ಮಾಡು ಮಜಾ. ಕೊಳ್ಳದಾಗ ಗದ್ದಲಾ ಮಾಡ ಬಾರದನ್ನೂದು ಗೊತ್ತಿಲ್ಲೇನ ನಿನಗ? ಪೋಲೀಸರು ಯಾವಾಗ ಯಾವ ಕಡೆ ಬಂದಾರು ಹೇಳಾಕ ಬರೂದಿಲ್ಲ. ಅವರ ಕೈಯಾಗ ಸಿಕ್ಕಿ ಅಂದರ ಒಳೇ ಮಜಾ ಆಗುತಿತ್ತು ನಿನಗ...."

"ದೊಡ್ಡಸಾಬ ಕಾಮಣ್ಣಾಗ ಮಾಮಾ ಆಗಬೇಕಂತಲ್ಲ ಗಿಡ್ಡಾ? ನಮಗ ಪೋಲೀಸರೇನ ಮಾಡುತಾರ?"

"ಆ ಕಾಮಣ್ಣನ ಮಾತು ನಂಬಿಕೊಂಡು ಹುಚ್ಚರಂಗ ಮಾಡಾಕ ಹತ್ತಿದರ ಎಲ್ಲಾರೂ ಜೇಲಿಗೆ ಹೋಗಿ ಬೀಳಬೇಕಾದೀತು. ಪೋಲೀಸಖಾತೆ ಅಂದರೇನ ದೊಡ್ಡಸಾಬನ ಅಪ್ಪಂದಲ್ಲ."

"ಹಂಗಾದರ ನಮ್ಮನ್ನೂ ಹಿಡೀತಾರು ಅಂತೀಯಾ ಗಿಡ್ಡಾ?"

"ಸಿಕ್ಕರ ಬಿಟ್ಟಾರೇನ? ಮಂತ್ರಿಯೇನ ನಮ್ಮ ಮಾಮಾ ಇಲ್ಲ. ಗೊತ್ತಾತೂ? ಎಂಥಾ ಭಯಂಕರ ಕೆಲಸಾ ನಡಿಸೀರಿ ಇಲ್ಲಿ....ಅವಳ ಮೈ ಮ್ಯಾಲಿನ ಸೀರೀ ಕೂಡಾ ಕಳೀಬೇಕೇನ? ನಾಚಿಕಿ ಗೀಚಿಕಿ ಬ್ಯಾಡಾ?"

ಹೆಣದಂತೆ ಬಿದ್ದುಕೊಂಡಿದ್ದ ಸಕ್ರಿಗೆ ಕೊಂಚ ಎಚ್ಚರವಾಯಿತೇನೋ, ನಿದ್ದೆಯಲ್ಲಿ ಕನವರಿಸಿದವರ ಹಾಗೆ ಅವಳು ಗುಣುಗುಣಿಸತೊಡಗಿದಳು:

"ಇಂಥಾ ಗೆಣೆಯಾ ಸಿಗಲಿಲ್ಲಾ
ಇಂಥಾ ಗೆಣೆಯಾ ಸಿಗಲಿಲ್ಲಾ...."

ಗಿಡ್ಡ ಅಸಹನೆಯಿಂದ ಉಗುಳಿದ. "ಹಿಂಗ ಕುಂತರ ಹೆಂಗ ನಡ

ದೀತು ? ಟೀಶನ್ನಿಗೆ ಕೊಡಾ ಒಯ್ಯಬೇಕಲ್ಲ ? ಏಳು, ಕೊಡಾ ತುಂಬೇಳು."

ಯಸನೋವಪ್ಪ ತೂಗಾಡುತ್ತ ಎದ್ದು, ಕೊಡಕ್ಕೆ ಸೆರೆ ತುಂಬತೊಡಗಿದ.

ಸಕ್ರಿ ಮತ್ತೆ ಗುಣುಗುಣಿಸತೊಡಗಿದ್ದಳು:

" ಮನ್ನಿಸೋ ನನ್ನಾ, ಗೆಣೆಯಾ ಮನ್ನಿಸೋ ನನ್ನಾ
ತಾಳಲಾರೆನೋ ಕಾನುಬಾಣಾ೨೨ "

# ಆರು

ಅಂದು ಬುಧವಾರ. ರಾಮಾಪುರದ ಸಂತೆ. ಸುತ್ತುಮುತ್ತಲಿನ ಹತ್ತು ಹದಿನೈದು ಹಳ್ಳಿಗಳ ಜನರೆಲ್ಲ ಆ ಸಂತೆಗೆ ಬಂದು, ಜೋಳವನ್ನೋ ಮೆಣಸಿನ ಕಾಯಿಯನ್ನೋ ಮಾರಾಟ ಮಾಡಿ ಎಣ್ಣೆ, ಉಪ್ಪು, ಎಲೆಯಡಕೆ ಇತ್ಯಾದಿ ವಸ್ತುಗಳನ್ನು ಕೊಂಡುಕೊಂಡು ಹೋಗುತ್ತಿದ್ದರು. ಗಿರಿಯನೂ ಪ್ರತಿ ವಾರವೂ ಹೋಗಿ ಬರುತ್ತಿದ್ದ. ಮೆಣಸಿನಕಾಯಿಯನ್ನು ಮನೆಗೆ ತಂದಂದಿನಿಂದ ಪ್ರತಿ ಬುಧವಾರವೂ ಒಂದು ಬುಟ್ಟಿಯಷ್ಟು ಕಾಯಿಗಳನ್ನೊಯ್ದು ಮಾರತೊಡಗಿದ್ದ.

ಆ ದಿನವೂ ಆತ ಮೆಣಸಿನಕಾಯಿಯ ಬುಟ್ಟಿ ಹೊತ್ತು ಸಂತೆಗೆ ಹೊರಟಿದ್ದ. ಊರಿನಿಂದ ಎರಡು ಮೈಲು ನಡೆದು ಬಂದುದೂ ಆಗಿತ್ತು. ಇನ್ನೊಂದು ಮೈಲು ನಡೆದರೆ ರಾಮಾಪುರ ಬರುವುದು. ಆ ವೇಳೆಗಾಗಲೆ ಬಿಸಿಲು ಚನ್ನಾಗಿ ಬಲಿತಿತ್ತು. ದಾರಿಯಲ್ಲಿದ್ದ ಜಾಲಿಯ ಗಿಡವೊಂದರ ನೆರಳಿನಲ್ಲಿ ಬುಟ್ಟಿಯನ್ನಿಳಿಸಿ ಗಿರಿಯ ದಣುವಾರಿಸಿಕೊಳ್ಳಲು ಕುಳಿತುಕೊಂಡ, ಉಟ್ಟ ಧೋತರದಿಂದ ಮುಖದ ಮೇಲಿನ ಬೆವರನ್ನೊರಸಿಕೊಂಡ, ಪಾವುಡದಿಂದ ಬೀಡಿಯೊಂದನ್ನು ತೆಗೆದು ಹೊತ್ತಿಸಿ ಸೇದುತ್ತ ಕುಳಿತ.

ಸಂತೆಗೆ ಹೊರಟಿದ್ದ ತರುಣಿಯೊಬ್ಬಳು ಗಿಡದ ನೆರಳಲ್ಲಿ ಕುಳಿತಿದ್ದ ಈತನನ್ನು ಕಂಡು ತಡೆದು ನಿಂತಳು.

" ಗಿರಿಯಾ, "

ಆತ ತಲೆಯೆತ್ತಿ ನೋಡಿದರೆ, ಸೊಂಟದ ಮೇಲೆ ಎಡಗೈಯನ್ನಿರಿಸಿ ಬಲಗೈಯಿಂದ ಸೆರಗನ್ನು ಹಿಡಿದೆತ್ತಿ ಮುಖಕ್ಕೆ ಗಾಳಿ ಹಾಕಿಕೊಳ್ಳುತ್ತ ನಿಂತಿದ್ದ ಬಾಲಿ ಕಾಣಿಸಿದಳು. ಅವಳ ತುಟಿಗಳ ಮೇಲೆ ಅದೇ ಆ ತುಂಟ ನಗೆ ಮಿನುಗುತ್ತಿತ್ತು.

ಗಿರಿಯ ಮತ್ತೆ ತಲೆ ತಗ್ಗಿಸಿ ಮೌನವಾಗಿ ಬೀಡಿ ಸೇದತೊಡಗಿದ. ಅವಳೊಡ್ಡಿದ ಬಲೆಯಿಂದ ತಪ್ಪಿಸಿಕೊಂಡುದಾಗಿತ್ತು. ಹದಿನೈದು ದಿನಗಳ ವರೆಗೆ ಅವಳ ಭೆಟ್ಟಿಯಿರಲಿಲ್ಲ. ಮೊದಲು, ಒಂದೆರಡು ರಾತ್ರಿ ಮನಸ್ಸು ಬಹಳ ಹೊಯ್ದಾಡಿತ್ತು. " ಮಂದಿ ಏನಾರ ಒಂದು ಆಡಿಕೊಂತಿರುತಾರ. ಎಲ್ಲಾ ಖರೇ ಅಂತ ನಂಬೂದಾದರೂ ಹ್ಯಾಂಗ? ಹೋಗಿ ಬರಲೇನ ಅವಳ ಹಂತೀಲಿ? " ಎಂದೂ ಯೋಚಿಸಿದ್ದ. ಅಂದು ರಾತ್ರಿ ಸಣ್ಣವ್ವನೊಂದಿಗೆ ಮಲಗಿದ್ದ ಕುಲಕರ್ಣಿಯ ನೆನಪು ಬಂದೊಡನೆ ಅಲ್ಲಿಗೆ ಹೋಗುವ ವಿಚಾರವನ್ನು ಮನಸ್ಸಿನಿಂದ ತೆಗೆದು ಹಾಕಿದ್ದ. " ಅಪ್ಪನೂ ಹಲ್ಕಾ, ಮಗಳೂ ಹಲ್ಕಾ, ಅಂಥಲ್ಲಿ ಹೋದರ ನಾನೂ ಹಲ್ಕಾ ಆಗುತೀನಿ, " ಎಂದುಕೊಂಡು ಕೋಗಿಲ್ಲಿಯ ಕಡೆ ಧಾವಿಸುತ್ತಿದ್ದ ಇಂದ್ರಿಯಗಳನ್ನು ಎಳೆದು ನಿಲ್ಲಿಸಿದ್ದ. "ಇನ್ನೊಮ್ಮೆ ಅವಳನ್ನ ನೋಡಬಾರದು. ನೋಡಿದರೂ ಮಾತಾಡಬಾರದು, " ಎಂದೂ ನಿರ್ಧರಿಸಿದ್ದ.

" ಯಾಕೋ ಭಾಡ್ಯಾ, ಗಪ್ಪsಕುಂತಿ? ನಿನಗೇನಾಗ್ಯೆತಿ ಧಾಡಿ? " ಬಾಲಿ ಕೆಣಕುವ ಧ್ವನಿಯಲ್ಲಿ ನುಡಿದಳು.

ಅವಳೊಡನೆ ಮಾತಿಗೆ ತೊಡಗಕೂಡದೆಂದು ಆತ ನಿರ್ಧರಿಸಿದ್ದನಾದರೂ ಅವಳೇನೂ ಅವನನ್ನು ಹಾಗೇ ಬಿಡುವಂತೆ ತೋರಲಿಲ್ಲ. " ಭಾಡ್ಯಾ, " ಎಂದು ಬಯ್ಯುತಿದ್ದಾಳೆ. ಜೀಕೆಂತಲೇ ಕೆಣಕುತ್ತಿದ್ದಾಳೆ. ಮೌನವಾಗಿರ ಬಯಸುವವರನ್ನೂ ಮಾತಿಗೆಳೆಯುವ ಗಂಡುಬೀರಿ!

" ವಾರೆ ವಾ! ಇಷ್ಟು ಸೊಕ್ಕು ಬಂತೇನ ನಿನಗ? ಯಾಡ್ಡ ರಾತ್ರಿ ನಿನ್ನ ಮನ್ಯಾಗ ಕರಕೊಂಡದ್ದು ನಂದs ತಪ್ಪಾತೋ ಏನೊ. ಸಲಗೀ ಕೊಟ್ಟ ನಾಯಿ ತಲಿಗೇರಿತಂತ! " ಎನ್ನುತ್ತಾ ಬಾಲಿ ಅವನ ಎದುರಿನಲ್ಲಿಯೆ ಕುಳಿತುಕೊಂಡು, ಉಡಿಯಿಂದ ಎಲೆ ಅಡಕೆ ತೆಗೆದು ಬಾಯಿಗಿಟ್ಟುಕೊಳ್ಳತೊಡಗಿದಳು.

ಮಾತನಾಡಬಾರದೆಂಬ ಸಂಕಲ್ಪ ಮುರಿದುಹೋಯಿತು. ಬೀಡಿಯ ಕೊರೆಯನ್ನು ನೆಲಕ್ಕೆಸೆದು, ಮೆಟ್ಟಿನಿಂದ ತುಳಿಯುತ್ತ ಗಿರಿಯನೆಂದ:

" ಸಂತೀ ಮುಂದಿ ಬರುತಿರತಾರ ಬಾಲೀ. ಬಾಯಿ ಹಗುರ ಬಿಡ ಬ್ಯಾಡ. "

ಎಡಗೈಯ ತೋರುಬೆರಳನ್ನು ತುಟಿಯ ಮೇಲಿರಿಸಿಕೊಂಡು, ಮುಖ ವನ್ನೂ ಕಣ್ಣುಗೊಂಬೆಗಳನ್ನೂ ಹಾಗೆ ಹೀಗೆ ಹೊರಳಿಸುತ್ತ ಬಾಲಿ ಅಣಕ ವಾಡಿದಳು:

" ಒಳೇ ಸಾಜೋಗನಂಗs ಮಾತಾಡುತೀಯಲ್ಲೋ! ಬಾಯಿ ಹಗರು ಬಿಡಬಾರವಂತ....ಹಗರು........ ರಾತ್ರಿ ಘುಕಟ ಬಂದು ಮಲಗೂದು ಹಗರು ಕಾಣಿಸಲಿಲ್ಲೇನ ನಿನಗ? "

ಗಿರಿಯನಿಗೆ ಕೋಪ ಬಂದಿತು, ಅದಕ್ಕೂ ಹೆಚ್ಚಾಗಿ ನಾಚಿಕೆಯಾಯಿತು. ತನ್ನ ಕೆನ್ನೆಯನ್ನು ತಾನೇ ಛಳಿಸಿಕೊಳ್ಳಬೇಕೆನ್ನಿಸಿತು. " ಈ ಹಾಳುರಂಡಿಯ ಸಂಗ ಯಾಕಾರ ಮಾಡಿದೆನೊ ಶಿವನೇ! " ಎಂದುಕೊಳ್ಳುತ್ತ ಆತ ಹೇಳಿದ:

" ರಾತ್ರಿ ಮಲಗಿದ್ದಕ್ಕ ನಿನಗ ಎಷ್ಟ ಕೊಡಬೇಕು ಹೇಳು. ಕೊಡು ತೀನಿ. "

ಬಾಲಿ ಮತ್ತೆ ಅಣಕದ ನಗೆಯೊಂದಿಗೆ ಕೇಳಿದಳು:

" ಕೊಡುತೀಯೇನ? ಕೊಡು, ಎಷ್ಟ ಕೊಡುತೀ ನೋಡೂಣು. "

" ಈ ಮೆಣಸಿನಕಾಯಿ ಮಾರಿ ಕೊಡುತೀನಿ ಬಾ, " ಎನ್ನುತ್ತ ಗಿರಿಯ ಮೇಲಕ್ಕೆದ್ದು, ಬುಟ್ಟಿಯನ್ನು ಹೊತ್ತುಕೊಂಡು ಮುಂದೆ ಹೊರಟ.

ಅವನ ಹಿಂದೆ ಹಿಂದೆ ಹೆಜ್ಜೆ ಹಾಕುತ್ತ ಅವಳು ಹೇಳಿದಳು:

" ಈ ನಿನ್ನ ಸೊಟ್ಟ ಮೆಣಶಿನಕಾಯಿ ಮಾರಿದರ ಬರೂದೆಷ್ಟೋ ಮೂಳಾ! ಏನೋ ನಾಕೈದ ರುಪಾಯಿ ಬಂದೀತು.... "

" ಇನ್ನೆಷ್ಟು ಕಿಮ್ಮತ್ತು ನಿಂದು? ಏನ, ಒಂದು ರಾತ್ರೀಗೆ ನೂರು ರುಪಾಯಿ ಕೊಡಬೇಕೇನ ನಿನಗ? "

" ನೂರ ಯಾಕ, ಸಾವಿರ ಕೊಡುವವರೂ ಎಷ್ಟೋ ಮಂದಿ ಆದಾರ, " ಎಂದು ನುಡಿದು ಆಕೆ ಎಲೆಯಡಕೆಯ ರಸವನ್ನುಗುಳಿ ಕಿಲಕಿಲನೆ ನಕ್ಕಳು.

" ಸಾವಿರ ರುಪಾಯಿ ತಗೊಳ್ಳುವ ಮಾರೀ ನೋಡು! " ಎಂದು ಗಿರಿಯ

ಅಣಕವಾಡಿದ.

" ನಂದೇನು ನಿನ್ನ ಹಂಗ ಕರೀ ಮಾರಿ ಅಲ್ಲ," ಎಂದಳು ಬಾಲಿ.

" ನಿನ್ನಂಥಾ ಹೊಲಸು ರಂಡೀ ಬಾಯಿಗೆ ಹತ್ತಬಾರದು, " ಎಂದು ನುಡಿದವನೇ ಗಿರಿಯ ನಡಿಗೆಯನ್ನು ವೇಗವಾಗಿಸಿದ.

ಆ ಮಾತು ಅವಳ ಮರ್ಮಕ್ಕೆ ಏಟು ಹಾಕದಿರಲಿಲ್ಲ. ಏರಿಸಿದ ಧ್ವನಿಯಲ್ಲಿ ಅವಳೆಂದಳು:

" ನನ್ನಂಥಾ ಹೊಲಸು ರಂಡಿಯ ಬಾಯಿಗೇ ಹತ್ತಿದ್ದಿಯಲ್ಲ ಹೊಲಸು ರಂಡೀ ಮಗಾ ನೀ ! "

ಅವಳೊಂದಿಗೆ ಮಾತು ಬೆಳಸುವದೊಳ್ಳೆಯದಲ್ಲವೆಂದು ಬಗೆದು ಗಿರಿಯ ಮೌನವಾಗಿ ನಡೆಯತೊಡಗಿದ. ಅವಳು ಏನೇನನ್ನೋ ಗೊಣಗಿಕೊಳ್ಳುತ್ತ ಬರುತ್ತಿದ್ದಳು. ಯಾವುದನ್ನೂ ಆತ ಗಮನಿಸಲಿಲ್ಲ.

ರಾಮಾಪುರ ಹತ್ತಿರ ಬಂದಿತು. ಊರ ಹೊರಗೆ, ಬೇವಿನ ಗಿಡದ ಕೆಳಗೇ ಮೆಣಸಿನಕಾಯಿ ಮಾರುವ ಸ್ಥಳ. ಆ ವೇಳೆಗಾಗಲೆ ಎಷ್ಟೋ ಜನರು ಅಲ್ಲಿಗೆ ಬಂದು ಬುಟ್ಟಿಗಳನ್ನಿಟ್ಟುಕೊಂಡು ಕುಳಿತಿದ್ದರು. ಗಿರಿಯನೂ ತನ್ನ ಬುಟ್ಟಿಯನ್ನಿಳಿಸಿ ಒಂದೆಡೆ ಕುಳಿತುಕೊಂಡ. ಅವನಿಂದ ತುಸು ದೂರದಲ್ಲಿ ಪರಿಚಯದ ಹೆಂಗುಸೊಬ್ಬಳ ಬಳಿ ಕುಳಿತು ಬಾಲಿ ಮತ್ತೆ ಎಲೆಯಡಕೆ ಸೇವಿಸ ತೊಡಗಿದಳು.

ಹದಿನೈದು ಇಪ್ಪತ್ತು ನಿಮಿಷ ಕಳೆಯುವುದರೊಳಗಾಗಿ ಗಿರಿಯನ ಮೆಣಸಿನಕಾಯಿಗೆ ಬೆಲೆ ಗೊತ್ತಾಗಿ ಏಳು ರೂಪಾಯಿ ಚಿಲ್ಲರೆ ಅವನ ಕೈಗೆ ಬಂದುವು. ಬರಿಯದಾದ ಬುಟ್ಟಿಯನ್ನು ಕೈಲಿ ಹಿಡಿದುಕೊಂಡು ಗಿರಿಯ ಎದ್ದು, ಬಾಲಿಯ ಹತ್ತಿರ ಹೋಗಿ, ಐದು ರೂಪಾಯಿಯ ನೋಟನ್ನು ಅವಳ ಎದೆಯ ಮೇಲೆ ಸೆದು, ಪೇಟೆಯ ಕಡೆ ಸಾಗಿದ.

ಕೋಪದಿಂದಲೂ ಅವಮಾನದಿಂದಲೂ ಕುದಿಯುತ್ತ ಬಾಲಿ, ನೋಟನ್ನು ಮುಷ್ಟಿಯಲ್ಲಿ ಹಿಡಿದು ಎದ್ದು ನಿಂತಳು. ಯಾವಾಗಲೂ ತುಂಟ ಬೆಳಕನ್ನು ಬೀರುವ ಅವಳ ಕಣ್ಣುಗೊಂಬೆಗಳು ಈಗ ಜ್ವಾಲೆಗಳನ್ನು ಹೊರ ಹಾಕುವಂತೆ ಪ್ರಜ್ವಲಿಸತೊಡಗಿದುವು. ಕಳ್ಳನ ಮೇಲೆ ಬೀಳಲು ಮುನ್ನುಗ್ಗುವ ನಾಯಿಯಂತೆ ಗಿರಿಯನ ಕಡೆ ಧಾವಿಸಿ, ಅವನ ಅಂಗಿಯನ್ನು ಹಿಡಿದೆ

ಳಿದು ನಿಲ್ಲಿಸಿ, ಭಾವನೆಗಳಿಂದ ನಡುಗುವ ಧ್ವನಿಯಲ್ಲಿ ನುಡಿದಳು:

"ನಾ ಅಂದರ ಏನಂತ ತಿಳಿದಿದ್ದಿ ನೀ? ಅಂ? ಏನಂತ ತಿಳಿದಿದ್ದಿ? ಭಿಕಾರಿ ಅಂತ ತಿಳಿದಿದ್ದಿಯೋ ಇಲ್ಲಾ—ಊರ ಸೂಳಿ ಅಂತ ತಿಳಿದಿದ್ದಿಯೋ? ಅಲ್ಲಿ ಕುಂತವರೆಲ್ಲಾರ ಮುಂದ ನನ್ನ ಮೈಮ್ಯಾಲ ನೋಟು ಒಗದು ಬರಾಕ ಎಷ್ಟು ಧೈರ್ಯೇ ನಿನಗ? ಆಂ, ಎಷ್ಟು ಧೈರ್ಯೇ?"

ಗಿರಿಯ ದಿಗಿಲುಗೊಂಡು ಕಂಬದಂತೆ ನಿಂತುಕೊಂಡಿದ್ದ. ಅಂಥ ರೋಷಾವೇಶದಲ್ಲಿದ್ದ ಬಾಲಿಯನ್ನು ಆತ ಅದುವರೆಗೆ ನೋಡಿರಲಿಲ್ಲ. ಹೆಡೆ ಯೆತ್ತಿ ಘೂತ್ಕರಿಸುವ ಸರ್ಪವನ್ನು ಕಂಡು ಬೆರಗಾಗಿ ನಿಲ್ಲುವವರಂತೆ ಆತ ಬಾಲಿಯ ರೋಷದ ಮುದ್ರೆಯನ್ನು ದಿಟ್ಟಿಸುತ್ತ ನಿಂತುಕೊಂಡಿದ್ದ.

ಸಂತೆಗೆ ಹೊರಟಿದ್ದವರಲ್ಲಿ ಅನೇಕರು ಅವಳ ಧ್ವನಿ ಕೇಳಿ ನಿಂತು ಕೊಂಡು, ಅವರಿಬ್ಬರ ಸುತ್ತಲೂ ಗುಂಪುಗೂಡಿದರು. "ಏನ, ಏನಾತು? ಏನ ಜಗಳ? ಇವ ಏನಾರ ಮಾಡಿದನೇನ ನಿನಗ?" ಎಂಬಿವೇ ಮೊದ ಲಾದ ಪ್ರಶ್ನೆಗಳೂ ಹೊರಟುವು. ಗಿರಿಯ ಕಕ್ಕಾವಿಕ್ಕಿಯಾಗಿ ನಿಂತುಕೊಂಡಿದ್ದ. ಬಾಲಿಯ ಕೂಗಾಟವೂ ನಿಂತುಹೋಗಿತ್ತು.

ಬಾಲಿ, ಗಿರಿಯ ಇಬ್ಬರನ್ನೂ ಬಲ್ಲ ನೆರೆಹಳ್ಳಿಯ ಮುದುಕನೊಬ್ಬ ಕೇಳಿದ:

"ಏನಽ ಅದು ಬಾಲೀ? ಗಿರಿಯ ಏನಾರೆ ಅಂದನೇನ?"

"ಏನೂ ಇಲ್ಲ ಮಾವಾ," ಎಂದಳು, ಬಾಲಿ.

"ಏನಾರೆ ಕೊಡೂದಿತ್ತೇನ ನಿನಗ ಇವ?"

"ಏನೂ ಇಲ್ಲ ಮಾವಾ," ಎಂದಳು, ಬಾಲಿ.

ಮುದುಕ ನಕ್ಕು, ಸುತ್ತಲೂ ನೆರೆದವರನ್ನುದ್ದೇಶಿಸಿ, "ನೀವ್ಯಾಕ ಕೂಡೀರೋ ಇಲ್ಲಿ? ಗೆಣೆಯಾ ಗೆಣತೀರ ಜಗಳ ಉಂಡು ಮಲಗೂತನಕಾ ಅನ್ನೂದು ಗೊತ್ತಿಲ್ಲೇನ? ನಡೀರಿ, ನಡೀರಿ," ಎಂದು ನುಡಿದು ಪೇಟೆ ಯತ್ತ ಹೊರಟ. ಗುಂಪುಗೂಡಿದ ಜನರೂ ನಗುತ್ತಾ ಹೊರಟುಹೋದರು.

ಗಿರಿಯನಿಗೆ ಮತ್ತೂ ವಿಸ್ಮಯ. ನೆರೆದ ಜನರೆಲ್ಲರೆದುರಿಗೆ ಬಾಲಿ ತನ್ನನ್ನು ಹಳಿದು ಅವಮಾನ ಮಾಡಬಹುದೆಂದು ಆತ ಭಾವಿಸಿದ್ದ. ಆದ ರಾಕೆ ಹಾಗೇನೂ ಮಾಡಲಿಲ್ಲ. "ಏನೂ ಇಲ್ಲ," ವೆಂದಿಷ್ಟೇ ನುಡಿದು ಅವ

ರನ್ನೆಲ್ಲ ಅಟ್ಟಿಬಿಟ್ಟಳು. "ಇಂಥಾ ಹೆಣ್ಣನ್ನ ನೋಡೇ ಇರಲಿಲ್ಲ ನಾ. ಒಮ್ಮೆ ಸಿಟ್ಟಿಂತ ಸಿಡೀತಾಳ, ಇನ್ನೊಮ್ಮೆ ಸದ್ದಿಲ್ಲದಂಗ ಇರುತಾಳ...." ಎಂದು ಮನಸ್ಸಿನಲ್ಲೇ ಹೇಳಿಕೊಂಡ.

"ನೋಡು. ಮಂಗ್ಯಾನ ಹಂಗ ಮಾಡಿ ಇಷ್ಟೆಲ್ಲಾ ಗೊಂದಲಾ ಹಾಕಿದಿ. ಹೂಂ. ಹೋಗಲಿ ಅಂತ ಇದೊಂದ ಸಾರಿ ಬಿಟ್ಟೇನಿ. ಇನ್ನೊಮ್ಮೆ ಮಂದಿಯೊಳಗ ಏನಾರೆ ಮಾಡಿದೆಂದರ ನೋಡು ನೆಟ್ಟಗಾಗಾಕಿಲ್ಲ. ಈಗs ಹೇಳಿಡುತೀನಿ," ಎಂದಳು, ಬಾಲಿ.

ಆ ಮಾತಿಗೆ ಉತ್ತರವೀಯುವ ಗೊಡವೆಗೆ ಬೀಳದೆ ಗಿರಿಯ ಸಂತೆಯ ಕಡೆ ಸಾಗಿದ. ಗಂಡನನ್ನು ಹಿಂಬಾಲಿಸುವ ಹೆಂಡತಿಯಂತೆ ಬಾಲಿ ಅವನ ಹಿಂದೆ ಹಿಂದೆ ಹೊರಟಳು.

ಆತ ಸೆಟ್ಟರ ಅಂಗಡಿಗೆ ಬಂದು ಉಪ್ಪು, ಎಣ್ಣೆ, ಕಡ್ಡಿಪೆಟ್ಟಿಗೆ ಮೊದಲಾದವುಗಳನ್ನು ಕೊಳ್ಳುತ್ತ ನಿಂತಾಗಲೂ ಅವಳು ಅವನ ಬೆನ್ನು ಬಿಡಲಿಲ್ಲ. ಅವನ ಖರೀದಿ ಮುಗಿಯುತ್ತಲೂ ತಾನು ಮುಂದಾಗಿ ಸಕ್ಕರೆಯನ್ನೂ ಚಹಡ ಪುಡಿಯನ್ನೂ ಕೊಂಡುಕೊಂಡಳು. ಅಷ್ಟರಲ್ಲಿ ಗಿರಿಯ ಅಂಗಡಿಯಿಂದ ದೂರ ಹೋಗಿಬಿಟ್ಟಿದ್ದ. ಬಾಲಿ ಓಡುತ್ತೋಡುತ್ತ ಹೋಗಿ ಮತ್ತೆ ಅವನನ್ನು ಕೂಡಿಕೊಂಡಳು. ಸಂತೆಯ ಜನ ಆವರಿಬ್ಬರನ್ನೇ ಕುತೂಹಲದಿಂದ ದಿಟ್ಟಿಸತೊಡಗಿದ್ದಿತು. ಬಾಲಿಯನ್ನು ಬಲ್ಲವರನೇಕರು ತಮ್ಮತಮ್ಮಲ್ಲಿ ಪಿಸುಮಾತನಾಡುತ್ತ ಮುಗುಳ್ನಗುತ್ತಲಿದ್ದರು. ಬಾಲಿ ತನ್ನನ್ನು ಹಾಸ್ಯದ ವಿಷಯವನ್ನಾಗಿ ಸುತ್ತಿದ್ದುದರ ಅರಿವಾಗುತ್ತಲೂ ಗಿರಿಯನಿಗೆ ಬಲು ನಾಚಿಕೆಯಾಯಿತು. ಎಲೆ ಅಡಕೆ ತಂಬಾಕು ಚುರಮುರಿ ಪುಠಾಣಿ ಬೀಡಿಗಳನ್ನು ಕೊಂಡವನೇ ಸಂತೆಯನ್ನು ಬಿಟ್ಟು ಹೊರಟ. ಬಾಲಿಯೂ ಚುರಮುರಿ ಚೂಡಾ ಕೊಂಡು ಉಡಿಯಲ್ಲಿ ತುಂಬಿಕೊಂಡು ಸಂತೆಯಲ್ಲಿಯೆ ಅವುಗಳನ್ನು ಮುಕ್ಕುತ್ತ ಅವನನ್ನು ಹಿಂಬಾಲಿಸಿದಳು.

ಗಿರಿಯ ಲಗುಬಗೆಯಿಂದ ಹೆಜ್ಜೆಯಿಡುತ್ತ ಹೊರಟಿದ್ದ. ಬಾಲಿ ತನ್ನನ್ನು ಹಿಂಬಾಲಿಸಿಕೊಂಡು ಬರುತ್ತಿರುವಳೆಂಬುದನ್ನು ಅರಿತಿದ್ದರೂ ಆತ ಒಂದು ಸಲವೂ ಹಿಂತಿರುಗಿ ನೋಡಲಿಲ್ಲ.

ಹತ್ತಿಪ್ಪತ್ತು ನಿಮಿಷಗಳವರೆಗೆ ಇಬ್ಬರೂ ಮೌನವಾಗಿ ನಡೆಯುತ್ತಿದ್ದರು.

ಬಾಲಿ, ಚುರಮುರಿ ಮುಕ್ಕುವ ಕಾಯಕವನ್ನು ಎಡೆಬಿಡದೆ ಸಾಗಿಸಿದ್ದಳು. ದಾರಿಯ ಪಕ್ಕದಲ್ಲಿ ಒಂದು ಯಾತದ ಬಾವಿಯಿತ್ತು. ಸಂತೆಗೆ ಹೋಗಿ ಬರುವ ಜನರೆಲ್ಲ ಅಲ್ಲಿ ನೀರು ಕುಡಿದು ದಾಹವಾರಿಸಿಕೊಂಡು ಮುಂದೆ ಸಾಗುತ್ತಿದ್ದರು. ಗಿರಿಯನಿಗೂ ಆಗ ತುಂಬ ದಾಹವಾಗಿತ್ತು. ಅಂದು ಮನೆಯಿಂದ ಹೊರಡುವಾಗ ನೀರು ಕುಡಿದಿದ್ದುದಷ್ಟೊ ಅಷ್ಟೆ. ರಾಮಾಪುರದಲ್ಲಿಯೆ ಅವನಿಗೆ ಬಹಳ ನೀರಡಿಕೆಯಾಗಿತ್ತು. ಬಾಲಿಯ ಕೈಯಿಂದ ತಪ್ಪಿಸಿಕೊಂಡು ಚಹದಂಗಡಿಗೆ ಹೋಗುವಂತಿರಲಿಲ್ಲ. ಅಲ್ಲಿಗೂ ಅವಳು ನುಗ್ಗಿ ಬಿಡುತ್ತಿದ್ದಳೊ ಏನೊ. ಅಂತೆಯೆ, ಸಾಧ್ಯವಿದ್ದಷ್ಟು ಬೇಗ ರಾಮಾಪುರವನ್ನು ತ್ಯಜಿಸಿ ಬಂದಿದ್ದ. ಬಿಸಿಲಿನ ಪ್ರಭಾವ ಇನ್ನೂ ಕಡಮೆಯಾಗಿರಲಿಲ್ಲ. ಅವನ ದೇಹದಲ್ಲೆಲ್ಲ ಬೆವರು ಬಸಿಯುತ್ತಿತ್ತು. ಬಾಯಿಯೊಣಗಿತ್ತು.

ನೀರು ಕುಡಿದು ಹೋದರಾಯಿತೆಂದು ಆತ ಬುಟ್ಟಿಯನ್ನಿಳಿಸಿ, ಬಾವಿಯ ಪಾವಟಿಗೆಗಳನ್ನಿಳಿಯುವುದಕ್ಕೆ ಮೊದಲೇ ಬಾಲಿ ಮುಂದಾಗಿ ಬಾವಿಗಿಳಿದಳು. ನೀರು ಕುಡಿದು ಅವಳು ಮೇಲಕ್ಕೆ ಬರುವವರೆಗೂ ತಡೆದರಾಯಿತೆಂದು ಆತ ಬಾವಿಯ ಕಟ್ಟೆಯ ಮೇಲೆಯೇ ಕಾದು ನಿಂತ. ಎರಡು ನಿಮಿಷ....ಐದು ನಿಮಿಷ.... ಬಾಲಿ ಮೇಲಕ್ಕೆ ಬರುವ ಲಕ್ಷಣಗಳೇ ಕಾಣಿಸಲಿಲ್ಲ. ಗಿರಿಯ ಬಾಗಿ ನೋಡಿದ. ಪಾವಟಿಗೆಯ ಮೇಲೆ ಕುಳಿತುಕೊಂಡು ಬಾಲಿ ತನ್ನ ಕಾಲುಗಳ ಮೇಲಿನ ಕೊಳೆಯನ್ನು ಚೂಪುಗಲ್ಲಿನಿಂದ ಉಜ್ಜಿ ತೆಗೆಯುವುದರಲ್ಲಿ ತೊಡಗಿದ್ದಳು.

ಗಿರಿಯ ಬೇಸರದಿಂದ ಹುಬ್ಬುಗಂಟು ಹಾಕಿಕೊಂಡು ಮುಂದೇನು ಮಾಡುವುದೆಂದು ಯೋಚಿಸತೊಡಗಿದ. ಬಾವಿಗಿದ್ದ ಪಾವಟಿಗೆಗಳೋ ತೀರಾ ಚಿಕ್ಕವು. ಒಬ್ಬರು ನೀರು ಕುಡಿದು ಮೇಲಕ್ಕೆ ಬರುವ ವರಗೆ ಇನ್ನೊಬ್ಬರು ಇಳಿಯುವಂತಿಲ್ಲ. ತನ್ನನ್ನು ಗೋಳಾಡಿಸಲೆಂದೇ ಬಾಲಿ ಇಂಥ ವೇಳೆಯಲ್ಲಿ ಕಾಲುಜ್ಜಿಕೊಳ್ಳಲು ಕುಳಿತುದು ಸ್ಪಷ್ಟವಾಗಿದೆ. ತಾನಾಗಿಯೇ ಅವಳನ್ನು ಮಾತನಾಡಿಸಬೇಕೆಂದೇ ಅವಳು ಈ ಆಟ ಹೂಡಿದ್ದಾಳೆ. ಮುಂದೇನು ಮಾಡುವುದು? ಅವಳನ್ನು ಕೂಗಿ ಎಬ್ಬಿಸುವುದೇ? ಏಳುವುದಿಲ್ಲವೆಂದು ಆಕೆ ಹಟ ಹಿಡಿದರೆ ಹೇಗೆ? ಬಾವಿಯಲ್ಲೇ ಬೊಬ್ಬೆಯಿಡಲೂ ಸಹ ಹಿಂದೆ ಮುಂದೆ ನೋಡುವ ಹೆಣ್ಣಲ್ಲ ಇದು.... ಇದೇನು ಅರಿಷ್ಟ ಬಂತು ತನಗೆ........

ಬಿಟ್ಟೇನು ಎಂದರೆ ಬಿಡಲೊಲ್ಲದಲ್ಲ.... ನೀರು ಕುಡಿಯುವುದು ಹಾಳಾಯಿತು. ಹಾಗೇ ಹೊರಟು ಬಿಡಲೇ ಎಂದು ಯೋಚಿಸುತ್ತ ಆತ ಬುಟ್ಟಿಯನ್ನೆತ್ತಿಕೊಳ್ಳು ತಿದ್ದ ಹಾಗೆ, ರಾಮಾಪುರದಲ್ಲಿ ಅವರನ್ನು ಕಂಡ ಮುದುಕ, ಊರಿಗೆ ಹೊರಟಿದ್ದವನು ತಡೆದು ನಿಂತು, ನಗುನಗುತ್ತಾ ಕೇಳಿದ:

"ಯಾಕಲಾ ಗಿರಿಯಾ, ಹಿಂಗ ನಿಂತಿದ್ದೀ? ಎಲ್ಲಿದಾಳ ನಿನ್ನ ಗೆಣತಿ?"

ಗಿರಿಯ ಅವನಿಗೆ ಉತ್ತರವೀಯದೆ ಹೊರಟುಬಿಡುವುದರಲ್ಲಿದ್ದನಾದರೂ ಮುದುಕ ಅವನನ್ನು ಬಿಡಲಿಲ್ಲ. "ನೀರು ಕುಡಿದು ಬರುತೀನಿ, ಜರಾ ನಿಲ್ಲೋ. ಇಬ್ಬರೂ ಕೂಡೇ ಹೋಗೂಣು," ಎಂದು ಹೇಳಿ ಆತ ಪಾವಟಿಗೆ ಗಳನ್ನಿಳಿಯುತ್ತಿದ್ದ ಹಾಗೆ ಬಾಲಿ ಮೇಲಕ್ಕೇರಿ ಬಂದಳು.

ಮುದುಕ ದೂರ ಸರಿದು, ಅವಳಿಗೆ ದಾರಿಬಿಟ್ಟು, ಅವರಿಬ್ಬರನ್ನೂ ನಗುವ ಕಂಗಳಿಂದ ದಿಟ್ಟಿಸುತ್ತ ನುಡಿದ:

"ಪ್ಯಾಟ್ಯಾಗ ಆಟಾ ಆಡಿದ್ದು ಮುಗೀಲಿಲ್ಲಂತ ಕಾಣುತೈತಿ. ಇಲ್ಲೂ ನಡಸೀರೇನ?"

"ನಾನೇನ ಆಟಾ ಮಾಡುತೀನೋ ಮಾವಾ? ಎಲ್ಲಾ ಇವಂದs ಆಟ ನಡದೈತಿ. ನೀರು ಸುದ್ದಾ ಕುಡಿದs ಹಂಗs ನಿಂತಾನ," ಎಂದಳು ಬಾಲಿ.

"ಹೌದೇನಲೇ ಗಿರಿಯಾ?" ಮುದುಕ ನಗುತ್ತ ಕೇಳಿದ. "ಅಂತೂ ನಿಮ್ಮಿಬ್ಬರದೂ ಮಜಾ ಐತಿ ಬಿಡಲೇ."

ಆತ ನೀರು ಕುಡಿದು ಬಂದ ಬಳಿಕ ಗಿರಿಯನೂ ಬಾವಿಗಿಳಿದು ಕೈಕಾಲು ಮುಖ ತೊಳೆದುಕೊಂಡು ಹೊಟ್ಟೆ ತುಂಬಾ ನೀರು ಕುಡಿದು ಬಂದ. ಬಾವಿಯ ಮೇಲಿನ ಗಿಡದಡಿಯಲ್ಲಿ ಕುಳಿತು ಮುದುಕ ಚಿಲಮಿಯಲ್ಲಿ ತಂಬಾಕು ತುಂಬ ತೊಡಗಿದ್ದ. ಅವನ ಹತ್ತಿರ ಕುಳಿತುಕೊಂಡು ಬಾಲಿ ಎಲೆಯಡಕೆ ಬಾಯಿ ಗಿಟ್ಟಿಕೊಳ್ಳುತಿದ್ದಳು.

"ಕುಂಡ್ರಾಕೋ. ತಂಬಾಕು ಸೇದಿ ಹೋಗೂಣಂತ," ಎಂದ ಮುದುಕ.

ಗಿರಿಯ ಕುಳಿತುಕೊಳ್ಳಲೇ ಬೇಕಾಯಿತು.

ಎಲೆಯೊಂದಕ್ಕೆ ಸುಣ್ಣ ಸವರಿ, ಒಂದೆರಡು ಅಡಕೆಯ ಹೋಳುಗಳನ್ನು ಅದರಲ್ಲಿ ಹಾಕಿ ಪಟ್ಟಿ ಮಾಡಿ, ಬಾಲಿ ಅದನ್ನು ಗಿರಿಯನ ಕಡೆ ನೀಡಿದಳು. ತೆಗೆದುಕೊಳ್ಳುವುದೇ ಬೇಡವೇ ಎಂದು ಆತ ಯೋಚಿಸಿದ. ಮುದುಕ ಎದುರಿಗಿರುವಾಗ ತಾನು ಅದನ್ನು ತೆಗೆದುಕೊಳ್ಳದಿದ್ದರೆ ಆತ ಇನ್ನೇನಾದರೂ ಆಡಿ ನಕ್ಕು ಬಿಡಬಹುದೆಂಬ ವಿಚಾರ ಬರುತ್ತಲೂ ಪಟ್ಟಿಯನ್ನು ತೆಗೆದುಕೊಂಡು ಬಾಯಿಗಿಟ್ಟುಕೊಂಡ. ಕಣ್ಣುಗಳ ಮೂಲೆಗಳಿಂದ ಗಿರಿಯನನ್ನು ದಿಟ್ಟಿಸುತ್ತ ಮುಗುಳುನಗೆ ತುಳುಕಿಸುತ್ತ ಕುಳಿತಿದ್ದಳು ಬಾಲಿ. ಅವಳನ್ನು ನೋಡಿಯೂ ನೋಡದಂತೆ ಗಿರಿಯ ಗಂಭೀರವಾಗಿ ಕುಳಿತಿದ್ದ. ತಂಬಾಕು ಸೇದುತ್ತಲಿದ್ದ ಮುದುಕ ಅವರಿಬ್ಬರನ್ನೂ ದಿಟ್ಟಿಸುತ್ತ ಅರ್ಧ ತನ್ನಷ್ಟಕ್ಕೇ ಎಂಬಂತೆ ಮಾತನಾಡಿದ.

" ಪರಪಂಚದಾಗ ಇರೂದು ಎಷ್ಟು ದಿನಾ ? ಇರೂತನಕಾ ನಗುತಾ ಕೆಲೀತಾ ಇರಬೇಕು ನೋಡು. "

" ಬೈಲಾಟದಾಗಿನ ಸೋಗು ಮಾತಾಡಿದಾಂಗ ಮಾತಾಡತಿಯಲ್ಲೋ ಮಾವಾ ! " ಎಂದಳು, ಬಾಲಿ.

" ಪರಪಂಚ ಅಂದರನs ಒಂದು ಬೈಲಾಟ ಇದ್ದಂಗ ಅಲ್ಲೇನs ಬಾಲೀ? ಒಂದು ಗಂಡು, ಒಂದು ಹೆಣ್ಣು....ಅವರಿಬ್ಬರ ಆಟ, ಕೂಟ.... ನಿಮ್ಮಿಬ್ಬರನ್ನೂ ನೋಡಿದಾಗ ನಾನೂ ಹರೇದವ ಇದ್ದಾಗಿಂದೆಲ್ಲಾ ನೆನಪಾಗುತ್ತೈತಿ ನೋಡು. ನನಗೂ ನಿನ್ನಂಗs ಒಬ್ಬಾಕಿ ಗೆಣತಿ ಇದ್ದಳು. ನಿನ್ನಂಗs ಅವಳೂ ಗಂಡನ್ನ ಬಿಟ್ಟು ಬಿಟ್ಟಿದ್ದಳು. ಹತ್ತಿಪ್ಪತ್ತು ವರ್ಷದ ತನಕಾ ಇಬ್ಬರೂ ಸುಕದಿಂದ ಇದ್ದಿವಿ ನೋಡು. ವಾರಾ ವಾರಾ ರಾಮಾಪುರದ ಸಂತಿಗೆ ಬರುತಿದ್ದಿವಿ. ಬುಟ್ಟೀ ಹೊತ್ತುಕೊಂಡು ನಾ ಮುಂದ ಮುಂದ ನಡೀತಿದ್ದಿನಿ. ಡೌಲಿನಿಂದ ಕೈ ಬೀಸುತಾ ಆಕಿ ನನ್ನ ಹಿಂದ ಹಿಂದ ಬರುತಿದ್ದಳು. ಆ ಮಾತು ಈ ಮಾತು ಆಡಿಕೊಂತ ನಗುತಾ ಕೆಲೀತಾ ಹೋಗುವಾಗ ಹಾದೀ ನಡದದ್ದs ಗೊತ್ತಾಗುತಿರಲಿಲ್ಲ. ಪ್ಯಾಟ್ಯಾಗ ಇಬ್ಬರೂ ಕೂಡಿ ಸಂತೀ ಮಾಡುತಿದ್ದಿವಿ. ಬರುವಾಗ ಚುರಮುರೀ ಪುಠಾಣೀ ಭಜೀ ತಿನ್ನುತಾ ಬಂದು ಇದs ಬಾವಿಯ ಹಂತೀಲಿ ಕುಂತು ನೀರು ಕುಡಿದು ಎಲೀಯಡಕಿ ಹಾಕ್ಕೊಂಡು ಮುಂದ ನಡೀತಿದ್ದಿವಿ. ನಿನ್ನಂಗs ಇದ್ದಳು ನೋಡು ಬಾಲೀ, ಅವಳೂ. ನಿನ್ನಂಗs

ನೋಡುತಿದ್ದಳು, ನಿನ್ನಂಗs ನಗುತಿದ್ದಳು, ನಿನ್ನಂಗs ಆಗಾಗ ಜಗಳಾಸೂ ಮಾಡುತಿದ್ದಳು, ಮಾತೂ ಬಿಡುತಿದ್ದಳು, ಮತ್ತ ನಗುನಗುತಾ ಮಾತಾಡುತಿದ್ದಳು...." ಎಂದು ಹೇಳುತ್ತಾ ಮುದುಕ ಚಿಲಮಿಯನ್ನು ಗಿರಿಯನ ಕೈಗೆ ಕೊಟ್ಟ.

"ಈಗ ಎಲ್ಲಿದಾಳ ನಿನ್ನ ಗೆಣತಿ ಮಾವಾ ?" ಬಾಲಿ ಕೇಳಿದಳು.

"ಗುದ್ದವ್ವನ ಬ್ಯಾನಿ ಬಂದಿತ್ತಲ್ಲಾ, ಅದರಾಗ ಹೋದಳು," ಮುದುಕ ಇಳಿದ ಧ್ವನಿಯಲ್ಲಿ ಹೇಳಿದ. "ಇರೂತನಕ ನಗುನಗುತ ಇದ್ದಳು ನೋಡು ಗಿರಿಯಾ. ಎಲ್ಲಾರೂ ಹಂಗs ಇರಬೇಕು. ಬಾಲಿಗೂ ನಿನಗೂ ಚಲೋ ಜೋಡಿ ಕೂಡೈತಿ. ಶಿವನs ನಿಮ್ಮನ್ನ ಕೂಡಿಸಿರಬೇಕು. ಇವಳ ಸಂಗ ಜಗಳಾ ಮಾಡಬ್ಯಾಡ. ಆನಂದದಿಂದ ಇರಬೇಕಪಾ ಯಾವಾಗಲೂ."

"ನಾಯೇನ ಇವಳನ್ನ ಮದುವಿ ಮಾಡಿಕೊಂಡಿಲ್ಲ."

"ಇದಕ್ಕೆಲ್ಲಾ ಮದುವಿ ಯಾತಕ್ಕ ಬೇಕೋ ಮಳ್ಳs. ಗೆಣತಿ ಅಂದರ ಹೇಣತಿಗಿಂತ ಹೆಚ್ಚಿನವಳು. ಪಿರೀತಿಯಿಂದ ನಿನ್ನ ಕೂಡಿರತಾಳ. ಅವಳ ಸಂಗಾತ ಪಿರೀತಿಯಿಂದ ಇರಬೇಕು. ಮಾದೇವ ಮೆಚ್ಚುತಾನ."

"ಏನ ಮೆಚ್ಚುತಾನೋ," ಎಂದು ಗೊಣಗುತ್ತ ಗಿರಿಯ ಮೇಲಕ್ಕೆದ್ದ. ಮೂವರೂ ಮತ್ತೆ ದಾರಿ ತುಳಿಯತೊಡಗಿದರು.

"ಗಿರಿಯಾ ಯಾಕೋ ಸಿಟಗೊಂಡಂಗ ಕಾಣುತೈತಲ್ಲೇ ಬಾಲಿ ? ನೀ ಏನಂದಿ ಅವಗ ?" ಮುದುಕ ಕೇಳಿದ.

"ನಾಯೇನ ಅನ್ನಲ್ಯೋ ಮಾವಾ ? ಅವನs ಏನ ತಿಳಕೊಂಡಾನೊ ಏನ ಮಣ್ಣೋ. ಹದಿನೈದು ದಿನಾ ಆತು, ಮನಿಗೇ ಬಂದಿಲ್ಲ."

"ಯಾಕೋ ಗಿರಿಯಾ, ಯಾಕ ಹೋಗಿಲ್ಲೋ ?"

"ಯಾಕೋ...." ಎಂದ ಗಿರಿಯ.

"ಹೆಣ್ಣು ಜೀವಾನ ಹಿಂಗ ಕೊರಗಿಸಬಾರದಪಾ ಗಿರಿಯಾ. ನಿನಗ ತಿಳಿಯೂದಿಲ್ಲ. ಮುದುಕನ ಮಾತು ಕೇಳು."

"ಕೊರಗೂದಕ್ಕ ಆಕೀಗೇನ ಧಾಡಿ ಬಿಡು. ಏನ ನಾನೊಬ್ಬಾವs ಅಂತ ತಿಳಿದೀಯೇನ ? ಬೇಕಾದಷ್ಟು ಮಂದಿ ಗೆಣೇರದಾರು...."

"ನೋಡೋ ಮಾವಾ, ಹೆಂಗ ಮಾತಾಡತಾನ ಬಾಯಿಗೆ ಬಂದಂಗ ?"

" ಖರೇ ಇರೂದನ್ನ ಮಾತಾಡಿದರ ಬಾಯಿಗೆ ಬಂದಂಗ ಮಾತಾಡಿದಂಗಾತೇನ ? " ಎಂದ ಗಿರಿಯ.

" ಎಲ್ಲ್ಯದಾರ ನನ್ನ ಗೆಣೇರು ? ತೋರಿಸಿ ಕೊಡಬಾ. "

" ತೋರಿಸಿ ಕೊಡಾಗ ಯಾಕ ಬೇಕು ? ಊರಿಗೆಲ್ಲಾ ಗೊತ್ತೈತೆಲ್ಲ ?"

" ಯಾಕೋ ಭಾಡ್ಯಾ, ಬಲ್ಲಂಗs ಮಾತಾಡುತೀ ! ಬಾ, ನೋಡಾನ " ಎಂದು ಬಾಲಿ ಕಾಳಗಕ್ಕೆ ಸಿದ್ಧಳಾದಳು.

" ನಿನ್ನೆ ನೋಡಿದ್ದಾಗೈತಲ್ಲ? ಇನ್ನೇನ ಉಳದೈತಿ ನೋಡೂದು ?" ಎಂದು ನುಡಿದವನೆ ಗಿರಿಯ ನಡಿಗೆಯನ್ನು ತ್ವರೆಗೊಳಿಸಿ ತನ್ನ ಹಳ್ಳಿಯ ಕಡೆ ಹೊರಳಿದ. ಕಾಲುದಾರಿ ಹಿಡಿದು ಭರಭರನೆ ಮುಂದೆ ಸಾಗಿದ.

" ನಿಲ್ಲಲೇ ಗಿರಿಯಾ, " ಎಂದು ಕೂಗಿದ, ಮುದುಕ.

ನಿಲ್ಲಲಿಲ್ಲ, ಗಿರಿಯ.

" ಇವಗ ಯಾರರೆ ಏನಾರೆ ಚಾಡಿ ಹೇಳ್ಯಾರೋ ಏನೋ, " ಎಂದ ಮುದುಕ.

" ಹೇಳಿದ್ದರೂ ಹೇಳಿರಬಹುದು. ಚಾಡಿ ಕೇಳಾಕ ಇವಗ ಬುದ್ಧಿ ಬೇಕೋ ಬ್ಯಾಡೋ ? " ಎಂದಳು, ಬಾಲಿ.

" ಗಂಡಸರಂದರ ಹಂಗs ಇರುತಾರ, ಬಾಲೀ. ಅವರ ಮ್ಯಾಲ ಸಿಟ್ಟಾಗಬಾರದು. ನಾಕು ದಿನಾ ಹೋದ ಮ್ಯಾಲ ಮತ್ತ ತಾವೇ ಬರುತಾರ. "

" ಅವ ಬಂದರೆಷ್ಟು ಬಿಟ್ಟರೆಷ್ಟು ಬಿಡು, " ಎಂದಳು ಬಾಲಿ.

ಮುದುಕ ನಗುತ್ತಾ ತನ್ನ ಹಳ್ಳಿಯ ಕಡೆ ನಡೆದ. ಬಾಲಿಯೊಬ್ಬಳೇ ಕೋಗಿಹಳ್ಳಿಯ ಹಾದಿ ಹಿಡಿದು ಹೊರಟಳು.

## ಏಳು

ಆ ರಾತ್ರೆ, ತಾಯಿಯೊಂದಿಗೆ ಊಟ ಮಾಡುತ್ತ ಕುಳಿತಿದ್ದಾಗ ಬಾಲಿ ಹೇಳಿದಳು:

" ಇವತ್ತು ಸಂತಿಯೊಳಗ ಗಿರಿಯ ಸಿಕ್ಕಿದ್ದ, ಅವ್ವ. "

ಸಣ್ಣವ್ವ ನಗುತ್ತಾ—" ಯಾರು, ಆ ಮೂಕ ಬಸವನೇ ?" ಎಂದಳು.

" ಹೂಂ. ಅವನs. "

" ಏನ ಅಂತಿದ್ದ ? "

ಬಾಲಿ ಒಡನೆಯೆ ಉತ್ತರವೀಯಲಿಲ್ಲ. ತಲೆ ತಗ್ಗಿಸಿಕೊಂಡು ರೊಟ್ಟಿ ತಿನ್ನುತ್ತಿದ್ದವಳು, ಒಂದೆರಡು ನಿಮಿಷಗಳ ತರುವಾಯ ಹೇಳಿದಳು:

" ಇದೆಲ್ಲಾ ನನಗ ಬಾಳ ಬ್ಯಾಸರಾಗೈತಿ ನೋಡವ್ವ. ಊರುಬಿಟ್ಟು ಎಲ್ಲಿಗಾರೆ ಹೋಗಿಬಿಡಬೇಕನ್ನಿಸುತೈತಿ. "

" ಬ್ಯಾಸರಾಗೈತಿ ? ಯಾಕ ? "

" ಯಾಕೋ. ಗಿರಣ್ಯಾಗ ಕೆಲಸ ಸಿಗುತೈತಂತ. ಹೋಗಿ ಬಿಡಲೇನ ? "

" ಯಾರು ಹೇಳಿದರೇ ನಿನಗ ಗಿರಣ್ಯಾಗ ಕೆಲಸ ಸಿಗುತೈತಂತ? ಈಗ ಇರುವ ಕೂಲಿಕಾರರನ್ನs ತಗೀಲಿಕ್ಕೆ ಹತ್ತಿದಾರ. ಇನ್ನ ನಿನಗೆಲ್ಲೀದು ಸಿಕ್ಕೀತು ಕೆಲಸ ? "

" ಹೂಂ. ಗಿರಣ್ಯಾಗ ಸಿಗದಿದ್ದರ ಇನ್ನೆಲ್ಲಾದರೂ ಸಿಕ್ಕೀತಲ್ಲ ? ಶಹರಕ್ಕ ಹೋದರ ಏನಾದರೂ ಸಿಕ್ಕೀತು. "

"ನೀನೊಂದು ಹುಚ್ಚ ಹುಡಿಗಿ. ಶಹರದ ಮಂದಿ ಹೆಂಗಿರತಾರನ್ನೂದು ನಿನಗೇನ ಗೊತ್ತು ? ಸುಮ್ಮನs ಅದನ್ನೆಲ್ಲಾ ತಲ್ಯಾಗ ಹಾಕ್ಕೊಳ್ಳಬ್ಯಾಡ. ಇಲ್ಲೇ ಏನೋ ಜರಾ ಸುಕದಿಂದ ಇದೀವಿ. "

" ಏನ ಸುಕಾನೋ ಬಿಡವ್ವ. ಇದೆಲ್ಲಾ ಹೇಸಿಕೆಯಾಗೈತಿ ನನಗ. "

ಗಡಿಗೆಯಿಂದ ನವಣೆಯನ್ನು ತೆಗೆದು ತಾಬಾಣಕ್ಕೆ ಹಾಕಿಕೊಳ್ಳುತ್ತ ಸಣ್ಣವ್ವ ಕೇಳಿದಳು:

" ಹೇಸಿಕಿ ? ಇದೇನs ಬಾಲೀ, ನಿನ್ನ ತಲ್ಯಾಗ ಏನೋ ಹೊಕ್ಕಾಂಗ ಕಾಣುತೈತಿ ಇವೊತ್ತು. ಯಾರರೆ ಏನಾರೆ ಕಲಿಸಿದರೋ ಏನ ? "

" ಯಾರು ಯಾಕ ಕಲಿಸಾಕ ಬೇಕು ? ನನಗೇನ ತಿಳಿಯೂದಿಲ್ಲಾ ? ಇದೆಂಥಾ ಬಾಳೇವು ನಮ್ಮದು....ಥೂ....ಥೂ...." ಎಂದು ನುಡಿಯುತ್ತ ಬಾಲಿ, ಗಡಿಗೆಯಲ್ಲಿ ಕೈಹಾಕಿ ಅನ್ನ ಬಡಿಸಿಕೊಂಡಳು.

ಸಣ್ಣಪ್ಪನ ತುಟಿಗಳ ಮೇಲೆ ನಗೆಯ ನೆರಳೊಂದು ಸುಳಿಯಿತು. " ನಾ ಅಂದದ್ದೇನೂ ಸುಳ್ಳಲ್ಲ. ನಿನ್ನ ತಲ್ಯಾಗ ಏನೋ ಹೊಕ್ಕೈತಿ ಇವೊತ್ತು. "

" ಹೂಂ. ಹೊಕ್ಕೈತಿ ನನ್ನ ದೈವ.... " ಎಂದು ನುಡಿದು ಬಾಲಿ ಎಡಗೈ ಯಿಂದ ಹಣೆ ಚಚ್ಚಿಕೊಂಡಳು.

" ಆ ಗಿರಿಯ ಏನಾರೆ ಮಾಟಾ ಮಾಡಿದನೋ ಏನ ನಿನಗ ? "

" ಅವೇನ ಮಾಡುತಾನ ಮಾಟಾ ? ನೆಟ್ಟಗ ಮಾತಾಡಲಿಲ್ಲ ಸುದ್ದಾ. "

ಊಟ ಮಾಡುತ್ತಲಿದ್ದ ಹಾಗೆ ಸಣ್ಣಪ್ಪ ಯೋಚಿಸತೊಡಗಿದಳು. ಒಂದೆ ರಡು ವಾರಗಳಿಂದಲೂ ಬಾಲಿಯಲ್ಲಿ ಏನೋ ಬದಲಾವಣೆ ಕಂಡುಬರುತ್ತಿತ್ತು. ವಿಷಣ್ಣ ವಿಮನಸ್ಕತೆಯೊಂದು ಆವಳನ್ನಾವರಿಸಿದಂತೆ ತೋರುತ್ತಿತ್ತು. ಅವಳು ಸರಿಯಾಗಿ ಊಟವನ್ನೂ ಮಾಡುತ್ತಿರಲಿಲ್ಲ. ಮೊದಲಿನಂತೆ ಹತ್ತಿರ ಕುಳಿತು ಕೊಂಡು ಹರಟೆಯಲ್ಲಿ ಭಾಗ ವಹಿಸುತ್ತಲೂ ಇರಲಿಲ್ಲ. ಅದಕ್ಕೆಲ್ಲ ಕಾರಣ ವೇನಿರಬಹುದೆಂದು ತಾನು ಹಲವು ಸಲ ಯೋಚಿಸಿದ್ದರೂ ಯಾವುದೂ ಅರ್ಥ ವಾಗಿರಲಿಲ್ಲ. ಇವೊತ್ತು ಗಿರಿಯನನ್ನು ಕಂಡಳಂತೆ. ಆತನೂ ಅವಳೊಂದಿಗೆ ಸರಿಯಾಗಿ ಮಾತನಾಡಲಿಲ್ಲವಂತೆ. ಬಾಲಿ ಅದನ್ನೇ ಮನಸ್ಸಿಗೆ ಹಚ್ಚಿಕೊಂಡಿ ರುವಳೊ ಏನೊ. ಅವಳು ಹೀಗೆಲ್ಲ ವಿಚಿತ್ರವಾಗಿ ಮಾತನಾಡುವುದಕ್ಕೂ ಅದೇ ಕಾರಣವೊ ಏನೊ. ಗಿರಿಯನಲ್ಲಿ ತನ್ನ ಮಗಳ ಮನಸ್ಸು ನೆಟ್ಟಿರ ಬಹುದೇ ? ಅಂದು ರಾತ್ರಿ ಬಂದು ಹೋದವನು ಮತ್ತೆ ಬರಲೇ ಇಲ್ಲವೆಂದು ಅವಳು ಕೊರಗುತ್ತಿರಬಹುದೇ ? ಅವನಿಗಾಗಿ ಪರಿತಪಿಸುತ್ತಿರಬಹುದೇ ? ಅವಳ ವಯಸ್ಸಿನಲ್ಲಿ ಅದು ಅಸಹಜವೂ ಅಲ್ಲ. ಛೆ ! ಹುಚ್ಚು ಹುಡುಗಿ !

" ಯಾಕ ಮಾತಾಡಲಿಲ್ಲೇ ಅವ ನಿನ್ನ ಸಂಗಾತ ? "

" ನಮ್ಮಂಥವರ ಸಂಗಾತ ಮಾತಾಡೂದು ಮಾನಗೇಡಿತನಾ ಅಂತ. "

" ಹಿಂಗೇನ ? ಅಂಥಾ ಸಾಜೋಗ ಅದಾನೇನ ಅವ ? "

" ನಾವು ಸಾಜೋಗ ಇರುವಾಗ ಅವ ಯಾಕ ಇರಬಾರದು ಹೇಳು. "

ಸಣ್ಣಪ್ಪ ಮತ್ತೆ ಮೌನ ತಳೆದಳು. ಮಗಳ ಮಾತಿಗೆ ಏನು ಉತ್ತರ ವೀಯಬೇಕೆಂಬುದು ತಿಳಿಯಲಿಲ್ಲ. ಬಾಲಿಯಲ್ಲಿ ಒಮ್ಮೆಲೆ ಇಂಥ ಬದಲಾವಣೆ ಹೇಗಾಯಿತೆಂಬುದೇ ಸಣ್ಣಪ್ಪನಿಗೆ ಅರ್ಥವಾಗಲಿಲ್ಲ.

ಎರಡು ದಿನಗಳ ತರುವಾಯ, ಬಾಲಿ ಸೀರೆಗಳನ್ನೊಗೆದು ತರಲೆಂದು ಹೊಳೆಗೆ ಹೋಗಿದ್ದಾಗ ಅವಳ ಎಳೆತನದ ಗೆಳತಿ ಸಾವಿ ಅಕಸ್ಮಾತ್ತಾಗಿ ಭೆಟ್ಟಿಯಾದಳು. ನಾಲ್ಕೈದು ವರ್ಷಗಳಿಂದ ಅವರಿಬ್ಬರೂ ಪರಸ್ಪರರನ್ನು ಕಂಡಿರಲಿಲ್ಲ.

"ಯಾವಾಗ ಬಂದಿಯೇ ಮಾವನ ಮನಿಯಿಂದ?" ಬಾಲಿ ಕೇಳಿದಳು.

"ಮೂರು ದಿನಾ ಆತು."

"ನೀ ಬಂದದ್ದು ಗೊತ್ತs ಆಗಲಿಲ್ಲಲ್ಲ ನನಗ. ಮನಿಗೆ ಬರಬಾರದೇನs?"

"ಏನೋ ಬರಾಕಾಗಲಿಲ್ಲ ಬಿಡವ್ವ." ಸಾವಿ ನಿರ್ಲಕ್ಷ್ಯದಿಂದ ನುಡಿದಳು.

"ಇಷ್ಟ ವರ್ಷ ಬರಲೇ ಇಲ್ಲಲ್ಲೇ ತವರುಮನಿಗೆ?"

"ಇಲ್ಲಿರೆ ಏನೈತೇಳ!" ಎಂದು ನುಡಿದು ಸಾವಿ, ಬಟ್ಟೆ ತೊಳೆಯುವ ಕಾಯಕವನ್ನು ಮುಂದುವರಿಸಿದಳು

ಸಾವಿಯ ಧ್ವನಿಯಲ್ಲಿ, ಮಾತಿನಲ್ಲಿ ಏನೋ ಅಣಕವಿದ್ದಂತೆ ಭಾಸವಾಯಿತು ಬಾಲಿಗೆ. ಅವಳ ಹೃದಯ ಭಾರವಾದಂತಾಯಿತು. "ಹುಂ. ಇವಳಿಗೂ ಗೊತ್ತಾಗಿರಬೇಕು ನಮ್ಮ ಸಾಜೋಗತನದ ಕಥಿ. ಅದಕ್ಕs ಮನೀಗೆ ಬಂದಿರಲಿಕ್ಕಿಲ್ಲ," ಎಂದು ಹೇಳಿಕೊಂಡು ಸೀರೆಗಳನ್ನು ನೀರಲ್ಲಿ ಮುಳುಗಿಸಿದಳು.

ಹತ್ತು ಹದಿನೈದು ನಿಮಿಷಗಳ ವರೆಗೆ ಇಬ್ಬರೂ ಮೌನವಾಗಿದ್ದರು· ಅಷ್ಟರಲ್ಲಿ ಸಾವಿ ಬಟ್ಟೆಗಳನ್ನೆಲ್ಲ ಒಗೆದು, ಹೆಗಲ ಮೇಲೆ ಹಾಕಿಕೊಂಡು ಹೊರಡಲು ಸಿದ್ಧಳಾಗಿ ನಿಂತಿದ್ದಳು.

"ನಾ ನಡೀತೀನಿ ಬಾಲಿ."

"ಅಯ್ಯs, ನಿಲ್ಲಾಕs ಜರಾ. ಸಂದೂ ಆತು. ನಾನೂ ಬರ್ತೀನಿ. ಎಷ್ಟು ವರ್ಷಾತಲ್ಲ ಭೆಟ್ಟಿಯಾಗಿ—ಬಾಳ ಬಾಳ ಮಾತಾಡೂದೈತಿ."

"ಇಲ್ಲವ್ವ. ಲಗೂ ಹೋಗಾಕ ಬೇಕು. ಮನಿಯೊಳಗ ಕಂದನ್ನ ಬಿಟ್ಟು ಬಂದೀನಿ."

"ನನ್ನ ಸಂಗಾತ ತಿರುಗೂದಕ್ಕ ಅಂಜಿಕಿಯಾಗುತೈತೇನs ಸಾವೀ""

ತುಟಿಗಳ ಮೇಲೆ ಬೆರಳಿಟ್ಟುಕೊಂಡು ಅರೆಕ್ಷಣ ಹಾಗೆಯೆ ನಿಂತುಕೊಂಡಿದ್ದಳು ಸಾವಿ. ಅನಂತರ ಹೇಳಿದಳು:

"ನೀ ಅದು ಮಾಡುತೀ ಇದು ಮಾಡುತೀ ಅಂತ ಊರೆಲ್ಲಾ ಬೊಬ್ಬಾಟ ಆಗೈತವ್ವಾ. ನೀ ಹೀಂಗ ಆದೀ ಅಂತ ನನಗೇನ ಅನಿಸಿರಲಿಲ್ಲ ಬಿಡು."

ಲಗುಬಗೆಯಿಂದ ಸೀರೆಗಳನ್ನು ಹಿಂಡಿ, ಹೆಗಲ ಮೇಲೊಗೆದುಕೊಂಡು ಬಾಲಿ ನೀರಿನಿಂದ ಮೇಲೆ ಬರುತ್ತ— "ಬೊಬ್ಬಾಟ ಆಗೈತಿ ಅಂತೀಯಾ? ಏನಂತ ಆಗೈತಿ ಬೊಬ್ಬಾಟ?" ಎಂದು ಕೇಳಿದಳು.

ಹೊಳೆಯ ಮಳಲ ಹಾಸುಗೆಯ ಮೇಲೆ ಹೆಜ್ಜೆಯಿಡುತ್ತ ಸಾವಿಯೆಂದಳು:

"ನಾನ್ಯಾಕ ಹೇಳಬೇಕ ಅದನ್ನ? ನಿಂದು ನಿನಗ ಗೊತ್ತಿಲ್ಲೇನ? ಹೋಗಲಿ ಅದೆಲ್ಲಾ. ನಾ ಒಂದ ಮಾತ ಕೇಳತೀನಿ ನಿನಗ. ಗಂಡನ ಸಂಗಾತ ಸಂಸಾರ ಮಾಡೂದು ಬ್ಯಾಡಾಗಿದ್ದರ ಎಲ್ಲಾರ ಹಂಗ ಸೋಡಚೀಟಿ ತಗೊಂಡ ಇನ್ನೊಬ್ಬನ್ನ ಮಾಡಿಕೊಂಡ ಹೋಗೂದು ಚಲೋ ಅಲ್ಲೇನ?"

"ಚಲೋ ಅಲ್ಲಂತ ಯಾರಂತಾರು?"

"ಮತ್ಯಾಕ ಸುಮ್ಮನ ಕುಂತೀರಿ ಇಂಥಾದ್ದೆಲ್ಲಾ ರಾಡೀ ಮಾಡುತಾ? ನಿಮ್ಮವ್ವನ ನಡತೀನೂ ನೆಟ್ಟಗಿಲ್ಲಂತ. ಅವಳs ನಿನ್ನ ಕೆಡಿಸಾಕ ಹತ್ತಿದಾಳೋ ಏನೊ. ಸೋಡಚೀಟಿ ತಗೊಂಡು ಬಿಡಬಾರದs ಬಾಲೀ?"

"ತಗೊಳ್ಳಾಕ ಬಂದೀತು."

"ಸೋಡಚೀಟಿ ತಗೊಂಡು ಬಿಟ್ಟು ಮರ್ಯಾದಿಯಿಂದ ಉಡಿಕೀ ಮಾಡಿಕೋ ಬಾಲೀ."

"ಮಾಡಿಕೊಳ್ಳಾಕ ಬಂದೀತು."

ರಾತ್ರೆ, ಊಟಕ್ಕೆ ಕುಳಿತಾಗ ಬಾಲಿ ತಾಯಿಯೊಂದಿಗೆ ಮಾತು ತೆಗೆದು, ಮಧ್ಯಾಹ್ನ ಸಾವಿಯನ್ನು ಭೇಟಿಯಾದುದನ್ನೂ ಆಗ ಆಕೆ ಕೊಟ್ಟ ಸಲಹೆಯ ವಿಷಯವನ್ನೂ ವರದಿ ಮಾಡಿದಳು.

"ಸೋಡಚೀಟಿಯೇನೋ ತಗೋಬಹುದು. ನಾಲ್ಕೈದು ನೂರು ಕೊಟ್ಟರ ಅವರು ಸೋಡಚೀಟಿ ಕೊಡೂದಕ್ಕೂ ತಯಾರಾದಾರು," ಎಂದು ಸಣ್ಣವ್ವ ಹೇಳಿದಳು.

" ಹಂಗಾದರ ಯಾಕ ತಡಾ ಮಾಡುತೀ ? ತಗೊಂಡು ಬಿಡೂಣು. "

" ನನಗೇನ ಅಡಗಾಣಿಸೈತೇನ ಅವಸರಾ ಮಾಡಾಕ? " ಎಂದು ಕೊಂಕು ಧ್ವನಿಯಲ್ಲಿ ಉತ್ತರ ಬಂತು.

" ನೀ ನನ್ನ ವೈರಿಯಾಗಿ ಹುಟ್ಟೇದಿ–ಅವ್ವ ಆಗಿ ಅಲ್ಲ " ಎಂದು ನುಡಿದು ಬಾಲಿ ಗಟ್ಟಿಯಾಗಿ ಅಳುತ್ತ, ಊಟವನ್ನು ಅರ್ಧಕ್ಕೇ ಬಿಟ್ಟಿದ್ದು ಪಡಸಾಲೆ ಯಲ್ಲಿ ನೆಲದ ಮೇಲೆಯೆ ಮಲಗಿಕೊಂಡಳು.

" ನೀ ಉಣ್ಣದಿದ್ದರ ಏನೂ ಪ್ರಪಂಚ ಮುಳುಗೂದಿಲ್ಲ—ಬಿದ್ದರ ಬೀಳು. ಸೋಡಚೀಟಿ ಬೇಕಂತ, ಸೋಡಚೀಟಿ. ನಿನ್ನ ಮಿಂಡ ರುಪಾಯಿ ಕೊಡು ತಾನು, ತಗೋ ಹೋಗು ಸೋಡಚೀಟೀ, " ಎಂದಳು ಸಣ್ಣವ್ವ.

ಬಿಕ್ಕುತ್ತಲಿದ್ದ ಹಾಗೆಯೆ ಬಾಲಿ ಅಕ್ಕಸದಿಂದ ನುಡಿದಳು:

" ನಿನ್ನ ಮಿಂಡರಿಗೇನ ಕಡಮಿ? ಕೊಡಂತ ಹೇಳ ಯಾರಿಗಾದರೂ ! "

ಆ ರಾತ್ರೆ, ಸಣ್ಣವ್ವ ಅಡುಗೆಯ ಮನೆಯಲ್ಲಿಯೆ ಮಲಗಿಕೊಳ್ಳಬೇಕಾಗಿ ಬಂದಿತು. ಮಧ್ಯರಾತ್ರಿಯ ವೇಳೆಗೆ, ಊರೆಲ್ಲ ಮಲಗಿದ ಬಳಿಕ, ಯಾರ ದೃಷ್ಟಿಗೂ ಬೀಳದಂತೆ ಎಚ್ಚರಿಕೆ ವಹಿಸುತ್ತ ಕುಲಕರಣಿ ಬಂದ. ಪ್ರತಿ ರಾತ್ರಿಯೂ ಆತ ಅದೇ ವೇಳೆಗೆ ಬರುತ್ತಿದ್ದ, ಬೆಳಕು ಹರಿಯುವದರೊಳಗಾಗಿ ಹೊರಟು ಹೋಗುತ್ತಿದ್ದ. ಸಣ್ಣವ್ವನಂಥ ಕೀಳು ಜಾತಿಯವಳ ಮನೆಗೆ ತಾನು ಬಂದು ಹೋಗುವುದು ಊರಲ್ಲಿ ಯಾರಿಗೂ ತಿಳಿಯದೆಂದೇ ಅವನ ಕಲ್ಪನೆಯಿತ್ತು. ಊರವರೆಲ್ಲ ಎಂದೋ ಆ ಸಂಗತಿಯನ್ನರಿತುಕೊಂಡು ಅವನ ಬೆನ್ನಹಿಂದೆ ಅವನನ್ನು ಮನಸ್ವಿಯಾಗಿ ಹಳಿಯುತ್ತಿದ್ದರು. ಕುಲಕರಣಿಗೆ ಮಾತ್ರ ಅದರ ಸುಳಿವೇ ಇರಲಿಲ್ಲ.

ಆ ರಾತ್ರೆ ಸಣ್ಣವ್ವನ ಮನೆಗೆ ಬಂದೊಡನೆಯೆ ಪಡಸಾಲೆಯಲ್ಲಿ ಹಾಸುಗೆ ಹೊದ್ದಿಕೆಗಳಿಲ್ಲದೆ ಬಿದ್ದುಕೊಂಡಿದ್ದ ಬಾಲಿಯನ್ನು ನೋಡಿ ಚಕಿತನಾಗಿ, ವಿಷ ಯವೇನೆಂದು ಸಣ್ಣವ್ವನನ್ನು ವಿಚಾರಿಸಿದಾಗ ಆಕೆ, ಊಟದ ವೇಳೆಯಲ್ಲಿ ತನಗೂ ಬಾಲಿಗೂ ನಡೆದಿದ್ದ ಮಾತುಕತೆಗಳ ಸಾರವನ್ನು ತಿಳಿಸಿ, " ಇವಳ ತಲಿಯೊಳಗ ದೆವ್ವ ಹೊಕ್ಕಂಗ ಕಾಣುತೈತಿ, ಒಂದ್ಯಾಡ್ಡು ವಾರ ಆತು, ಹೀಂಗ ಮಾಡಾಕ ಹತ್ತಿದಾಳ, " ಎಂದು ಹೇಳಿದಳು.

ಹಾಸುಗೆಯ ಮೇಲೆ ತನ್ನ ಗುಂಡಗಿನ ದೇಹವನ್ನೊರಗಿಸುತ್ತ ಕುಲಕರಣಿ

ಯೆಂದ:

" ಮುಂದ ಹೆಂಗ ಮಾಡಬೇಕಂತ ಮಾಡಿದ್ದೀ ಸಣ್ಣೀ? "

" ನನಗ ಏನೂ ಹೊಳೀವೊಲ್ಲದಾಗೈತಿ. ನೀವs ಏನಾರ ಒಂದು ಯುಕ್ತಿ ಮಾಡಿ ಇವಳ ತಲ್ಯಾಗಿನ ಹುಚ್ಚು ಇಳಿಯೂ ಹಂಗ ಮಾಡ್ರಿ," ಎಂದು ನುಡಿದು ಸಣ್ಣವ್ವ ದೀಪವನ್ನಾರಿಸಿದಳು.

ಅರ್ಧ ತಾಸಿನ ವರೆಗೆ ಕುಲಕರಣಿ ಬಾಲಿಯ ಯೋಚನೆಯನ್ನು ತಲೆಗೆ ಹಾಕಿಕೊಳ್ಳಲೇ ಇಲ್ಲ. ಅನಂತರ, ಹಾಸುಗೆಯಿಂದೆದ್ದು ಗೋಡೆಗೊರಗಿ ಕುಳಿತು ಕೊಂಡು, ಒಂದು ಬೀಡಿ ಹೊತ್ತಿಸಿ ಸೇದುತ್ತಾ ಆತನೆಂದ:

" ನಾ ಹೇಳಲಾ ಸಣ್ಣೀ??

ಆಕೆ ಹೂಂಕರಿಸಿದಳು.

" ಬಾಲಿ ಹೇಳೂದರಾಗ ತಪ್ಪೇನೂ ಇಲ್ಲ. ಅಲ್ಲಾ, ನಿನಗೆ ಏನ ಅನಿ ಸುತ್ತೈತಿ? "

" ತಪ್ಪೇನೂ ಇಲ್ಲ, ಖರೇ. ಆದರs, ಸೋಡಚೀಟಿ ಅಂದರ ನಾಕೈದು ನೂರು ರುಪಾಯಿ ಕೇಳುತಾರವರು. "

" ಅಷ್ಟೇನ ಕೇಳಾಕಿಲ್ಲ. ನಾ ಒಂದು ಮಾತು ಹೇಳಿದರ ಭೀಮು ತೆಗೆದು ಹಾಕೂದಿಲ್ಲ. "

" ಸೋಡಚೀಟಿ ಸಿಕ್ಕರೂ ಕೂಡಾ ಇವಳು ಉಡಿಕೀ ಮಾಡಿಕೊಂಡು ಸುಕದಿಂದ ಬಾಳೀವು ಮಾಡ್ಯಾಳು ಅಂತ ಹೆಂಗ ಹೇಳಾಕ ಬರುತ್ತೈತಿ?"

" ಯಾಕ? ಆ ಗಿರಿಯ ಸುದ್ದಾ ಗಿಡ್ಡನಂಗs ಮಾಡ್ಯಾನು ಅಂತೀ ಯೇನ? "

" ಮಾಡ್ಯಾನು ಅಂತ ಯಾಕ? ಈಗs ಮಾಡಾಕ ಹತ್ತಿದಾನ. ಅವೊತ್ತ ರಾತ್ರಿ ಬಂದಿದ್ದನಲ್ಲಾ ಇಲ್ಲಿ, ಆಮ್ಯಾಲ ಬಂದs ಇಲ್ಲ. ಮೊನ್ನೆ ಸಂತ್ಯಾಗ ಕೂಡಿದ್ದನಂತ, ನೆಟ್ಟಗ ಮಾತಾಡಲಿಲ್ಲಂತ. ಅದನ್ನ ಮನಸಿಗೆ ಹಚ್ಚಿಕೊಂಡು ಕುಂತಾಳ. "

" ಇನ್ನೂ ಹುಡುಗಿ ಪಾಪ. ನೊಂದುಕೊಳ್ಳೂದು ಸಹಜ ಐತಿ. ಅವಳ ಮನಸಿನ ವಿರುದ್ಧ ಹೋಗಬಾರದು ಸಣ್ಣೀ, ನಾಳೆ ನಾ ಭೀಮುನ್ನ ಕರಿಸಿ ಕೇಳಿ ನೋಡುತೀನಿ, " ಎಂದು ನುಡಿದ ಕುಲಕರಣಿ.

ಮೂರನೆಯ ರಾತ್ರೆ ಆತ ಹೇಳಿದ.

"ಇವೊತ್ತು ಮಧ್ಯಾಹ್ನ ಭೀಮು ಬಂದಿದ್ದ. ಏನ ಹೇಳೂದು ಸಣ್ಣೀ ಅವನ ಡೌಲಾ? ಅವನ ಗುರತs ಹತ್ತಲಿಲ್ಲ ನೋಡು ಮೊದಲಿಗೆ"

"ಆದದ್ದಾದರೂ ಏನ ಅವಗ?" ಸಣ್ಣವ್ವ ನಗನಗುತ್ತ ಪ್ರಶ್ನಿಸಿದಳು.

"ಆದದ್ದಾದರೂ ಏನ ಅವಗ? ನಾನೂ ಅವನ್ನs ವಿಚಾರ ಮಾಡಾಕ ಹತ್ತೀನಿ. ಅಬ್ಬಾ, ಏನ ಬದಲಾಗಿದಾನಂತೀ ಅವ! ಅವನ ವೇಷ ಏನ, ಅವನ ಆಡಂಬರ ಏನ, ಅವನ ನಡಿಗಿ ಏನ, ಅವನ ಮಾತೇನ! ನಾನಂತೂ ದಂಗಾಗಿ ಹೋದಿನಿ ನೋಡು."

ಸಣ್ಣವ್ವ ಕಿಲಕಿಲನೆ ನಕ್ಕಳು. ಕುಲಕರಣಿ ಮುಂದುವರಿಸಿದ:

"ಮೊದಲು ನನ್ನ ಹತ್ತರ ಬಂದಾಗೆಲ್ಲ ಅವ ಕೆಳಗ, ನೆಲದ ಮ್ಯಾಲ ಕೂಡ್ರುತಿದ್ದವ ಇವೊತ್ತು ನೆಟ್ಟಗs ಕಟ್ಟೀ ಹತ್ತಿ ಬಂದು ನಾ ಕುಳಿತಿದ್ದ ಕಂಬಳಿಯ ಮ್ಯಾಲs ಕುಂತು ಬಿಟ್ಟ. ನಾ ಬೆರಗಾಗಿ ಅವನ್ನs ನೋಡುತ್ತಿದ್ದಿನಿ. 'ಏನ ಸುದ್ದಿ ಕುಲಕರ್ಣೇರs, ಕರಿಸಿದಿರಂತಲ್ಲಾ?' ಅಂತ ಒಳ್ಳೇ ಗಂಭೀರ ಧ್ವನಿ ತೆಗೆದು ಕೇಳಿದ. ನಾ ಹಂಗs ನೋಡುತಾನೇ ಇದ್ದಿನಿ ಅವನ್ನ. 'ಧಣೇರs' ಅನ್ನದs ಮಾತs ಆಡ್ತಿರಲಿಲ್ಲ ಅವ ಮೊದಲು. ಆ ಮುದುಕಿಯ ಆಸ್ತಿ ಅವನ ಕೈಗೆ ಬಂದ ಸಂಗತಿ ನನಗ ಗೊತ್ತೈತಿ. ಅಷ್ಟಕ್ಕs ಅವ ಇಷ್ಟು ಜೋರು ಆದಾನಂತ ನಾ ತಿಳಿದಿರಲಿಲ್ಲ ಬಿಡು. ಅವ ಮಾತಾಡುವ ರೀತಿ ನೋಡಿದರ ಮಾಮಲೇದಾರ ಸಾಹೇಬರು ಮಾತಾಡಿದಂಗ ಕಾಣುತಿತ್ತು ನೋಡು," ಎಂದು ಹೇಳಿ ಕುಲಕರಣಿ ಸ್ವಲ್ಪ ನಕ್ಕು ಮುಂದೆ ಹೇಳತೊಡಗಿದ:

"ಸೋಡಚೀಟೀ ಸಂಗತಿ ತೆಗೆದಿನಿ ಮೆಲ್ಲಗs. 'ಆ ಹುಡುಗೀ ಬಾಳ್ವೆ ಯಾಕ ಕೆಡಸಬೇಕು, ಕೊಟ್ಟ ಬಿಡಪಾ ಅವಳಿಗೆ ಸೋಡಚೀಟೀ' ಅಂತ ಹೇಳಿದಿನಿ. ಮೊದಲೇನಾದರೂ ನಾ ಇಂಥಾ ಮಾತು ಹೇಳಿದ್ದರ ಅವ ಹಿಂದು ಮುಂದಿನ ವಿಚಾರ ಮಾಡದ 'ನೀವು ಹೇಳಿದಾಂಗs ಮಾಡುತೀನ್ರಿ ಧಣೇರs' ಅಂತಿದ್ದ. ಈಗ ಹಂಗನ್ನಲಿಲ್ಲ. ಸ್ವಲ್ಪ ಹೊತ್ತು ಸುಮ್ಮನs ಕುಂತಿದ್ದವ ಆ ಮ್ಯಾಲ—'ಒಂದೆಂಟು ದಿನದಾಗ ವಿಚಾರ ಮಾಡಿ ತಿಳಿಸುತೀನಿ,' ಅಂತ ಹೇಳಿದ. ನಾ ಆ ಅಂತ ಬಾಯಿ ತೆಗೆದು—'ವಿಚಾರ ಮಾಡುವವಾ?' ಅಂತ ಕೇಳಿದಿನಿ. 'ವಿಚಾರ ಮಾಡಾಕs ಬೇಕಲ್ಲ. ಮನಿಯವರನ್ನ ಕೇಳಾಕ ಬೇಕು. ಸಂಬಂಧ

ದವರನ್ನ ಕೇಳಾಕ ಬೇಕು,' ಅಂತ ಅಂದ. 'ನೋಡಪಾ. ಲಗೂ ತಿಳಿಸಿ ಬಿಡು. ಮದುವಿಗಂತ ಒಂದೆರಡು ನೂರು ರೂಪಾಯಿ ಖರ್ಚು ಮಾಡಿರ ಬೇಕು ನೀವು. ಅದನ್ನಷ್ಟ ಕೊಡಿಸಿ ಬಿಡುತ್ತೀನಿ,' ಅಂತ ಹೇಳಿದಿನಿ. ಅದಕ್ಕ ಅವ— 'ಎರಡು ನೂರಂದರ ಯಾರರೆ ನಕ್ಕಾರೇಳ್ರಿ. ಮದುವಿಗೇ ನಾಕು ನೂರು ಖರ್ಚು ಮಾಡೀವಿ. ತೆರಾ ಬ್ಯಾರೆ ಎರಡು ನೂರು ಕೊಟ್ಟೇವಿ,' ಅಂದ. ನನಗ ಗಾಬರಿಯಾತು. 'ಆರು ನೂರು ರೂಪಾಯಿ ಎಲ್ಲಿಂದ ತರ ಬೇಕಂತೀ ಆ ಬಡವಿ?' ಅಂದಿನಿ. ಅದಕ್ಕ ಅವ— 'ಬಾಲೀನ ಉಡಿಕೀ ಮಾಡಿಕೊಳ್ಳುವವ ಕೊಡಲೆಲಾ ರುಪಾಯಿ?' ಅಂದ. ಗಿರಿಯನ ಹೆಸರು ಹೇಳಬೇಕಂತ ನಾಯೇನೂ ವಿಚಾರ ಮಾಡಿರಲಿಲ್ಲ. ಭೀಮುಗೂ ಅವಗೂ ಹೊಲದ ತಂಟೆ ಬಂದದ್ದು ಗೊತ್ತs ಐತಲ್ಲಾ ನನಗ? ಅವನ ಹೆಸರು ಎತ್ತ ಬಾರದು ಅನ್ನೂದು ಗೊತ್ತಿದ್ದರೂ ಮಾತಿನ ಭರದಾಗ ಎತ್ತಿ ಬಿಟ್ಟೆನಿ. ಅದs ನನ್ನ ತಪ್ಪಾತು ಅಂತ ಕಾಣುತ್ತೈತಿ."

"ಏನಂದಿರಿ ನೀವು?"

'ಆರು ನೂರು ರೂಪಾಯಿ ಎಲ್ಲಿಂದ ಕೊಟ್ಟಾನು ಗಿರಿಯ? ಅವನೇನ ಸಾವುಕಾರನೇನ' ಅಂದು ಬಿಟ್ಟೆನಿ. ಅದಕ್ಕೆ ಭೀಮು— 'ಬಾಲೀನ್ನ ಉಡಿಕೀ ಆಗುವವ ಗಿರಿಯನೇನ? ಮೊದಲs ಯಾಕ ಹೇಳಲಿಲ್ಲ ನನಗ? ಅವಗ ಅಂತ ಗೊತ್ತಾಗಿದ್ದರ ನಾ ಮಾತs ಆಡುತಿರಲಿಲ್ಲ' ಅಂದವನೇ ಎದ್ದು ಹೊರಟೇ ಬಿಟ್ಟ. 'ಅವಗಾದರೇನಾತು? ಯಾರಿಗಾದರೇನಾತು? ಸೋಡಚೀಟಿ ಕೊ[illegible]ಟ್ಯಾಲ ಬಾಲಿ ಯಾರನ್ನ ಉಡಿಕೀ ಆದರೇನಂತ?' ಅಂತ ನಾ ಹೇಳಿ ದರೂ ಅವ ಕೇಳಲಿಲ್ಲ. 'ಸೋಡಚೀಟೀ ಕೊಡೂದಕ್ಕ ನಮಗ ಮನಸ್ಸಿಲ್ಲ,' ಅಂದವನೇ ನನಗ ನಮಸ್ಕಾರ ಸುದ್ದಾ ಮಾಡದೆ ಹಂಗs ಹೋಗಿ ಬಿಟ್ಟ."

"ಬಾಳ ಸೊಕ್ಕು ಬಂದಂಗ ಕಾಣುತ್ತೈತೆಲ್ಲ ಅವಗ?"

"ತಿನ್ನಾಕ ಕೂಳಿಲ್ಲದೆ ಸಾಯುತಿದ್ದವನ ಕೈಯಾಗ ಒಮ್ಮೆಲೆ ರೊಕ್ಕ ಬಂದರ ಸೊಕ್ಕು ಬರೂದೂ ಸಹಜ ಐತಿ. ಆದರs ಭೀಮುಗ ಬಂದಿರೂದು ಬರೀ ಸೊಕ್ಕಲ್ಲ ಸಣ್ಣೀ. ಬರೀ ಸೊಕ್ಕು ಆಗಿದ್ದರ ಅವ ನನ್ನ ಹತ್ತರ ಬರ್ತಾನs ಇರಲಿಲ್ಲ. 'ಬರಾಕ ಸವುಡಾದಾಗ ಬರ್ತೀನಿ' ಅಂತ ಏನಾರೆ ಹೇಳಿ

ಕಳಿಸುತಿದ್ದ. ಆದರೂ ಹಂಗೇನೂ ಮಾಡಲಿಲ್ಲಲಾ ಅವ. ಹೇಳಿ ಕಳಿಸಿದ ಕೂಡಲೆ ಬಂದು ಭೇಟಿಯಾದ. ಆದರೂ ಹೀಂಗ ಮಾಡಿದ. ಅವನ ತಲ್ಯಾಗ ಬ್ಯಾರೆ ಏನೊ ಹೊಕ್ಕಾಂಗ ಕಾಣುತೈತಿ."

ಸಣ್ಣವ್ವ ನಗುತ್ತ ಹೇಳಿದಳು: "ಬರುಬರುತಾ ಎಲ್ಲಾರ ತಲ್ಯಾಗೂ ಹೀಂಗs ಏನಾರೆ ಹೊಗುತೈತ್ಯೋ ಏನೊ. ಮೊದಲು ಬಾಲಿ........ಈಗ ಭೀಮು...."

ಕೆಲಹೊತ್ತು ಕಳೆದ ಬಳಿಕ ಅವಳು ಮತ್ತೆ ನುಡಿದಳು:

"ಭೀಮು ಹಂಗ ಅಂದದ್ದೂ ಚಲೋನs ಆತೇಳ್ರಿ. ನನ್ನ ಎದೀ ಮ್ಯಾಲಿನದೊಂದು ಕಲ್ಲು ಇಳಿದಂಗಾತು."

"ಅವ ಸೋಡಚೀಟೀ ಕೊಡದಿದ್ದದ್ದೇ ನೆಟ್ಟಗಾತು ಅಂತೀಯಾ?"

ಆ ಮಾತಿಗೆ ಸಣ್ಣವ್ವನಿಂದ ಉತ್ತರ ದೊರೆಯಲಿಲ್ಲ.

ಬೆಳಗಾಗುತ್ತಲೂ ಅವಳು ಮಗಳನ್ನು ಎದುರಿಗೆ ಕೂಡ್ರಿಸಿಕೊಂಡು, ಸೋಡಚೀಟಿಗೆ ಸಂಬಂಧಪಟ್ಟ ಸಂಗತಿಯನ್ನೆಲ್ಲ ವಿವರಿಸಿದಳು.

ಅವಳು ಹೇಳಿ ಮುಗಿಸುವ ತನಕ ಸುಮ್ಮನೆ ಕುಳಿತಿದ್ದ ಬಾಲಿ ಅನಂತರ ಮುಖವನ್ನೆತ್ತಿ ಕಟುಸ್ವರದಲ್ಲಿ ನುಡಿದಳು:

"ನಿನ್ನ ಮನಸಿನಾಗಿದ್ದಾಂಗs ಆತಲ್ಲ! ಈಗಾದರೂ ಸಮಾಧಾನ ಆತೇನ ನಿನಗ?"

ಸಿಟ್ಟಿನಿಂದ ಸಣ್ಣವ್ವನ ಕಳಾಹೀನ ಮುಖಕ್ಕೆ ರಕ್ತವೇರಿತು. "ಅಯ್ಯs ನಾಯೇನ ಮಾಡಲೇ ಛಿನಾಲೀ! ಅವರ್‍ು ಕೊಟ್ಟರ ತಗೋ ಹೋಗು ಸೋಡಚೀಟೀ. ಆರು ನೂರು ರುಪಾಯಿ ಯಾಕ, ಸಾವಿರ ರುಪಾಯಿ ಕೊಟ್ಟರೂ ಕೊಡೂದಿಲ್ಲಂತ ಅವರು...."

ಬಾಲಿ ಮತ್ತೆ ಮಾತನಾಡಲಿಲ್ಲ. ಕುಳಿತ ಸ್ಥಳದಿಂದ ಥಟ್ಟನೆದ್ದು ಮನೆ ಬಿಟ್ಟು ನಡೆದಳು.

# ಎಂಟು

ದಾರಿಯಲ್ಲಿ ಎಲ್ಲಿಯೂ ನಿಲ್ಲದೆ ಹೊಳೆಯನ್ನು ದಾಟಿ ನೇರವಾಗಿ ಆಕೆ ಗಿರಿಯನ ಹೊಲದ ಹತ್ತಿರ ಬಂದಳು. ಹೊಲದಲ್ಲಿ ಗುಡಿಸಲು ಹಾಗೆಯೆ ಇತ್ತು. ಅಲ್ಲಿ ಯಾರೂ ಇರಲಿಲ್ಲ.

ಮೊದಲು ತನ್ನ ಮಾವ ಹಿಡಿದಿದ್ದ ಹೊಲವನ್ನು ಈಗ ಗಿರಿಯ ಹಿಡಿದಿರುವುದು ಅವಳ ನೆನಪಿಗೆ ಬಂದಿತು. ಗಿರಿಯನೂ ಅವನ ಅಜ್ಜನೂ ಆ ಹೊಲದಲ್ಲಿಯೆ ಇರಬಹುದು, ಎಂದು ಯೋಚಿಸಿ ಅತ್ತ ಹೊರಟಳು.

ಹಳ್ಳಿಯ ಪೂರ್ವಕ್ಕೆ, ಮರಡಿಯೊಂದರ ಕೆಳಗೆ ಆ ಹೊಲವಿತ್ತು. ಅಲ್ಲಿಗೆ ಹೋಗಬೇಕಾದರೆ ಹಳ್ಳಿಯಲ್ಲಿ ಹಾಯಲೇ ಬೇಕಾಗುತ್ತಿತ್ತು. ಬಹಳ ದಿನಗಳಿಂದ ಬಾಲಿ ಆ ಊರಲ್ಲಿ ಅಡಿಯಿರಿಸಿರಲಿಲ್ಲ. ಮತ್ತೆ ಹೊಳೆ ದಾಟಿ, ಬಿದಿರು ಮೆಳೆಯ ಹತ್ತಿರ ಹಾಯ್ದು ಅವಳು ಊರಲ್ಲಿ ಪ್ರವೇಶಿಸುತ್ತಿದ್ದ ಹಾಗೆ ಯಸನೋವಪ್ಪ ಎದುರಿನಿಂದ ಬರುತ್ತಿದ್ದುದನ್ನು ಕಂಡಳು.

" ಹೆ ಹೆ ಹೆ, ಬಾಲೀ, ಎತ್ತ ಹೊಂಟೆ ? " ಎಂದು ಕೇಳಿದ ಯಸನೋವಪ್ಪ.

" ಹೊಂಟೇನಿ ನಿನ್ನ ಮಣ್ಣಾಗ ಹಾಕೂದಕ್ಕ, " ಎಂದು ಉತ್ತರವಿತ್ತು ಅವಳು ಕೈಬೀಸುತ್ತ ಮುಂದೆ ಸಾಗಿದಳು.

" ಹೆ ಹೆ ಹೆ ಹೆ, ಒಳೇ ಖಡಕ ಆಗ್ಯಾಳಲ್ಲಾ........ಹೆ ಹೆ ಹೆ ಹೆ.... " ಎಂದು ಪುಟುಪುಟಿಸುತ್ತ ಆತ ಹೊಳೆಯ ಕಡೆ ನಡೆದ.

ಬಸವಾಣಿಯ ಚಹದಂಗಡಿಯಲ್ಲಿ ಇಸ್ಪೀಟಿನಾಟ ಭರದಿಂದ ಸಾಗಿತ್ತು. ಬಾಗಿಲಿನ ಬಳಿ ಕುಳಿತುಕೊಂಡು ಆಟವನ್ನು ನಿರೀಕ್ಷಿಸುತ್ತಿದ್ದ ಭೀಮಪ್ಪ ಬೀದಿಯಲ್ಲಿ ಹೊರಟಿದ್ದ ಬಾಲಿಯನ್ನು ಕಂಡು, ಹುಬ್ಬುಗಂಟು ಹಾಕಿ, ಅವಳೆತ್ತ ಹೊರಟಿರಬಹುದೆಂಬುದನ್ನು ಕುರಿತು ಯೋಚಿಸತೊಡಗಿದ. ಅವಳು ತುಸು ದೂರ ಹೋದ ಬಳಿಕ, ಅಂಗಡಿಯಲ್ಲಿ ಬೀಡಿ ಸೇದುತ್ತ ಕುಳಿತಿದ್ದ ಶಿವರಾಯಿಯನ್ನು ಕೂಗಿ ಕರೆದು, ಬಾಲಿಯನ್ನು ತೋರಿಸಿ, " ಅವಳೆತ್ತ ಹೊಂಟಾಳ, ಏನ ಮಾಡುತಾಳ ನೋಡಿ ಬಾ ಹೋಗು, " ಎಂಬುದಾಗಿ ಪಿಸುಧ್ವನಿಯಲ್ಲಿ

ಹೇಳಿ ಕಳಿಸಿದ. ಶಿವರಾಯಿ ಮೆಲ್ಲಗೆ ಹೆಜ್ಜೆಯಿಡುತ್ತ ಬಾಲಿಗೆ ಗೊತ್ತಾಗದಂತೆ ಆವಳನ್ನು ಹಿಂಬಾಲಿಸಿಕೊಂಡು ಹೊರಟ.

ಹಳ್ಳಿಯನ್ನು ದಾಟಿ, ಕಾಲುದಾರಿ ಹಿಡಿದು ಮರಡಿಯ ಕಡೆ ನಡೆದಳು ಬಾಲಿ. ಹೊಲಗಳಲ್ಲಿ ಕೆಲಸ ಮಾಡುತ್ತಿದ್ದವರು ಅವಳನ್ನು ಗುರುತಿಸಿ, "ಎತ್ತ ಲಾಗ ಹೊಂಟಿ ? " ಎಂದು ಕೇಳುತಿದ್ದರು. ಯಾರಿಗೂ ಉತ್ತರವೀಯದೆ ಅವಳು ಮೌನವಾಗಿ ನಡೆದು ಹದಿನೈದು ನಿಮಿಷಗಳ ತರುವಾಯ ಗಿರಿಯನ ಹೊಸ ಹೊಲಕ್ಕೆ ಬಂದು ಮುಟ್ಟಿದಳು. ದೂರದಲ್ಲಿದ್ದ ಮಾವಿನ ಗಿಡವೊಂದರ ಕೆಳಗೆ ಕುಳಿತು ಶಿವರಾಯಿ ಅವಳ ಚಲನವಲನಗಳ ಕಡೆ ದೃಷ್ಟಿಯಿರಿಸಿದ್ದ.

ಮರಡಿಯ ಕೆಳಭಾಗದಿಂದ ಆರಂಭವಾಗಿ ತುಂಬ ಅಂತರದ ವರೆಗೆ ಹರ ಡಿದ್ದ ಹೊಲದಲ್ಲೆಲ್ಲ ನೇಗಿಲು ಹೊಡೆದು ಮುಗಿದಿದ್ದುದರಿಂದ ದೊಡ್ಡ ದೊಡ್ಡ ಹೆಂಟೆಗಳು ಬಿಸಿಲಿನಲ್ಲಿ ಬಾಯ್ದೆರೆದು ಬಿದ್ದಂತೆ ಕಾಣುತ್ತಿತ್ತು. ಮರಡಿಯ ಮೇಲೆ, ಗಿಡಗಂಟೆಗಳ ಬಳಿ ಎಂಟು ಹತ್ತು ದನಗಳು ಮೇಯುತ್ತ ನಿಂತಿದ್ದುವು. ಹೊಲದ ಮಧ್ಯ ಭಾಗದಲ್ಲಿದ್ದ ಜಾಲಿಯ ಗಿಡವೊಂದರ ಕೆಳಗೆ ಅಜ್ಜನೊಬ್ಬನೇ ಕುಳಿತಿದ್ದುದು ಕಾಣಿಸಿತು.

ಹೆಂಟೆಗಳ ಮೇಲೆ ಹಾರುತ್ತ ಅವನ ಬಳಿ ಬಂದು, ಅವನಿಗೆ ತೀರ ಸನಿ ಯದಲ್ಲಿ ಕುಳಿತುಕೊಂಡು ಬಾಲಿಯೆಂದಳು:

" ಗಿರಿಯ ಎಲ್ಲ್ಯದಾನ ಅಜ್ಜಾ ? "

ಅಜ್ಜನಿಗೆ ಒಡನೆಯೆ ಅವಳ ಗುರುತು ಹತ್ತಲಿಲ್ಲ. ಕಣ್ಣುಗಳನ್ನು ಸಂಕುಚಿತಗೊಳಿಸಿ ಅವಳನ್ನು ಸರಿಯಾಗಿ ದೃಷ್ಟಿಸಲು ಯತ್ನಿಸುತ್ತ–"ಯಾರವಾ ನೀ ? " ಎಂದು ಆತ ಕೇಳಿದ.

" ನನ್ನ ಗುರುತಾಗಲಿಲ್ಲೇನ ಅಜ್ಜಾ ? ನಾ ಬಾಲಿ. "

ಈ ಮೊದಲು ಬಾಲಿಯನ್ನು ಎಂದೂ ನೋಡಿರಲಿಲ್ಲ ಅಜ್ಜ. ಅವಳ ವಿಚಾರವಾಗಿ ಅವರಿವರಿಂದ ಕೇಳಿ ತಿಳಿದಿದ್ದುದೆಷ್ಟೋ ಅಷ್ಟೆ. ಗಿರಿಯನಿಗೂ ಅವಳಿಗೂ ಕೆಲ ದಿನಗಳಿಂದ ಸಂಬಂಧ ಬೆಳೆದಿರಬಹುದೆಂದೂ ಆತ ತರ್ಕಿಸಿ ಕೊಂಡಿದ್ದ.

" ಕುಂದ್ರವ್ವಾ ಮಗಳs. ಏನು ಇಷ್ಟು ದೂರ ಬಂದಿ ? "

" ಗಿರಿಯ ಎಲ್ಲ್ಯದಾನ ಅಜ್ಜಾ ? "

" ಹೊಳಿಯ ವ್ಯಾಲಿನ ಹೊಲದ ಪಾಳೀ ಕೊಟ್ಟು ಬರೂದಕ್ಕ ಶಹರಕ್ಕ ಹೋಗಿದಾನ," ಎಂದು ಹೇಳಿ ಅಜ್ಜ ಕೇಳಿದ: " ಏನ ಬಂದಿ? ಸಣ್ಣವ್ವ ನೆಟ್ಟಗದಾಳೇನ ? "

" ಆಕಿಗೇನ ಧಾಡಿ ? ದುಂಡಗs ಬೆಳೀತಾ ಅದಾಳು. " ಬಾಲಿ ಬೇಸರದ ಧ್ವನಿಯಲ್ಲಿ ನುಡಿದಳು.

ಅಜ್ಜ ವಿಸ್ಮಯದಿಂದ ಕೇಳಿದ: " ಯಾಕs, ಹೀಂಗ ಹೀಂಗ ಮಾತಾಡುತೀ ? ಅಪ್ಪಗೂ ನಿನಗೂ ಏನಾರೆ ಜಗಳ ಆಗ್ಯೈತ್ಯೋ ಏನ ? "

ಅವನೆದುರಿಗೆ ತನ್ನ ಮನೆಯ ರಗಳೆಯನ್ನೆಲ್ಲ ಹೇಳಬೇಕೇ ಬೇಡವೇ ಎಂದು ಯೋಚಿಸುತ್ತ ಅವಳು ಒಂದು ನಿಮಿಷ ಸುಮ್ಮನಿದ್ದಳು. ತನ್ನ ಅಜ್ಜನ ಹಾಗಿರುವ ಅವನ ಹತ್ತಿರ ಸಂಕಟವನ್ನೆಲ್ಲ ತೋಡಿಕೊಳ್ಳುವುದೇ ಒಳ್ಳೆಯ ದೆಂದು ತೋರಿತು. ಅವಳ ಎದೆಯಲ್ಲಿ ಕೋಲಾಹಲವೆಬ್ಬಿಸುತ್ತಿದ್ದ ಭಾವಗಳು ಹೊರಬರಲು ದಾರಿ ಕಾಯುತ್ತಿದ್ದುವು. ಬಾಲಿ ನಿಧಾನವಾಗಿ ಎಲ್ಲವನ್ನೂ ಹೇಳಿ ಮುಗಿಸಿದಳು. ಅವಳ ಹೃದಯ ತುಂಬ ಹಗುರಾದ ಹಾಗಾಯಿತು.

" ಸೋಡಚೀಟಿ ಕೊಡೂದಿಲ್ಲ ಅಂದೇನ ಭೀಮು ? "

" ಅಂದನಂತ, ಕುಲಕರಣಿಯ ಮುಂದ. "

" ನಮಗೂ ಅವಗೂ ಬದ್ಧ ವೈರ ಬಿದ್ದಂಗಾಗ್ಯೈತೆಲ್ಲ. ಸೋಡಚೀಟಿ ಕೊಟ್ಟಾನೇನ ಅವ ? "

" ಮುಂದ ಹೆಂಗ ಅಜ್ಜಾ ? "

" ಗಿರಿಯನ್ನs ಉಡಿಕೀ ಮಾಡಿಕೋಬೇಕಂತ ಮಾಡಿಯೇನ ನೀ ? " ಮುದುಕ ಕುತೂಹಲದಿಂದ ಕೇಳಿದ.

ಅದಕ್ಕೆ ಬಾಲಿಯಿಂದ ಉತ್ತರ ಬರಲಿಲ್ಲ. ಮುದುಕ ಮತ್ತೆ ಹೇಳಿದ:

" ಗಿರಿಯನ ಹುಚ್ಚು ಬಿಟ್ಟು ಬ್ಯಾರೆ ಯಾವನ ಸಂಗಾತ ಆದರೂ ಉಡಿಕಿ ಮಾಡಿಕೊಂಡು ಸಂಸಾರ ಮಾಡು ಮಗಳs. "

ಬೇರೆಯವನ ಜತೆಗೆ ಸಂಸಾರ? ಬಾಲಿ ಮನಸ್ಸಿನಲ್ಲೇ ನಕ್ಕಳು. ಉಡಿಕೆಯಾಗುವುದೇ ಆದರೆ ಗಿರಿಯನ ಜತೆಗೇ ಆಗಬೇಕು, ಆಗದಿದ್ದರೆ ಹಾಗೇ ಈಗ ಇರುವ ಹಾಗೇ ಇರಬೇಕು. ಗಿರಿಯನ ಜತೆಗೇ ಆಗಬೇಕೆಂಬ ಹಟ ವಾದರೂ ಯಾಕೆ ?--ಎಂದು ತನ್ನಷ್ಟಕ್ಕೆ ತಾನೇ ಕೇಳಿಕೊಂಡಳು. ಸಮಸ್ಯೆ

ಅರ್ಥವಾಗಲಿಲ್ಲ. ತನ್ನ ಮನಸ್ಸನ್ನೇ ಅರಿತುಕೊಳ್ಳದಾದಳು ಬಾಲಿ. ಮೂರು ವರ್ಷಗಳ ಅವಧಿಯಲ್ಲಿ ಏಳೆಂಟು ಜನರೊಂದಿಗಾದರೂ ತಾನು ಗೆಳೆತನವಿಟ್ಟು ಕೊಂಡುದಾಗಿತ್ತು. ಗಿರಿಯನ ಬಗೆಗೆ ತನ್ನಲ್ಲಿ ಹುಟ್ಟಿಕೊಂಡಂಥ ತೀವ್ರ ಆಕರ್ಷಣೆ ಅವರಲ್ಲಿ ಯಾರೊಬ್ಬರ ಬಗೆಗೂ ಹುಟ್ಟಿಕೊಂಡಿರಲಿಲ್ಲ. ತಾನು ತೊಟ್ಟು ಬಿಸುಡುವ ಕುಪ್ಪಸಗಳಂತೆ ಅವರೆಲ್ಲರೂ ತನ್ನ ಬಾಳಿನಲ್ಲಿ ಪ್ರವೇಶಿಸಿ ನಾಲ್ಕು ದಿನವಿದ್ದು ಹೊರಟು ಹೋಗಿದ್ದರು. ಗಿರಿಯನೊಬ್ಬ ಮಾತ್ರ ಕೊನೆಯ ವರೆಗೂ ಉಳಿಯುವನೇ? ಯಾರು ಬಲ್ಲರು? ಅವನ ಬಗೆಗೆ ತನ್ನಲ್ಲಿ ಇಂಥ ತೀವ್ರ ಆಸಕ್ತಿಯುಂಟಾಗಲು ಕಾರಣವಾದರೂ ಏನು? ಅವನೇನೂ ರೂಪ ವಂತನಲ್ಲ, ವಿದ್ಯಾವಂತನಲ್ಲ, ಶ್ರೀಮಂತನೂ ಅಲ್ಲ, ಸೊಗಸಾಗಿ ಪೋಕಿ ಮಾಡುವವನೂ ಅಲ್ಲ, ಸವಿ ಸವಿ ಮಾತಾಡುವವನೂ ಅಲ್ಲ. ತನಗಿರುವಷ್ಟು ಬುದ್ಧಿ ಕೂಡ ಅವನಿಗಿಲ್ಲ. ಎಷ್ಟೋ ವಿಷಯಗಳ ಬಗೆಗೆ ಅವನಿಗೆ ಏನೂ ತಿಳಿ ಯುವುದಿಲ್ಲ. ಗಂಡು-ಹೆಣ್ಣಿನ ಸಂಬಂಧದ ವಿಷಯದಲ್ಲೂ ಅವನಿಗೆ ಅಂಥ ತಿಳಿವಳಿಕೆಯೇನೂ ಇಲ್ಲ. ಅವನ ಮೂರ್ಖತನವನ್ನು ನೆನೆದುಕೊಂಡಾಗಲೆಲ್ಲ ತನಗೆ ನಗೆಯೂ ಬರುತ್ತದೆ. ಆದರೂ--ಅದೇನೇ ಇದ್ದರೂ—ಅವನ ಬಗೆಗೇ ಮೋಹ ಹುಟ್ಟಿದೆ....ಅವನನ್ನೇ ಉಡಿಕೆಯಾಗಬೇಕೆಂಬ ಬಯಕೆ ಬಲಿತಿದೆ. ಸದ್ಯದ ಸ್ಥಿತಿಯಲ್ಲಿ ಉಡಿಕೆ ಅಸಾಧ್ಯವೇ ಎಂದಂತಾಯಿತು. ಮದುವೆ, ಉಡಿಕೆ ಮೊದಲಾದ ಸಂಗತಿಗಳ ಬಗೆಗೆ ತಾನೇನೂ ಲಕ್ಷ್ಯ ಕೊಡುವವಳಲ್ಲ. ಶಾಸ್ತ್ರದ ಒಪ್ಪಿಗೆಯಿಲ್ಲದೆಯೇ ಅವನೊಂದಿಗೆ ಕೂಡಿ ಬಾಳಲೂ ತಾನು ಸಿದ್ಧಳೇ. ಆದರೆ, ತನ್ನಂತೆ ಆತ ಸಿದ್ಧನಾಗಲಾರ....ಆಗಲಾರ....

ಸಂತೆಯ ದಿನ ಆತನಾಡಿದ ಅವಹೇಳನಕಾರಕ ಮಾತುಗಳು ಮತ್ತೆ ಅವಳ ಕಿವಿಗಳಲ್ಲಿ ದುಮುದುಮಿಸತೊಡಗಿದುವು. ತನ್ನ ದುರ್ನಡತೆಯ ವಿಷ ಯವೆಲ್ಲಾ ಅವನಿಗೆ ಗೊತ್ತಾದಂತಿದೆ. ಯಾರೋ ಹೇಳಿರಲು ಸಾಕು. ತಾನು ಬಹಳ ಕೆಟ್ಟವಳು, ತನ್ನಂಥವಳ ಸಂಗ ಮಾಡುವುದು ಹಾನಿಕಾರಕ–ಎಂದೆಲ್ಲ ಹೇಳಿರಬಹುದು ಅವರು. ಮೊದಲೇ ಬುದ್ಧಿಗೇಡಿ ಗಿರಿಯ. ಹೇಳುವವರ ಮಾತುಗಳನ್ನೆಲ್ಲ ತಲೆಯಲ್ಲಿ ತುಂಬಿಕೊಂಡಿರಬಹುದು. ಅವನಂತೂ ಇನ್ನು ತನ್ನ ಕಡೆ ಹೊರಳಿ ಸಹ ನೋಡುವುದಿಲ್ಲವೆಂದು ಅನ್ನಿಸುತ್ತದೆ. ಅಂಥವನೊಂ ದಿಗೆ ಉಡಿಕೆಯಾಗಲು ಹಾತೊರೆಯುವ ತಾನೆಂಥ ಹುಚ್ಚಿ....ಎಂಥ ಬುದ್ಧಿ

ಗೇಡಿ....ಸಂತೆಯ ದಿನ ಯಾವಾತ ತನ್ನನ್ನು ಕಣ್ಣೆತ್ತಿ ನೋಡಲಿಲ್ಲವೊ, ಯಾವಾತ ತನ್ನ ಮೇಲೆ ಐದು ರೂಪಾಯಿ ನೋಟನ್ನು ಅತ್ಯಂತ ತಿರಸ್ಕಾರ ದಿಂದ ಬಿಸುಟಿದನೊ, ಅಂಥವನನ್ನು ಉಡಿಕೆಯಾಗುವ ಉದ್ದೇಶದಿಂದ ಅವನ ಹೊಲದ ವರೆಗೂ ಓಡಿ ಬರಬೇಕೇ ತಾನು! ತನಗೆಲ್ಲೋ ಬುದ್ಧಿ ಕೆಟ್ಟಿರಬೇಕು....ಹುಚ್ಚು ಹಿಡಿದಿರಬೇಕು. ತನ್ನ ತಾಯಿಯ ಮಾತೇ ನಿಜ ವಿರಬಹುದು. ತನ್ನ ತಲೆಯಲ್ಲಿ ಏನೋ ಹೊಕ್ಕಿರಬೇಕು. ಎಲಾ....ಎಂಥ ಹುಚ್ಚು....

"ನಾ ಹೋಗುತೀನಿ ಅಜ್ಜಾ," ಎನ್ನುತ್ತ ಬಾಲಿ ಮೇಲಕ್ಕೆದ್ದಳು.

## ಒಂಬತ್ತು

"ಏನಾತೋ?"

ಮುಖದ ಮೇಲಿನ ಬೆವರನ್ನೊರಸಿಕೊಳ್ಳುತ್ತ ಗಿರಿಯ ಕುಳಿತುಕೊಂಡ. ದಣಿದ ಧ್ವನಿಯಲ್ಲಿ ಹೇಳಿದ:

"ಹೊಳೀ ಮ್ಯಾಲಿನ ಹೊಲಾ ನಮ್ಮ ಕೈ ಬಿಡೂಹಂಗ ಕಾಣುತೈತಿ ಅಜ್ಜಾ."

ಅಜ್ಜನಿಗೂ ಗಾಬರಿಯಾಗದಿರಲಿಲ್ಲ. "ಯಾಕೋ, ಏನಾತು? ಅದ್ಯಾಕ ಕೈ ಬಿಡುತೈತಿ?"

"ಯಾರೋ ನಮುಗಾಗದವರು ಶಹರಕ್ಕ ಹೋಗಿ ಇನಾಮುದಾರಗ ಏನೋ ಹೇಳಿ ಬಂದಂಗ ಕಾಣುತೈತಿ."

"ಇನಾಮುದಾರ ಅಂದದ್ದಾದರೂ ಏನ, ಹೇಳಾಕೋ."

"ಪಾಳೆ ಬಹಾಳ ಕಡಿಮಿಯಾಗೈತಿ, ಈ ವರ್ಷದಿಂದ ಯಾಡ್ಡ ನೂರು ರುಪಾಯಿ ಕೊಡುದಾದರ ಹೊಲಾ ಮಾಡ್ರಿ, ಇಲ್ಲಾ ಬಿಟ್ಟುಬಿಡ್ರಿ ಅಂತಾನ."

"ಯಾಡ್ಡ ನೂರು?" ಮುದುಕ ದಂಗುಬಡೆದವನಂತೆ ಒಂದು ನಿಮಿಷ ಮಾತಿಲ್ಲದೆ ಕುಳಿತುಕೊಂಡಿದ್ದ. ಅನಂತರ ಧ್ವನಿಯೆತ್ತಿ— "ನೀ ಅಂದದ್ದು

ಖರೇ ಗಿರಿಯಾ. ಯಾರೋ ಎನೋ ಫಿತೂರಿ ಮಾಡಿದಾರ," ಎಂದು ಹೇಳಿದ.

" ಇನ್ಯಾರು ಬರುತಾರ ಮಾಡಾಕ? ಇದೆಲ್ಲಾ ಭೀಮು ಕಾಮಗೋಳ ರಾಡಿಯೇ ಇರಾಕ ಬೇಕು. ಮರಡೀ ಹೊಲಾ ಕೈಬಿಟ್ಟ ಹೊಟ್ಟೇಕಿಚ್ಚಿಗೆ ಹಿಂಗ ಮಾಡಿರಬೇಕು."

" ಒಂದೂವರಿ ಎಕರೆ ಹೊಲಕ್ಕ ಯಾಡ್ಡು ನೂರು ರೂಪಾಯಿ ಅಂದರ ಇದೆಂಥಾ ಅನ್ಯಾಯ ಬಂತೋ ಗಿರಿಯಾ. ವರ್ಷಾನುವರ್ಷದಿಂದ ಆ ಹೊಲಾ ನಮ್ಮದs ಅಂತ ತಿಳಕೊಂಡು ಬೆವರು ಸುರಿಸಿಕೊಂತ ಬಂದೀವಿ. ಒಮ್ಮಿಂದೊಮ್ಮೆಲಿ ಪಾಳಿ ನಾಕು ಪಟ್ಟು ಏರಿಸುತಾರಂದರ ಕಾಲ ಎಲ್ಲೀಗೆ ಬಂತಪಾ....ಛೆ....ಛೆ....ಇದೆಲ್ಲಾ ಕಾಡೂ ಕಾಲನs ಬಿಡೋ.... "

" ಪುಂಡತನಾ ಮಾಡಿ ನೋಡಿದರು. ಆಟ ನಡೀಲಿಲ್ಲ. ಅದಕ್ಕ ಈಗ ಇಂಥಾ ಕಾರಭಾರ ನಡಸಿದಾಂಗ ಕಾಣುತ್ತೈತಿ."

" ಕೈಯಾಗಿನ ಹೊಲಾ ಕೈಬಿಟ್ಟಿತಂದರ ಹೊಟ್ಯಾಗ ಬೆಂಕಿ ಬೀಳುತ್ತೈತಿ ತಮ್ಮಾ. ಈಗ ನಮ್ಮದs ಕೈಬಿಟ್ಟಿತಂದರ ನಮಗೂ ಹಂಗs ಆಗುತ್ತೈತ್ಯೋ ಇಲ್ಲೋ ?" ಎಂದ ಮುದುಕ.

" ನಾಳೆ ಹೋಗಿ ಗೌಡನ್ನ ಕೇಳಿ ಭರತೇನು. ಏನಂತಾನ ನೋಡೂಣು" ಎಂದು ನುಡಿದು ಗಿರಿಯ ಊಟಕ್ಕೆದ್ದ.

ಅಜ್ಜ ಮೊಮ್ಮಗ ಇಬ್ಬರೂ ಎದುರುಬದುರು ಕುಳಿತು ಊಟ ಮಾಡ ತೊಡಗಿದರು. ಊಟ ನಡೆದಿದ್ದ ಹಾಗೆ ಅಜ್ಜ, ಆ ದಿನ ಬೆಳಿಗ್ಗೆ ಬಾಲಿ ಪೊಲಕ್ಕೆ ಬಂದು ಹೇಳಿದುದನ್ನೆಲ್ಲ ವಿವರಿಸತೊಡಗಿದ.

" ಹೊಲದ ತನಕ ಬಂದಿದ್ದಳs ಬಾಲಿ ? ಆ ?" ಗಿರಿಯ ವಿಸ್ಮಯದ ಧ್ವನಿಯಲ್ಲಿ ಕೇಳಿದ.

" ಹೂಂ. ನಿನಗ ಬಾಳ ಮಳ್ಳಾದಂಗ ಕಾಣುತ್ತೈತಪಾ ಆ ಹುಡಿಗಿ."

ಗಿರಿಯ ಸಂಕೋಚದಿಂದ ತಲೆಬಾಗಿಸಿದ.

" ಹೆಣ್ಣು ಹಿಂಗ ತಾನಾಗೇ ಒಲಿದು ಬರೂದಂದರ ಬಾಳ ದೊಡ್ಡ ಮಾತಪಾ ಗಿರಿಯಾ. ನೀಯೇನೋ ಅದಕ್ಕ ಮಾಟಾ ಮಾಡಿದಂಗ ಕಾಣು ತ್ತೈತಿ. ಮದುವಿ ಬ್ಯಾಡ ಬ್ಯಾಡಂತ ಬಾಯಾಗ ಹೇಳೂದು, ನನಗ ತಿಳೀ

ಗೊಡದಂಗ ಹೊರಹೊರಗs ಹುಡುಗೀರನ್ನ ಮಳ್ಳ ಮಾಡೂದು! ಬಲೇ ಚೆರಿಕಿಲೇ ನೀ ಗಿರಿಯಾ! ನೀನಂದರ ಏನೂ ಅರೀದ ಸಾಂಬನಂಗ ಅಂತ ಮಾಡಿದ್ದಿನಿ ನಾ, " ಎಂದು ಹೇಳಿ ಅಜ್ಜ ನಗತೊಡಗಿದ.

ರಾತ್ರಿ, ಮಲಗಿಕೊಂಡ ತರುವಾಯವೂ ಅಜ್ಜ ಮಾತನಾಡುತ್ತಲೇ ಇದ್ದ.

" ನಿನಗ ಗೊತ್ತೈತೇನಲೇ ಗಿರಿಯಾ? ನನಗ ಒಟ್ಟು ಹೆಂಡರೆಷ್ಟು ಮಂದಿ ಅನ್ನೂದು ಗೊತ್ತೈತೇನ? "

" ಇಬ್ಬರು? " ಎಂದು ನಗುತ್ತ ಕೇಳಿದ ಗಿರಿಯ.

ಅಜ್ಜ ಗಟ್ಟಿಯಾಗಿ ನಗುತ್ತ ನುಡಿದ: " ಇಬ್ಬರು! ಪಿಶ್........ಇಬ್ಬರ್ಯಾ ತಕ್ಕ ಆದಾರೋ ಮಳ್ಳs. ಮೊದಲನೇದವಳನ್ನ ಮದುವಿಯಾದ ಯಾಡ್ತ ವರ್ಷದಾಗs ಎರಡನೇದವಳನ್ನ ಮಾಡಿಕೊಂಡಿದ್ದಿನಿ. ಆ ವ್ಯಾಲ ಮೂರು ಮೂರೂವರಿ ವರ್ಷ ಆದ ಮ್ಯಾಲ ಮೂರನೇದವಳು ಬಂದಳು........ಅವಳ ಮ್ಯಾಲ ನಾಲ್ಕನೇದವಳು....ಐದನೇದವಳು....ಆರನೇದವಳು ಹೀಂಗss.... "

" ಅಬ್ಬಬ್ಬಾ! ಊರಾಗಿನ ಹೆಂಗಸರನೆಲ್ಲಾ ನೀನs ಮಾಡಿಕೊಂಡಿದ್ಯೋ ಏನ? "

" ಒಂದs ಊರವರಲ್ಲೋ ಎಲ್ಲಾರೂ. ಎಲ್ಲಾ ಬ್ಯಾರೆ ಬ್ಯಾರೆ ಊರವರು. "

" ಅವರದೆಲ್ಲಾ ಹೆಂಗ ಗುರುತಾಗತಿತ್ತು? "

" ಹೀಂಗs. ಜಾತ್ರಿ ಗೀತ್ರಿಗೆ ಹೋದಾಗ, ಯಾರದೆರೆ ಮದುವೀ ದಿಬ್ಬಣಕ್ಕ ಹೋದಾಗ....ನನ್ನೊಮ್ಮೆ ನೋಡಿದ್ದs ತಡಾ, ನನಗ ಮಳ್ಳಾಗುತಿದ್ದುವು ನೋಡು ಆ ಹೆಣ್ಣುಗೋಳು. "

" ಹ ಹ ಹ! ನೀ ಅಂದರೇನ ಒಳೇ ರಾಜಾನಾಂಗ ಇದ್ದಿಯೋ ಏನ? "

" ರಾಜಾನಾಂಗ ಏನೂ ಇರಾಕಿಲ್ಲೋ. ಅಂತೂ ಒಳೇ ಗಟ್ಟಿಮುಟ್ಟಿ ಕಟ್ಟುಮಸ್ತು ಆಗಿದ್ದಿನಿ. ಹತ್ತು ಕೊಡದ ಹಂಡೇ ಒಬ್ಬನs ಎತ್ತಿ ಇಳಿಸುತಿದ್ದಿನಿ. ನಟ್ಟನಡುವೆ ಮಳಿಗಾಲದಾಗ ಭೋರಂತ ಹರಿಯುವ ಹೊಳಿಯಾಗ ಬ್ಯಾರೆ ಯಾರೂ ಈಸುವ ಧೈರ್ಯೀ ಮಾಡದಿದ್ದಾಗ ನಾ ಒಬ್ಬಾವನs ಈಸಿ

ಆಚೆಯ ದಂಡಿಗೆ ಹೋಗಿ ಕೆಲಸಾ ಮಾಡಿಕೊಂಡು ಬರುತಿದ್ನಿ. ಮೈಯಾಗ ಭೀಮಸೇನನಂಥಾ ತಾಕತ್ತು ಇತ್ತು. ಇಂಥಾವಗ ಮಳ್ಳಾಗದ ಬಿಟ್ಟಾವೇನೋ ಹೆಣ್ಣುಗೋಳು ? "

" ಏಳೆಂಟು ಮಂದೀನ್ನ ಮದುವಿ ಆಗಿದ್ದೇನ ಹಂಗಾದರ ? ಅವರೆಲ್ಲಾ ಏನಾದರು ? "

" ಮೂರು ಮಂದಿ ಸತ್ತರು. ಇಬ್ಬರು ಓಡಿಹೋದರು. ಒಬ್ಬಾಕಿ ಸೋಡಚೀಟಿ ತಗೊಂಡಳು. ಇನ್ನೊಬ್ಬಾಕಿಯೇ ನಿನ್ನ ಅಜ್ಜಿ. "

" ಬ್ಯಾರೆ ಹೆಂಡರಿಂದ ಮಕ್ಕಳಾಗಲಿಲ್ಲೇನ ಅಜ್ಜಾ ? "

" ಆಗಿದ್ದವು. ಎಲ್ಲಾ ಏನೇನೋ ಆಗಿ ತೀರಿಕೊಂಡವು. ಹುಟ್ಟೋದು ಸಾಯೂದು ಅಂದರ ಆಗಿನ ಕಾಲಕ್ಕ ಲಕ್ಷ್ಯದಾಗs ಉಳೀತಿರಲಿಲ್ಲ ಬಿಡಪಾ. ಯಾವದಾದರೊಂದ ಬ್ಯಾನಿ ಬಂತಂದರ ಊರಿಗೆ ಊರೆಲ್ಲಾ ಹುಳಾ ಸತ್ತಂಗ ಸತ್ತು ಹೋಗುತಿತ್ತು" ಎಂದು ಹೇಳಿ, ಅಜ್ಜ ಒಂದು ಕ್ಷಣ ತಡೆದು, " ನಿದ್ದಿ ಬರಲಿಲ್ಲೇನಲೇ ಗಿರಿಯಾ ? " ಎಂದು ಪ್ರಶ್ನಿಸಿದ.

" ಇಲ್ಲ ಅಜ್ಜಾ. "

" ಬೆಳಗಿನಾಗ ಹೋಗಿ ಗೌಡನ್ನ ಎಲ್ಲಾ ಕೇಳಿಬಾರಪಾ. ಏನೋ ಅವ ಒಬ್ಬ ನಮ್ಮ ಕಡೆ ಅದಾನಂತ ಚಲೋ ಆಗೈತಿ. ಇಲ್ಲದಿದ್ದರ.... ? "

ಗಿರಿಯ ಮರುಮಾತನಾಡಲಿಲ್ಲ. ಯೋಚನೆಯ ಅಲೆಗಳು ಅವನನ್ನು ಕೊಚ್ಚಿಕೊಂಡು ಹೋಗುತಿದ್ದುವು.

ಮಾರನೆಯ ದಿನ, ಗೌಡನನ್ನು ಕಂಡು ಬಂದ ಬಳಿಕ ಗಿರಿಯ ನಿರುತ್ಸಾಹದ ಧ್ವನಿಯಲ್ಲಿ ಹೇಳಿದ:

" ಪಾಳೆ ಠರಾವು ಮಾಡಿಕೊಡಬೇಕಂತ ಮಾಮಲೇದಾರ ಕೋರ್ಟಿನಾಗ ಅರ್ಜಿ ಮಾಡಬೇಕಂತ ಗೌಡ ಹೇಳುತಾನ. "

" ಅಂದರs ? "

" ಇನಾಮದಾರಗ ನಾವು ಎಷ್ಟು ಪಾಳೇ ಕೊಡಬೇಕನ್ನೂದನ್ನ ಮಾಮಲೇದಾರ ಸಾಬರೇ ಗೊತ್ತು ಮಾಡಿಕೊಡತಾರಂತ. "

" ಅಂದರs, ಖಟ್ಲೇ ಮಾಡಬೇಕಾಗುತೈತ್ಯೋ ಏನ ? "

" ಹೂಂ. ವಕೀಲನ್ನೂ ಇಡಬೇಕಾಗುತೈತಂತ.... "

"ಅಂದರs, ವಕೀಲಗ ರುಪಾಯಿ ಕೊಡಬೇಕಾಗುತ್ತೈತಿ.... "

"ಹೌದ ಮತ್ತ! ರುಪಾಯಿ ಕೊಡದಿದ್ದರ ಖಟ್ಲಿ ಹಿಡಿದಾನೇನು ವಕೀಲ ?"

"ಎಷ್ಟ ಬೇಕಾಗುತಾವಂತ ರುಪಾಯಿ, ಕೇಳಿದೇನ ? "

"ನೂರು ನೂರಿಪ್ಪತ್ತು ಬೇಕಾಗುತಾವಂತ. "

"ನೂರಿಪ್ಪತ್ತು ? ಎಲ್ಲಿಂದಾ ತರೂದೋ ಅಷ್ಟು ರುಪಾಯಿ ? "

"ನಾನೂ ಅದನ್ನs ವಿಚಾರ ಮಾಡಾಕ ಹತ್ತೀನಿ. ಖಟ್ಲೀ ಅಂತೂ ಮಾಡಾಕs ಬೇಕಂತ. ಇಲ್ಲದಿದ್ದರ ಇನಾಮುದಾರ ಕೇಳಿದಂಗ ಯಾಡ್ಡ ನೂರು ರುಪಾಯಿ ಪಾಳೀ ಕೊಟ್ಟು ತಣ್ಣಗs ಕುಂದ್ರಬೇಕು. "

"ಆ ಹೊಲದಾಗ ಬೆಳದದ್ದೆಲ್ಲಾ ಮಾರಿದರೂ ಯಾಡ್ಡ ನೂರು ರುಪಾಯಿ ಬರೂ ಹಂಗಿಲ್ಲಲ್ಲೋ ? "

"ಅಂತೂ ಒಳೇ ಪೇಚು ಬಂತು ಅಜ್ಜಾ. ನಾವು ಹುಂಬ ಮಂದಿ. ಕಾಯದೆ ಗೀಯದೆ ನಮ್ಮಂಥವರಿಗೇನ ತಿಳೀಬೇಕು ? ಗೌಡ ಏನೇನೋ ಹೇಳಿದ. ಅವನ ಮಾತೂ ನಂಬಿಕಿಯಾಗೂದಿಲ್ಲ ನನಗ. ಕಾಯದೆ ಖಟ್ಲಿ ವಕೀಲ ಅಂತ ಹೇಳಿ ನಮ್ಮನ್ನ ಸುಲೀಬೇಕಂತ ಮಾಡಿದನೋ ಏನೋ. ಅವನ ಗುಣಾ ಏನು ಗೊತ್ತಿಲ್ಲಾ ನಮಗ ? ಊರೆಲ್ಲಾ ಮಾತಾಡುತ್ತೈತಲಾ...."

"ಅವ ಹೆಂಗs ಇದ್ದರೂ ಈ ವ್ಯಾಳೀದಾಗ ಅವನ್ನ ಬಿಟ್ಟರ ಬ್ಯಾರೆ ಯಾರೂ ಇಲ್ಲ ಆಧಾರ. "

"ಈಗ ನನಗ ಅನಿಸುತ್ತೈತಿ ಅಜ್ಜಾ. ನನಗೂ ಏನರೆ ಸ್ವಲ್ಪ ಓದಾಕ ಬರಿಯಾಕ ಬಂದಿದ್ದರ ಎಷ್ಟು ಚಲೋ ಆಗುತಿತ್ತು........ ಕಾಯದೆ ಗೀಯದೆ ನನಗೂ ಓದಾಕ ಬರುತಿದ್ದರ ಎಷ್ಟ ನೆಟ್ಟಗಾಗುತಿತ್ತು.... "

"ಓದಾಕ ಬಂದವರಿಗೆಲ್ಲಾ ಕಾಯದೆ ತಿಳೀತ್ತೈತೇನಲೇ ? ಕಾಯದೆ ತಿಳಿಯೂದಂದರ ವಕೀಲರಿಗೇ.... "

ಒಂದೆರಡು ದಿನಗಳ ತರುವಾಯ ಒಂದು ಸಲ ಸಿದಗೌಡ ಗಿರಿಯನನ್ನು ಹೊಳೆಯ ಹತ್ತಿರ ಸಂಧಿಸಿದಾಗ ಮತ್ತೆ ಖಟ್ಲೆಯ ವಿಚಾರವನ್ನು ಪ್ರಸ್ತಾಪಿಸಿ, "ಯಾಕೋ ? ಆ ವ್ಯಾಲ ಬರಲೇ ಇಲ್ಲ ? ಖಟ್ಲಿ ಮಾಡಬೇಕಂತ ಮಾಡೀಯೋ ಇಲ್ಲೋ ? " ಎಂದು ಕೇಳಿದ.

" ರುಪಾಯೇ ಇಲ್ಲಲ್ರೀ ಗೌಡರs ? "

" ರುಪಾಯಿ ಇಲ್ಲಾ ? ಅದಕ್ಯಾಕ ಚಿಂತಿ ಮಾಡುತೀಯೋ ಮಳ್ಳs ? ಯಾರನ್ನಾರೆ ಕೇಳಿದರ ಕೊಟ್ಟಾರು. "

" ಯಾರ ಕೊಡುತಾರ ಗೌಡರs ? ನಮಗೇನ ಮನೀ ಹೊಲಾ ಐತ್ಯೋ, ಏನೈತ್ಯೋ ? "

" ಹೊಲಾ ಇರದಿದ್ದರೇನಾತೋ ? ಮನೀ ಐತೆಲ್ಲಾ ? "

" ಅದೆಂಥಾ ಮನೀರೀ ಗೌಡರs ? ಅದರ ಮ್ಯಾಲ ಯಾವ ಕೊಟ್ಟಾನು ಸಾಲಾ ? "

" ನಿನಗ್ಯಾಕ ಅದರ ಚಿಂತಿ ಬಿಡೋ ! ನಾ ಕೊಡಿಸುತೇನಿ. ಧರ್ಮಣ್ಣಾ ಅದಾನೆಲ್ಲಾ, ನಿನಗ ಕೊಡೂದಿಲ್ಲೇನ ಅವ ? ನಾ ಒಂದ ಮಾತ ಹೇಳಿದರ ಸಾಕು—ಇಲ್ಲ ಅನ್ನೂದಿಲ್ಲ.... "

" ಅಜ್ಜನ್ನ ಕೇಳುತೀನಿ ಗೌಡರs, " ಎಂದು ನುಡಿದು ಗಿರಿಯ ಅವನನ್ನು ಬೀಳ್ಕೊಂಡು ಬಂದ.

ರಾತ್ರೆ, ಅಡುಗೆ ಮಾಡುತ್ತಲಿದ್ದಾಗ ಗಿರಿಯ ಸಾಲದ ವಿಚಾರವನ್ನೆತ್ತಿದ. ಸಾಲವೆನ್ನುತ್ತಲೂ ಅಜ್ಜನ ಮುಖದಲ್ಲಿನ ಹೊಳವೇ ಮಾಯವಾದಂತಾಯಿತು.

" ನಮ್ಮದಂತ ಇರೂದು ಅಂದರ ಇದೊಂದು ಮನಿ. ಇದನ್ನ ಬಿಟ್ಟರ ಬ್ಯಾರೆ ಏನೂ ಇಲ್ಲ ನಮಗ. ಇದನ್ನ ಅಡವಿಟ್ಟು ಸಾಲ ಮಾಡೂದs ? ಛೆ.... ಛೆ.... " ಎಂದ, ಅಜ್ಜ.

ಮನೆಯನ್ನು ಅಡವಿರಿಸುವ ಯೋಚನೆ ಗಿರಿಯನಿಗೂ ತಾಪದಾಯಕವಾಗಿತ್ತು. ಮನೆಯೆಂದರೆ ತಾಯಿಯಂತೆ. ದುಡಿದು ದುಡಿದು ದಣಿದು ಬಂದಾಗ ನೆರಳಿತ್ತು, ಆಸರೆಯಿತ್ತು ಸಂತೈಸುವ ತಾಯಿ....ಅದನ್ನು ಅಡವಿರಿಸಿ ಸಾಲ ತೆಗೆಯುವುದೇ ? ಅದೂ, ಒಂದು ಖಟ್ಲೆಗಾಗಿ ? ಖಟ್ಲೆಯಲ್ಲಿ ಏನಾಗುವುದೋ ಯಾರು ಬಲ್ಲರು ? ಸಾಲ ತೀರಿಸಲು ಸಾಧ್ಯವಾಗುವುದೋ ಇಲ್ಲವೊ. ಆಗಲಿಲ್ಲ. ಮುಂದೆ ? ಮನೆಯನ್ನೇ ಕಳೆದುಕೊಂಡು ಮಂಗನಂತಾದರೆ ಗತಿಯೇನು ?

ಒಂದು ವಾರ ಗೌಡನ ಕಣ್ಣಿಗೆ ಬೀಳದಂತೆ ಎಚ್ಚರವಾಗಿದ್ದ ಗಿರಿಯ. ಎಷ್ಟು ದಿನಗಳ ವರೆಗೆ ಹಾಗೆ, ತಲೆ ಮರಸಿಕೊಂಡು ತಿರುಗಲು ಸಾಧ್ಯವಾ

ದೀತು? ದೊಡ್ಡ ನಗರದಲ್ಲಾದರೆ ಮಾತು ಬೇರೆ. ಅದಾದರೋ ತೀರ ಸಣ್ಣ ಹಳ್ಳಿ. ಇದ್ದ ಓಣಿಗಳೆಂದರೆ ಆರೇಳು, ಅಷ್ಟೆ. ಜನಸಂಖ್ಯೆಯೂ ಬಹಳ ಕಡಮೆಯೆ. ಅಂಥ ಸ್ಥಳದಲ್ಲಿ ಒಬ್ಬನ ಕಣ್ಣು ತಪ್ಪಿಸಿ ಇನ್ನೊಬ್ಬ ತಿರುಗಾಡುವುದು ಕಷ್ಟವೇ ಸರಿ.

ಒಂದು ದಿನ ಗಿರಿಯ ಹೊಲದಿಂದ ಬರುತ್ತಿದ್ದ ಹಾಗೆ ಸಿದಗೌಡ ಎದುರಿಗೆ ಬಂದವನು—"ಯಾಕೋ, ಹಿಂಗ ಮಾಡಾಕ ಹತ್ತೀದೀ? ಬರಲೇ ಇಲ್ಲಲ್ಲಾ?" ಎಂದು ಕೇಳಿದ.

"ಸವಡs ಆಗಲಿಲ್ಲರೀ ಗೌಡರs."

"ಏನಂತಾನು ಮುದುಕ? ಬಾ, ಮನಿಗೆ ಹೋಗೂಣು," ಎಂದ ಗೌಡ.

ಇನ್ನು ಅವನಿಂದ ತಪ್ಪಿಸಿಕೊಳ್ಳಲು ಸಾಧ್ಯವಿರಲಿಲ್ಲ. ಗಿರಿಯ ಅವನನ್ನು ಹಿಂಬಾಲಿಸಿಕೊಂಡು ಹೋಗಲೇಬೇಕಾಯಿತು.

ಮನೆಗೆ ಬಂದ ಬಳಿಕ ಗೌಡ ಹೇಳಿದ:

"ನಿಮ್ಮನ್ನ ಕಟ್ಟಿಕೊಂಡು ಬಡಿದಾಡೂದಂದರ ತಲಿ ಚಿಟ್ ಅಂದು ಹೋಗುತ್ತೈತಿ. ನಿಮ್ಮ ಹಿತ ಯಾತರಾಗ್ಗೈತಿ ಅನ್ನುದು ಕೂಡಾ ತಿಳಿಯೂದಿಲ್ಲ ನಿಮಗ. ಹೇಳಿದ ಮಾತೂ ಕೇಳೂ ಹಂಗಿಲ್ಲ. ಏನೂ ಮಾಡದs ಗಪ್ಪs ಕುಂತಿರೂದು....ಪರಸಂಗ ಮೈಮ್ಯಾಲ ಬಂದ ಬಳಿಕ ಬೋರಂತ ಅಳೂದು.... ಸಾಕಸಾಕಾಗಿ ಹೋಗ್ಯೈತಿ ನನಗ, ನಿಮ್ಮ ಕಾಲಾಗ."

ನೆಲದ ಮೇಲೆ ದೃಷ್ಟಿಯನ್ನು ಸ್ಥಿರಗೊಳಿಸಿ ಗಿರಿಯ ಕದಲದೆ ಕುಳಿತಿದ್ದ. ಬೀಡಿ ಹೊತ್ತಿಸಿ ಸೇದುತ್ತಾ ಗೌಡ ಮುಂದುವರಿಸಿದ:

"ಹೊಳೀ ಮ್ಯಾಲಿನ ಹೊಲಾ ಕಳಕೋಬೇಕಂತs ಮಾಡೀರೋ ಏನ ನೀವು? ಖಟ್ಲೆ ಮಾಡೂದಿದ್ದರ ಲಗೂ ಮಾಡಾಕ ಬೇಕು. ಹಿಂಗ ಕುಂತು ಬಿಟ್ಟರ ಹೆಂಗ?"

"ಏನ ಮಾಡೂಣಂತೀರಿ ಗೌಡರs?"

"ಎಷ್ಟ ಸಾರಿ ಕೇಳುತೀ ಅದು ಮತ್ತ ಮತ್ತ? ಹೊಲಾ ಬಿಡೂದೂ ಬ್ಯಾಡ, ಸಾಲಾ ಮಾಡೂದೂ ಬ್ಯಾಡ—ಅಂದರ ಹೆಂಗ?"

ಮಾರನೆಯ ದಿನವೆ ಮನೆಯನ್ನು ಆಧಾರವಾಗಿ ಬರೆದುಕೊಟ್ಟು ಧರ್ಮ

ಣ್ಣಾನಿಂದ ಎರಡು ನೂರು ರೂಪಾಯಿ ಸಾಲ ಪಡೆದುಕೊಂಡುದೂ ಆಯಿತು. ಖಟ್ಲೆ ಹಾಕುವುದಕ್ಕಾಗಿ ಗಿರಿಯನೂ ಗೌಡನೂ ತಾಲೂಕಿನ ಸ್ಥಳಕ್ಕೆ ಹೊರಟರು.

ರೈಲು ಒಂದು ಗಂಟೆ ತಡವಾಗಿ ಬರುವುದಾಗಿ ತಿಳಿಯಿತು. " ಬಾ, ಚಾ ಆದರೂ ಕುಡಿಯೂಣು " ಎಂದು ಗೌಡ ಗಿರಿಯನನ್ನು ನಿಲ್ದಾಣದ ಹಿಂಭಾಗದಲ್ಲಿದ್ದ ಚಹದಂಗಡಿಗೆ ಕರೆದೊಯ್ದ.

ಅಂಗಡಿಯೆದುರಿಗೆ ತುಂಬ ಎತ್ತರವಾಗಿ, ತೆಳ್ಳಗೆ ಕೋಲಿನಂತಿದ್ದ, ಕೋಟು ಟೊಪ್ಪಿಗೆ ಧರಿಸಿದ್ದ ವ್ಯಕ್ತಿಯೊಂದನ್ನು ಕಂಡು ಸಿದಗೌಡ ನಮಸ್ಕಾರ ಮಾಡಿ, " ಏನ ಸಾಹೇಬರs, ಎತ್ತ ಹೊಂಟಿರಿ ? " ಎಂದು ಕೇಳಿದ. ಗಿರಿಯನಿಗೆ ಸಾಹೇಬರ ವಿಷಯ ತೀರಾ ಅಪರಿಚಿತವಾದುದು. ಅವರಾರೋ ದೊಡ್ಡ ಸಾಹೇಬರೇ ಇರಬಹುದು ಎಂದಾತ ಭಾವಿಸಿದ.

" ತಾಲೂಕಿನ ಸ್ಥಳಕ್ಕೆ ಹೊಂಟೆನೀ, " ಎಂದ ಸಾಹೇಬ.

ಗೌಡ ಗಿರಿಯನ ಕಡೆ ತಿರುಗಿ— " ಏ, ಇವರು ಇನಿಸ್ಪೇಟರ್ ಸಾಹೇಬರೋ. ಐವತ್ತ ಹಳ್ಳೀ ಮ್ಯಾಲೆಲ್ಲಾ ಅಧಿಕಾರ ನಡಸತಾರ, " ಎಂದು ಹೇಳಿ, " ಬರ್‍ರಿ, ಬರ್‍ರಿ, ಚಾ ಕುಡಿಯೂಣು, " ಎಂದು ಇನಸ್ಪೆಕ್ಟರನ್ನೂ ಕರೆದುಕೊಂಡು ಚಹದಂಗಡಿಗೆ ನುಗ್ಗಿದ.

ಮೈಸೂರುಪಾಕು ತರಿಸಿದರು, ಖಾರಾ ತರಿಸಿದರು, ಚಹ ತರಿಸಿದರು. ಎಲ್ಲ ಮುಗಿದ ಬಳಿಕ ಮಸಾಲೆ ಅಡಕೆ, ಸಿಗರೇಟು—ತನ್ನ ಅದು ವರಗಿನ ಆಯುಷ್ಯದಲ್ಲೇ ಮೈಸೂರಪಾಕಿನ ರುಚಿ ಕಂಡಿರಲಿಲ್ಲ ಗಿರಿಯ. ಆತ ಸಂಕೋಚಪಟ್ಟುಕೊಳ್ಳುತ್ತ ಅದನ್ನು ತಿಂದು ಮುಗಿಸಿದ. ಹೌದು. ಬಹಳ ರುಚಿ ರುಚಿಯಾಗಿತ್ತು ಮೈಸೂರುಪಾಕು. ಸಿದಗೌಡನೂ 'ಇನಿಸ್ಪೇಟರೂ' ಅದನ್ನು ದಿನವೂ ತಿನ್ನುತ್ತಿರುವರೊ ಏನೊ. ಅವರೇ ಭಾಗ್ಯವಂತರು....

" ನೀನೂ ಒಂದು ಸಿಗರೇಟ ಸೇದತೀಯೇನೋ ಗಿರಿಯಾ ? " ಗೌಡ ಮೀಸೆಗಳಲ್ಲಿಯೆ ನಗುತ್ತ ಕೇಳಿದ.

ಇನಸ್ಪೆಕ್ಟರಿಗೂ ನಗೆ ಬಂದಿತು. ಬಕಪಕ್ಷಿಯಂತಿದ್ದ ತನ್ನ ಕೊರಳನ್ನು ಹಾಗೆ ಹೀಗೆ ತಿರುಗಿಸುತ್ತ ಆತ ಹಲ್ಲು ಕಿರಿದ. ಸಮೀಪದಲ್ಲಿ ಚಹ ಕುಡಿಯುತ್ತ ಕುಳಿತಿದ್ದ ಜನರೂ ನಕ್ಕರು.

ಎಂದೂ ಸಿಗರೇಟು ಸೇದಿದವನಲ್ಲ ಗಿರಿಯ. "ಬ್ಯಾಡ ಬ್ಯಾಡರೀ," ಎಂದು ನುಡಿದು ಅವನೂ ನಗತೊಡಗಿದ.

ಗೌಡನೂ ಇಸಸ್ಪೆಕ್ಟರೂ ಎದ್ದು ಹೊರಟರು. "ಒಂದ ರೂಪಾಯಿ ಒಂದಾಣೇ," ಎಂದ ಅಂಗಡಿಯವ. ಗೌಡ ಗಿರಿಯನನ್ನು ತೋರಿಸಿ ಹೊಗೆ ಯನ್ನೆಳೆಯುತ್ತ ನಡೆದು ಬಿಟ್ಟ.

"ರೊಕ್ಕ ?" ಅಂದ ಅಂಗಡಿಕಾರ.

"ಅಂ ? ನಾ ಕೊಡಬೇಕs ?" ಎನ್ನುತ್ತ ಗಿರಿಯ ಧೋತರದ ಗಂಟನ್ನು ಬಿಚ್ಚಿದ. ಒಂದು ಸಲದ ಚಹಕ್ಕೆ ಒಂದು ರೂಪಾಯಿ ಒಂದಾಣೆ ! ಚಹಕ್ಕಾಗಿ ಈ ಮೊದಲಿಂದೂ ಅಷ್ಟು ಹಣ ಖರ್ಚು ಮಾಡಿರಲಿಲ್ಲ, ಗಿರಿಯ. ಚಹದ ಚಟವೂ ಅವನಿಗಿರಲಿಲ್ಲ. ಮನೆಯಲ್ಲಿ ಅವರು ಚಹವನ್ನೂ ಮಾಡು ತ್ತಿರಲಿಲ್ಲ. ಅಜ್ಜನಂತೂ ಹುಟ್ಟಿದಂದಿನಿಂದ ಚಹವನ್ನು ಮುಟ್ಟಿರಲಿಲ್ಲ. ಗಿರಿ ಯನೇನೊ ಎಂದಾದರೊಂದು ಸಲ ಅಂಗಡಿಯಲ್ಲಿ ಚಹ ಕುಡಿಯುತ್ತಿದ್ದನಾ ದರೂ ಎರಡಾಣೆಗಳಿಗಿಂತ ಹೆಚ್ಚಾಗಿ ಎಂದೂ ಖರ್ಚು ಮಾಡಿರಲಿಲ್ಲ. ಒಂದು ರೂಪಾಯಿ ಒಂದಾಣೆ ! ಮನೆಯನ್ನು ಅಡವಿರಿಸಿ ಸಾಲ ತೆಗೆದ ಹಣ ! ಇನಸ್ಪೆಕ್ಟರಿಗೂ ತಾನೇಕೆ ಚಹ ಕುಡಿಸಬೇಕೆಂಬುದು ಅವನಿಗೆ ಅರ್ಥವಾಗಲಿಲ್ಲ. "ನಮ್ಮ ಹಣೇಬರಾ" ಎಂದುಕೊಳ್ಳುತ್ತ, ಭಾರವಾದ ಮನಸ್ಸಿನಿಂದ ಹಣ ಎಣಿಸಿಕೊಟ್ಟು ಹೊರಟ.

"ಮೂರು ತಿಕೀಟು ತಗೋಳೋ," ಎಂದ ಗೌಡ.

ಇನಸ್ಪೆಕ್ಟರನಿಗೂ ತಾನೇ ಟಿಕೆಟ್ಟು ತೆಗೆಯಿಸಬೇಕು !

"ಮೂರು ?" ಎಂದು ಕೇಳಿದ, ಗಿರಿಯ.

ಸಿದಗೌಡ ಹುಬ್ಬುಗಂಟಿಕ್ಕಿ— "ಹೂಂ. ಮೂರು," ಎಂದು ಒರಟು ಧ್ವನಿಯಲ್ಲಿ ಹೇಳಿದ.

ರೈಲು ಬಂದಿತು. ಹೊರಟಿತು. ಆ ತಾಲೂಕಿನ ಸ್ಥಳಕ್ಕೆ ಹೋಗು ವವರು ಒಂದು ನಿಲ್ದಾಣದಲ್ಲಿಳಿದು ಮತ್ತೆ ಬಸ್ಸು ಹತ್ತಬೇಕಾಗುವುದು. ಬಸ್ಸಿ ನಲ್ಲೂ ಮೂರು ಟಿಕೆಟ್ಟುಗಳ ಹಣವನ್ನು ಗಿರಿಯನೇ ಕೊಡಬೇಕಾಗಿ ಬಂದಿತು. ತಾಲೂಕಿನ ಸ್ಥಳಕ್ಕೆ ಬಂದಿಳಿದ ತರುವಾಯ ಮತ್ತೊಂದು ಸಲ ಚಹಾಪಾನ ವಾಯಿತು. ಈ ಸಲ ಅವರು ಸಿಹಿ ತಿಂಡಿ ತರಿಸಲಿಲ್ಲ. ಭಜಿ, ಚಹ, ಪಾನ

ಪಟ್ಟಿ ಇಷ್ಟರಿಂದಲೇ ಎದ್ದುಬಿಟ್ಟರು. ಅದರ ಖರ್ಚು ಎಂಟಾಣೆ. ಅರ್ಥಾತ್, ಅದನ್ನೂ ಗಿರಿಯನೇ ಕೊಡಬೇಕಾಯಿತು. ಊರಿಗೆ ಹಿಂದಿರುಗುವ ವರೆಗೂ ಎಲ್ಲ ಖರ್ಚನ್ನೂ ತಾನೇ ವಹಿಸಬೇಕಾಗುವುದೆಂಬುದು ಗಿರಿಯನಿಗಾಗಲೆ ಗೊತ್ತಾಗಿ ಹೋಗಿತ್ತು.

ವಕೀಲ ಮನೆಯಲ್ಲಿರಲಿಲ್ಲ. "ಕೋರ್ಟಿನ ಕಡೆ ಹೋಗಿದ್ದಾರ. ಈಗ ಬಂದಾರು," ಎಂದು ಅವನ ಹೆಂಡತಿ ಹೇಳಿದಳು. ಮೇಜಿನ ಹತ್ತಿರ ಇದ್ದ ಕುರ್ಚಿಯೊಂದರ ಮೇಲೆ ಗೌಡ ಕುಳಿತುಕೊಂಡ. ಕಂಬಳಿಯನ್ನು ನೆಲದ ಮೇಲೊಗೆದು, ಗಿರಿಯ ಅದರ ಮೇಲೆ ಕುಳಿತುಕೊಂಡ.

ಗಿರಿಯನ ಹಣದಲ್ಲಿ ಕೊಂಡ ಸಿಗರೇಟುಗಳಲ್ಲಿ ಇನ್ನೂ ಎರಡು ಉಳಿದಿದ್ದುವು. ಅವುಗಳಲ್ಲೊಂದನ್ನು ಹೊತ್ತಿಸಿ ಸೇದುತ್ತಾ ಗೌಡ ಹೇಳತೊಡಗಿದ:

"ನಮ್ಮ ಸಂಗಾತ ಬಂದರಲ್ಲಾ, ಅವರು ಆ ಸರ್ಕಲ್ ಇನಸ್ಪೇಟರು. ಬಾಳ ಚಲೋ ಮನುಷ್ಯೇರು. ನನಗೂ ಅವರಿಗೂ ಬಾಳ ದೋಸ್ತಿ. ನಿನ್ನ ಹೊಲದ ಸಂಗತಿ ಎಲ್ಲಾ ಅವರಿಗೆ ಹೇಳೀನಿ. ಖಟ್ಲೆ ನಿನ್ನಂಗ ಆಗೂದಕ್ಕ ಅವರೂ ಮದತ್ತು ಮಾಡುತೀನಂತ ಹೇಳ್ಯಾರ."

"ಪಾಳೀ ಠರಾಯಿಸುವವರು ಇವರs ಎನ್ರೀ?"

"ಇವರಲ್ಲ. ಮಾಮಲೇದಾರ್ರು. ಸರಕಲ್ ಸಾಹೇಬರಂದ್ರ ಮಾಮಲೇದಾರ್ರ ಕಾರಕೂನ ಇದ್ದಂಗ. ಸರಕಲ್ ಏನ ಹೇಳಿದ್ರೂ ಮಾಮಲೇದಾರ್ರು ಕೇಳುತಾರ. ನಿನ್ನ ಕೆಲಸ ಹಗುರಾಗತೈತಿ."

ಗಿರಿಯ ಸುಮ್ಮನೆ ಕುಳಿತಿದ್ದ. ಅವನು ಹೇಳುವುದಾದರೂ ಏನನ್ನು?

ಗೌಡ, ವಕೀಲನ ಗುಣಗಾನಕ್ಕಾರಂಭಿಸಿದ:

"ಈ ನಮ್ಮ ವಕೀಲರಂಥಾ ವಕೀಲರು ಜಿಲ್ಲ್ಯಾದಾಗs ಇನ್ನೊಬ್ಬರಿಲ್ಲ ನೋಡೋ ಗಿರಿಯಾ. ಇವರು ವಾದಕ್ಕ ನಿಂತರಂದರ ಜಜ್ಜ್ ಸಾಹೇಬರು ಆ ಅಂತ ಬಾಯಿ ತಗದು ಕೇಳುತಾ ಕುಂತಿರುತಾರ. ಎಂಥಾ ಕಠಿಣ ಖಟ್ಲೇ ಇದ್ದರೂ ಗೆದ್ದು ಕೊಡುತ್ತಾರ ನೋಡು. ಬಾಳ ಶಾಣೇರು........ಬಾಳ ಶಾಣೇರು...."

ಒಳಗಡೆ, ಅಡುಗೆಯ ಮನೆಯಲ್ಲಿ ಕುಳಿತಿದ್ದ ವಕೀಲನ ಪತ್ನಿ ನಗುತ್ತಿದ್ದುದು ಕೇಳಬಂದಿತು, ತನ್ನ ಮಾತು ಆಕೆಗೂ ಕೇಳಿಸಲೆಂದೇ ಗೌಡ, ಬೇಕೆಂ

ತಲೇ ಧ್ವನಿಯನ್ನೇರಿಸಿ ಮಾತನಾಡುತ್ತಿದ್ದ.

ಕೊಟಡಿಯ ಗೋಡೆಗಳಿಗಿದ್ದ ಕನ್ನಡಿಯ ಕಪಾಟುಗಳಲ್ಲಿನ ದೊಡ್ಡ ದೊಡ್ಡ ಪುಸ್ತಕಗಳನ್ನು ತೋರಿಸುತ್ತ ಗೌಡ ಹೇಳಿದ:

" ಎಂಥೆಂಥಾ ದೆವ್ವದಂಥಾ ಪುಸ್ತಕ ಅದಾವು ನೋಡಿದಿಯಾ ಗಿರಿಯಾ. ಅವೆಲ್ಲಾ ದೊಡ್ಡ ದೊಡ್ಡ ಕಾಯ್ದೆಗಳ ಪುಸ್ತಕಗಳಪಾ. ಮತ್ತ ಎಲ್ಲಾ ಇರೂದು ಇಂಗ್ರೇಜಿಯೊಳಗ. ಒಂದೊಂದು ಪುಸ್ತಕಾ ಓದಿ ಮುಗಿಸಬೇಕಾ ದರ ಒಂದೊಂದು ವರ್ಷ ಬೇಕಾಗುತೈತಿ. ನಮ್ಮ ವಕೀಲರು ಇವನ್ನೆಲ್ಲಾ ಓದಿ ಬಾಯಿಪಾಠ ಮಾಡಿಬಿಟ್ಟಿದಾರೆ.... "

ಅಂಥ ದೊಡ್ಡ ದೊಡ್ಡ ಪುಸ್ತಕಗಳನ್ನು ಗಿರಿಯ ಈ ಮೊದಲೆಂದೂ ಕಂಡಿ ರಲಿಲ್ಲ. ಅವುಗಳನ್ನೆಲ್ಲ ಓದಿ ಪಾಠ ಮಾಡಿದ ವಕೀಲರು ಬಹಳ ಬುದ್ಧಿವಂತ ರಾಗಿರಬೇಕೆಂದೇ ಅವನಿಗೆನ್ನಿಸಿತು. ಅವರು ಎಂಥವರಿರುವರೊ, ಅವರೊಂ ದಿಗೆ ಯಾವ ರೀತಿ ಮಾತನಾಡುವುದೋ—ಎಂದೆಲ್ಲ ಯೋಚಿಸುತ್ತಿದ್ದ ಹಾಗೆ ಅವನಿಗೆ ಕೊಂಚ ಭಯವೂ ಆಗದಿರಲಿಲ್ಲ.

ಒಂದು ತಾಸು ಕಳೆದ ತರುವಾಯ ವಕೀಲರ ಸವಾರಿ ಆಗಮಿಸಿತು. ಕುರ್ಚಿಯಲ್ಲೊರಗಿಕೊಂಡಿದ್ದ ಹಾಗೆಯೆ ಗೌಡ " ನಮಸ್ಕಾರರೀ, " ಎಂದ. ಗಿರಿಯ ಗಡಬಡಿಸಿ ಮೇಲಕ್ಕೆದ್ದು, ತಲೆಬಾಗಿಸಿ ಸಲಾಂ ಮಾಡಿದ. ವಿಚಿತ್ರ ವಾಗಿ ನಗುತ್ತಾ ವಕೀಲ ಕೊಟಡಿಯೊಳಕ್ಕೆ ಬಂದ. ಆವನ ದಪ್ಪಗಿನ ದೇಹ ಅತ್ತ ಇತ್ತ ಹೊಯ್ದಾಡುತ್ತಿತ್ತು. ಕೆಂಪು ಗಾಜಿನಂತೆ ಕಾಣುತ್ತಿದ್ದ ಕಣ್ಣು ಗೊಂಬೆಗಳೂ ಅತ್ತಿತ್ತ ತಿರುಗುತ್ತಿದ್ದುವು. ಆತ ಒಳಸೇರುತ್ತಲೂ ಏನೋ ಒಂದು ತರದ ವಾಸನೆ ಕೊಟಡಿಯಲ್ಲೆಲ್ಲ ಹರಡಿದಂತಾಯಿತು. ಗಿರಿಯನ ಮೂಗು ಅದನ್ನು ಒಡನೆಯೆ ಗುರುತಿಸಿತು. ಸೆರೆ....ಸೆರೆಯ ವಾಸನೆ....ಆತ ಆಶ್ಚರ್ಯದಿಂದ ತಲೆಯೆತ್ತಿ ವಕೀಲನ ಮುಖವನ್ನೆ ದಿಟ್ಟಿಸತೊಡಗಿದ. ಹೌದು. ಸೆರೆ ಕುಡಿದವರ ಮುಖವೇ ಅದು. ಇಂಥ ದೊಡ್ಡ ವಕೀಲರು, ಇಂಥ ಪಂಡಿ ತರು. ಇವರೂ ಸೆರೆ ಕುಡಿಯುವವರೇ ? ಭಟ್ಟೀ ಸೆರೆ....ಹಠಾತ್ತಾಗಿ ಗಿರಿ ಯನಿಗೆ ಕಾಮಣ್ಣನ ನೆನಪಾಯಿತು. ಕಾಮಣ್ಣ, ಪುಂಡ, ಯಸನೋವಪ್ಪ, ಭೀಮ, ಶಿವರಾಯಿ.... ವಕೀಲ....

" ಯಾವಾಗ ಬಂದಿ ಗೌಡಾ ? " ಎಂದು ತೊದಲುತ್ತ ಕೇಳಿದ ವಕೀಲ.

" ಒಂದು ಒಂದೂವರಿ ತಾಸಾತು ಬಂದು. ಎಲ್ಲಿ, ಕೋರ್ಟಿಗೆ ಹೋಗಿದ್ದಿರೇನ್ರೀ ವಕೀಲರs ? "

" ಎಲ್ಲೀ ಕೋರ್ಟೋ ? ಒಂದೆರಡು ತಿಂಗಳಿಂದ ಒಂದು ಕೇಸೂ ಸಿಕ್ಕಿಲ್ಲ. ನೀವೆಲ್ಲಾ ನಮ್ಮನ್ನ ಮರತು ಬಿಟ್ಟ ಹಾಗೇ ಕಾಣತದ, " ಎಂದು ನುಡಿದು ವಕೀಲ ಗಿರಿಯನ ಕಡೆ ಹೊರಳಿ, ಇರಿಯುವ ಹೋರಿಯಂತೆ ಅವನನ್ನು ದಿಟ್ಟಿಸುತ್ತ—" ಇವ ಯಾರೋ ? " ಎಂದು ಪ್ರಶ್ನಿಸಿದ.

" ನೀ ಜರಾ ಹೊರಗೆ ಹೋಗಿ ಹಂಗs ತಿರುಗಾಡಿಕೊಂಡ ಬಾರೋ ಗಿರಿಯಾ. ವಕೀಲರಿಗೆ ಎಲ್ಲಾ ಹೇಳುತೀನಿ, " ಎಂದ ಗೌಡ.

ತಾನೇಕೆ ಹೊರಗೆ ಹೋಗಬೇಕೆಂಬುದು ತಿಳಿಯಲಿಲ್ಲ ಗಿರಿಯನಿಗೆ. ತನ್ನೆದುರಿಗೆ ಹೇಳಬಾರದಂಥದೇನನ್ನು ಗೌಡ ಹೇಳಲಿರುವನೊ ಯಾರು ಬಲ್ಲರು. ಇದರಲ್ಲೇನು ಮೋಸವಿದೆಯೊ....

ಆತ ಎದ್ದು ಹೋದ ಬಳಿಕ ವಕೀಲ ಮತ್ತೆ ತನ್ನ ವಿಚಿತ್ರ ನಗೆ ಬೀರುತ್ತ ಕೇಳಿದ:

" ಏನರೆ ಒಂದು ಕೇಸು ತಂದೀಯೇನೋ ಇಂದಾದರೂ ? "

" ಹೂಂ. ಅದಕ್ಕs ಬಂದೀನಿ. "

" ಹ....ಹ....ಬಹಳ ಉಪಕಾರ ಆಯ್ತು. ನಿನ್ನ ದಾರಿಯನ್ನೇ ಕಾಯುತಿದ್ದೆ ನಾನು. ಇಷ್ಟು ದಿನ ಏನೂ ಸಿಗಲಿಲ್ಲೇನೋ ? "

" ಊರಾಗ ಏನಾರೆ ತಂಟೆ ಇದ್ದರ ಕೇಸು ಸಿಕ್ಯಾವು. ಬಾಳ ದಿವಸಾತು, ಯಾರೂ ಬಡಿದಾಡಿಲ್ಲ, ಹೊಡಿದಾಡಿಲ್ಲ. ಇನ್ನು ಕೇಸು ಎಲ್ಲಿಂದ ಬಂದಾವು ? "

" ತಾವಾಗೇ ಎಲ್ಲಿಂದ ಮುಗಿಲಿನಿಂದ ಬೀಳುತಾವೇನೋ ಕೇಸು ? ಬಡಿದಾಡುವ ಹುರುಪು ಮಂದಿಗಿಲ್ಲದಿದ್ದರೆ ನಾವೇ ಹುಟ್ಟಿಸಬೇಕು. ಗೌಡರು ಕುಲಕರ್ಣೇರು ನೀವು ಇರೂದಾದ್ರೂ ಯಾತಕ್ಕೆ ? "

" ಏನಾರೆ ಜಗಳ ಏಳೂದನ್ನs ನಾನೂ ಕಾದುಕೊಂಡಿರುತೀನಿ ವಕೀಲರs. ಆದರs ಏನ ಮಾಡೂದು, ಮಂದೀ ಮನಸು ಬಲೆ ವಿಚಿತ್ರಾ. ತಮ್ಮ ಲಹರೀ ಬಂದಾಗ ಏಳವರು ಅವರು, ಹುರ್ರ್ಯ ಅಂತ ಒದರಾಡಿ ಬಡಿದಾಡಿ ಗದ್ದಲಾ ಮಾಡವರು. ಮತ್ತ ಸುಮ್ಮನಾದರಂದರ ವರ್ಷಾನುವರ್ಷ ತಣ್ಣಗs

ಇರುತಾರ ನೋಡ್ರಿ ಕುಂಯಿ ಅನ್ನದs. "

" ಹಳ್ಳಿ ಮಂದಿಯೆಲ್ಲಾ ಹೀಗೆ ಸಂಭಾವಿತರಾದರೆ ನಾವು ವಕೀಲರು ಬದುಕುವುದಾದರೂ ಹ್ಯಾಗಪಾ? ಇಂಥಾ ಶಹರದ ಊರೊಳಗೆ ನಮ್ಮ ಖರ್ಚೆಲ್ಲಾ ಹ್ಯಾಗೆ ನಡೆಯಬೇಕು ಅಂ? "

" ಹೂಂ. ಏನ ಮಾಡೂದೈತಿ ವಕೀಲರs ? ಬಡಿದಾಟ ಕಡಿಮಿ ಆದ ಹಾಂಗ ವಕೀಲರು ಬೆಳೀಲಿಕ್ಕೆ ಹತ್ತಿದಾರs. ಬೆಳೀ ಬರೂದು ಸ್ವಲ್ಪ, ಕೊಯ್ಯು ವವರು ಬಾಳ ಮಂದಿ ಆದಂಗ ಆಗ್ಯೆತಿ. "

" ನೀನು ಹೇಳುವುದೂ ನಿಜ. ಈಗೇನಪಾ, ಓಣಿ ಓಣಿಗೆ ಮನೆಮನೆಗೆ ವಕೀಲರೇ ವಕೀಲರು. ನೆಟ್ಟಗೆ ನಾಲ್ಕು ಶಬ್ದ ಇಂಗ್ಲೀಷು ಆಡಲು ತಿಳಿಯದ ಹುಡುಗರೆಲ್ಲಾ ವಕೀಲರಾಗಲಿಕ್ಕೆ ಹತ್ತಿದಾರ. ಅವರಲ್ಲೂ ಈ ಲಾ ಕಾಲೇಜು ಗಳು ಬೇರೆ. ಪ್ರತಿವರ್ಷವೂ ಮುನ್ನೂರು ನಾಲ್ಕು ನೂರು ವಕೀಲರನ್ನ ತಯಾರು ಮಾಡುತಾ ಇವೆ. ಇವರಿಗೆಲ್ಲಾ ಎಲ್ಲಿಂದ ಕೇಸು ಸಿಗಬೇಕು ಹೇಳು. ಈ ಸ್ಪರ್ಧೆಯಿಂದ ನಮ್ಮಂಥವರಿಗೂ ಹೊಡೆತ ಬಿತ್ತು. ಅಂ, ಬಹಳ ಕಷ್ಟ.... ಬಹಳ ಕಷ್ಟ.... "

ಗಿರಿಯನ ಹೊಲದ ವಿಷಯವನ್ನು ಗೌಡ ವಿವರಿಸತೊಡಗಿದ. ಕುರ್ಚಿಯ ಭುಜದ ಮೇಲೆ ತಲೆಯನ್ನೊರಗಿಸಿ ಕೇಳುತ್ತಲಿದ್ದ ವಕೀಲ, ನಡುವೆಯೆ ಗೌಡನ ಮಾತನ್ನು ತಡೆದು, " ಗೊತ್ತಾಯಿತು....ಗೊತ್ತಾಯಿತು........ ಫೀ ಎಷ್ಟು ತಂದಿದ್ದಾನ ? " ಎಂದು ಕೇಳಿದ.

" ಎಷ್ಟು ಕೊಡಬೇಕಂತೀರಿ ? "

" ನೂರು ? "

" ಬಾಳ ಕಡಮಿ ಹೇಳಿದಿರಲ್ಲಾ ವಕೀಲರs ? ಗಿರಿಯ ಪೂರಾ ಮಳ್ಳ ಅದಾನ. ಕೋರ್ಟು ಕಚೇರಿ ಅಂದರ ಏನೇನೂ ತಿಳಿಯೂದಿಲ್ಲ ಅವಗ. ಇದೇ ಮೊದಲನೇ ಸಾರಿ ಅವ ಖಟ್ಲೇಕ್ಕ ತಯಾರಾದದ್ದು. "

ವಕೀಲ ಗಹಗಹಿಸಿ ನಕ್ಕ: " ಹಾಗಾದರೇನೋ ? ನಿನ್ನ ಮನಸ್ಸು ಬಂದಷ್ಟು ಬಿಚ್ಚಿಸು. ನಿನ್ನ ಕಮೀಶನ್ ಅಂತೂ ಇದ್ದೇ ಇದೆಯಲ್ಲ ? "

ಗೌಡ ಮನಸ್ಸಿನಲ್ಲೇ ಲೆಕ್ಕ ಹಾಕತೊಡಗಿದ. ಫೀಜಿನಾಗಿ ಗಿರಿಯ ಸಿಂದ ನೂರೈವತ್ತು ರುಪಾಯಿಗಳನ್ನು ಕಿತ್ತುಕೊಳ್ಳಬಹುದು. ಮೂರರಲ್ಲೊಂದು

ಪಾಲು ಕಮೀಶನ್. ಅಂದರೆ, ಎಷ್ಟು ಬಂದಂತಾಯಿತು ತನಗೆ? ಐವತ್ತು ರೂಪಾಯಿ....ಎಷ್ಟೋ ದಿನಗಳಿಂದ ಒಂದು ಪೈ ಲಾಭವೂ ಸಿಕ್ಕಿಲ್ಲ. ಇಂದು....

"ನೂರೈವತ್ತ ರುಪಾಯಿ ಕೊಡಿಸುತೀನಿ ವಕೀಲರs."

ವಕೀಲರ ದುಂಡು ಮುಖ, ಸಂತೋಷದಿಂದ ಇನ್ನೂ ದುಂಡಗಾಯಿತು. "ಗುಡ್, ವೆರಿ ಗುಡ್," ಎಂದು ಪುಟುಪುಟಿಸುತ್ತ ಆತ ಧ್ವನಿಯನ್ನೆತ್ತರಿಸಿ, ಒಳಗಿದ್ದ ಹೆಂಡತಿಯನ್ನುದ್ದೇಶಿಸಿ— "ನಮ್ಮ ಗೌಡರಿಗೆ ಸ್ಟ್ರಾಂಗ್ ಕಾಫಿ ಮಾಡಿ ಕೊಡು ಮಾಲೀ," ಎಂದು ಕೂಗಿ ಹೇಳಿದ.

ಒಂದು ತಾಸಿನ ತರುವಾಯ ಗಿರಿಯ ಬಂದ. ಗೌಡನ ಹೇಳಿಕೆಯ ಮೇರೆಗೆ ನೂರೈವತ್ತು ರೂಪಾಯಿಗಳನ್ನು ತೆಗೆದು ವಕೀಲನ ಕೈಗೆ ಕೊಟ್ಟದ್ದಾಯಿತು. ಅಷ್ಟರಲ್ಲಿ ವಕೀಲ ಅರ್ಜಿ ಬರೆದು ಸಿದ್ಧಗೊಳಿಸಿದ್ದ. ಅದಕ್ಕೆ ಎಡಗೈ ಹೆಬ್ಬೆರಳಿನ ಗುರುತು ಹಾಕಿದುದಾಯಿತು.

"ನಿನ್ನ ಕೆಲಸ ಮುಗಿದಂಗಾತು. ನೀ ನಡೀ ಊರಿಗೆ. ನಾ ನಾಳೆ ಬರ್ತೀನಿ," ಎಂದ ಗೌಡ.

ಕಂಬಳಿಯನ್ನು ಹೆಗಲ ಮೇಲೆ ಚೆಲ್ಲಿಕೊಂಡು ಗಿರಿಯ ಎದ್ದು ನಿಂತ.

"ಸಂಜೀಕ ಊಟದ ಖರ್ಚಿಗೆ, ಬೆಳಗಿನಾಗ ಚಹದ ಖರ್ಚಿಗೆ, ಆವ್ಯಾಲ ಮೋಟಾರು ಮತ್ತು ರೇಲ ಖರ್ಚಿಗೆ ರೊಕ್ಕ ಬೇಕೋ ಬ್ಯಾಡೋ? ನಡೀ ಅಂದ ಕೂಡಲೆ ಹೊಂಟs ಬಿಟ್ಟೆಲ್ಲಾ ಹಂಗs!" ಎಂದ ಗೌಡ.

"ಎಷ್ಟ ಕೊಡಲಿ ಗೌಡರs?" ಎಂದ ಗಿರಿಯ.

"ತತಾ ಒಂದೈದ ರೂಪಾಯಿ."

ಗಿರಿಯ ಐದು ರೂಪಾಯಿ ತೆಗೆದುಕೊಟ್ಟ.

"ನಡೀ ಹಂಗಾದರ," ಎಂದ ಗೌಡ.

"ಹೋಗುತೀನಿ ವಕೀಲಸಾಬರs" ಎಂದು ಹೇಳಿ ಅವನಿಗೊಂದು ನಮಸ್ಕಾರ ಹೊಡೆದು ಹೊರಟೇಬಿಟ್ಟ ಗಿರಿಯ.

ಬಸ್‌ಸ್ಟ್ಯಾಂಡಿನಲ್ಲಿ ಜನರ ಗದ್ದಲ ವಿಶೇಷವಾಗಿತ್ತು. ನಿಲ್ದಾಣಕ್ಕೆ ಹೋಗುವ ಬಸ್ಸು ಇನ್ನೂ ಬಂದಿರಲಿಲ್ಲ. ಅದು ಬರುವುದು ಯಾವಾಗ— ಎಂಬುದನ್ನು ಯಾರಿಂದಲಾದರೂ ತಿಳದುಕೊಳ್ಳೋಣವೆಂದು ಗಿರಿಯ ಅತ್ತಿತ್ತ ನೋಡುತ್ತಿದ್ದಾಗ ರಾಮಾಪುರದ ವರ್ತಕರು ಚೆನ್ನಯ್ಯನವರು ಅಲ್ಲಿ ನಿಂತು

ಕೊಂಡಿದ್ದುದು ಕಾಣಿಸಿತು. ಅರವತ್ತೈದು ಎಪ್ಪತ್ತು ವರ್ಷದ ವೃದ್ಧರು ಚನ್ನಯ್ಯನವರು. ರಾಮಾಪುರದಲ್ಲಿ ಅವರದು ದೊಡ್ಡ ವ್ಯಾಪಾರ. ಸೇಂಗಾ ಹತ್ತಿ ಮೊದಲಾದವುಗಳನ್ನು ರೈತರಿಂದ ಕೊಂಡುಕೊಂಡು ಮುಂಬಯಿಗೆ ಕಳಿಸುವ ವ್ಯವಹಾರ. ಸೇಂಗಾಕಾಯಿ ಒಡೆದು ಕಾಳುಗಳನ್ನು ಬೇರ್ಪಡಿಸುವ ಕಾರಖಾನೆಯನ್ನೂ ನಡಸುತ್ತಿದ್ದರು. ಸೇಂಗಾವನ್ನೊ ಹತ್ತಿಯನ್ನೊ ಬೆಳೆದಾಗಲೆಲ್ಲ ಗಿರಿಯ ಅವರಲ್ಲಿಗೇ ಮಾಲು ಒಯ್ದು ಮಾರಾಟ ಮಾಡುತ್ತಿದ್ದ. ಅಂತೆಯೆ ಅವನಿಗೆ ಚನ್ನಯ್ಯನವರ ಪರಿಚಯ ಚೆನ್ನಾಗಿತ್ತು.

" ನಮಸ್ಕಾರರೀ ಅಣ್ಣಾವರs. "

" ಯಾಕಪಾ, ಯಾವಾಗ ಬಂದಿದ್ದಿ ? "

" ಹರೀವತ್ತನ್ಯಾಗ ಬಂದಿದ್ದಿನಿರಿ. "

" ಇಲ್ಲೇನ ಕೆಲಸ ಇತ್ತು ? "

ತಾನು ಬಂದುವರ ಉದ್ದೇಶವನ್ನು ಆತ ಸ್ವಲ್ಪದರಲ್ಲಿಯೆ ವಿವರಿಸಿದ.

" ವಕೀಲಿಪತ್ರ ಆಯಿತೇನ ? ಯಾವ ವಕೀಲರು ? "

ವಕೀಲರ ಹೆಸರೇನೆಂಬುದು ಹೇಗೆ ಗೂತ್ತಾಗಬೇಕು ಗಿರಿಯನಿಗೆ ? " ನಂಗೊತ್ತಿಲ್ಲ, " ವೆಂದು ಆತ ಹೇಳುತ್ತಲೂ ಚೆನ್ನಯ್ಯನವರು ಕೇಳಿದರು: " ನೋಡೂದಕ್ಕ ಹೆಂಗದಾರವರು ? "

" ದಪ್ಪಗ ಗಿಡ್ಡಕ ಅದಾರು. ದೊಡ್ಡ ತಲಿ, ಡವ್ಮ್ರ ಮೂಗು. "

ಚನ್ನಯ್ಯನವರ ತುಟಿಗಳ ಮೇಲೆ ನಗೆಯ ನೆರಳೊಂದು ಓಡಿಯಾಡಿತು. " ಗೊತ್ತಾತು....ಗೊತ್ತಾತು. ಕರೀಗೌಡರ ವಕೀಲ....ಹೂಂ. ಎಷ್ಟು ಕೊಟ್ಟಿ ಫೀ ? "

ನೂರೈವತ್ತು ರೂಪಾಯಿ ಎಂಮ ಆತ ಹೇಳುತ್ತಲೂ ಅವರು ಹುಬ್ಬುಗಳನ್ನೇರಿಸಿ— " ಪಾಳೇ ಠರಾಯಿಸುವ ಕೆಲಸಕ್ಕ ನೂರೈವತ್ತು ಯಾತಕ್ಕೋ? ಮೂವತ್ತು ರೂಪಾಯಿ ಆದರ ಬಹಳ ಆಯ್ತು. ಆ ಗೌಡ ಆ ವಕೀಲ ಇಬ್ಬರೂ ಕೂಡಿ ಚಲೋ ಫಸಾಯಿಸಿದಾರ ನಿನ್ನ, " ಎಂದರು.

" ಫಸಾಯಿಸಿದಾರು ? " ಗಿರಿಯ ಗಾಬರಿಗೊಂಡು ಪ್ರಶ್ನಿಸಿದ.

" ಚಲೋ ಕೂದಲಿಂದ ಕುತ್ತಿಗೀ ಕೊಯ್ದಾರ. ನೂರಿಪ್ಪತ್ತು ರೂಪಾಯಿ ಅನ್ಯಾಯವಾಗಿ ಕಳಕೊಂಡು ಕುಂತಿ. ಆ ಗೌಡ ದೊಡ್ಡ ಲಂಚಬಡಕ

ಅನ್ನೂದು ನಾನೂ ಕೇಳೇನಿ. ಅವನ ಸಂಗಾತ ಯಾಕ ಹೋದಿ? ಬ್ಯಾರೆ ಯಾರೂ ಸಿಗಲಿಲ್ಲೇನ ನಿನಗ ?"

"ಬ್ಯಾರೆ ಯಾರದಾರರೀ ನಮಗ ?" ಗಿರಿಯನ ಮುಖದಲ್ಲಿ ಅಸಹಾಯತೆ ತುಂಬಿ ಬಂದಿತ್ತು.

ತಮ್ಮ ಕರುಣಾಪೂರ್ಣ ದೃಷ್ಟಿಯನ್ನು ಅವನ ಮುಖದ ಮೇಲಾಡಿಸುತ್ತ ಚನ್ನಯ್ಯನವರು ತಮ್ಮಷ್ಟಕ್ಕೇ ಹೇಳಿಕೊಳ್ಳುವಂತೆ ಉದ್ಗಾರ ತೆಗೆದರು:

"ಎಂಥಾ ಮೋಸ....ಪಾಪ, ಎಂಥಾ ಮೋಸ...."

ಅವರ ಆ ಉದ್ಗಾರ ಮತ್ತೆ ಮತ್ತೆ ಗಿರಿಯನ ಕಿವಿಗಳಲ್ಲಿ ಡುಮುದುಮಿಸ ತೊಡಗಿತು ಬಸ್ಸು ಬಂತು, ಅದನ್ನೇರಿ ಕುಳಿತುದಾಯಿತು ಬಸ್ಸು ಹೊರಟಿತು. ಅದರ ಚಕ್ರಗಳು ಒಂದೇಸಮನೆ "ಎಂಥಾ ಮೋಸ........ಎಂಥಾ ಮೋಸ....ಎಂಥಾ ಮೋಸ" ಎಂದು ಕೂಗಿದಂತೆ ಕೇಳಿಸತೊಡಗಿತು. ರೈಲ್ವೆ ಸಿಲ್ದಾಣ. ರೈಲು. ಊರ ಕಡೆ ಹೊರಟದ್ದೂ ಆಯಿತು. ರೈಲಿನ ಚಕ್ರಗಳೂ ಅದೇ ಉದ್ಗಾರ ತೆಗೆಯುತಿದ್ದ ಹಾಗೆ ಭಾಸವಾಯಿತು. "ಎಂಥಾ ಮೋಸ....ಎಂಥಾ ಮೋಸ....ಎಂಥಾ ಮೋಸ...."

ಊರಿಗೆ ಬಂದುದಾಯಿತು. ಮನೆ ಸೇರಿದುದೂ ಆಯಿತು.

"ಖಟ್ಲೆ ಹಾಕಿ ಬಂದಿಯೇನೋ ?"

ಅಜ್ಜನ ಪ್ರಶ್ನೆಯೆ ಅರ್ಥವಾಗಲಿಲ್ಲ ಗಿರಿಯನಿಗೆ. ಗೋಡೆಗೊರಗಿ ಕುಳಿತುಕೊಂಡು, ಮೊಳಕಾಲುಗಳಲ್ಲಿ ತಲೆಹಾಕಿ ಆತ ಹಸುಮಗುವಿನಂತೆ ರೋದಿಸತೊಡಗಿದ. "ಎಂಥಾ ಮೋಸ....ಎಂಥಾ ಮೋಸ...." ಎಂದು ಆ ಮನೆಯೂ ಮೂಕವಾಗಿ ರೋದಿಸುತ್ತಿದ್ದ ಹಾಗೆ ಅವನಿಗೆ ಭಾಸವಾಗುತಿತ್ತು.

## ಹತ್ತು

ದಿನಗಳುರಿಳಿದ ಹಾಗೆ ಭೀಮಪ್ಪನ ಸ್ವಭಾವ ಹೆಚ್ಚುಹೆಚ್ಚು ಕ್ರೂರವಾಗ ತೊಡಗಿತ್ತು. ಧ್ವನಿ ಕರ್ಕಶವಾಗತೊಡಗಿತ್ತು. ಮೊದಲು ತಾಳ್ಮೆಯ

ಮೂರ್ತಿಯಂತಿದ್ದ ಆತ ಈಚೆಗೆ ಕ್ಷಣಕ್ಷಣಕ್ಕೂ ಸಿಟ್ಟಿನಿಂದ ಸಿಡಿಯತೊಡಗಿದ್ದ. ಪ್ರತಿನಿತ್ಯವೂ ಯಾವುದಾದರೊಂದು ನೆವದಿಂದ ಹೆಂಡತಿಯನ್ನು ಒಳಿತಾಗಿ ಥಳಿಸುವುದು, ಅವಳು ಕಂಬನಿಗರೆಯುತ್ತ ಬಿದ್ದುದನ್ನು ಕಂಡು ಕ್ರೂರವಾಗಿ ನಗುವುದು, ಮನೆ ಬಿಟ್ಟು ಬಂದು, ಬಸವಾಣಿಯ ಚಹದಂಗಡಿಯಲ್ಲಾಗಲಿ, ಕಾಮಣ್ಣನ ಮನೆಯಲ್ಲಾಗಲಿ ಕುಳಿತುಕೊಂಡು, ಬಾಯಿಗೆ ಬಂದ ಶಬ್ದಗಳನ್ನು ಕಿರಿಚುವುದು–ಅವನ ನಿತ್ಯಕ್ರಮವಾದಂತಾಗಿತ್ತು. ಸಿದ್ದವ್ವ ನೆಲದ ಮೇಲೆ ಬಿದ್ದುಕೊಂಡಿದ್ದ ಹಾಗೆ, ತನ್ನ ಗಂಡ ಈಚೆಗೆ ಹೀಗೇಕಾಗಿದಾನೆ–ಎಂದು ಯೋಚಿಸುವಳು. ಮುದುಕಿಯ ಆಸ್ತಿ ಕೈಗೆ ಬಂದುದರಿಂದ ಹಾಗಾಗಿರಬಹುದೇ—ಎಂದರೆ, ಹಾಗೆ ಅಕಸ್ಮಾತ್ತಾಗಿ ಎಷ್ಟು ಜನರು ಹಣವಂತರಾಗುವುದಿಲ್ಲ? ಅವರೆಲ್ಲಾ ತನ್ನ ಗಂಡನಂತೆ ಆಗುವರೇ ? ಛೆ. ಅವನ ತಲೆಯಲ್ಲಿ ಏನೋ ದೆವ್ವ ಹೊಕ್ಕಂತಿದೆ—ಎಂದುಕೊಳ್ಳುವಳು. ಅಡುಗೆಯಲ್ಲಾಗಲಿ, ಇನ್ನಿತರ ಮನೆಗೆಲಸಗಳಲ್ಲಾಗಲಿ ಕೊಂಚವೂ ದೋಷ ಕಾಣಿಸದಂತೆ ಶ್ರಮಿಸುವಳು. ಆದರೂ ಭೀಮಪ್ಪ ಯಾವುದೊಂದು ತಪ್ಪು ಕಂಡುಹಿಡಿದು ಅವಳನ್ನು ಬಡಿಯುವುದು ತಪ್ಪುತ್ತಿರಲಿಲ್ಲ. ವಯಸ್ಕ ಮಕ್ಕಳ ತಾಯಿಯಾದ ಅವಳನ್ನು ಗಂಡ ಬಡಿಯುತ್ತಿದ್ದುದನ್ನು ಕಂಡು ನೆರಹೊರೆಯವರು ನಗುತ್ತಿದ್ದರು. ಭೀಮಪ್ಪನಿಗೆ ಮಾತ್ರ ಯಾವುದರ ಕಡೆಗೂ ಗಮನವಿರಲಿಲ್ಲ.

ದಿನವೂ ಬೆಳಿಗ್ಗೆ ಎದ್ದೊಡನೆ ಆತ ಚಹ ಕುಡಿಯುವುದಕ್ಕಾಗಿ ಬಸವಾಣಿಯ ಅಂಗಡಿಗೆ ಹೋಗುವುದನ್ನು ಅಭ್ಯಾಸ ಮಾಡಿಕೊಂಡಿದ್ದ. ಮುದುಕಿ ಮೃತಪಟ್ಟ ಮರುದಿನ ಆತ, ಎಂದಿನಂತೆ ತಾಬಾಣದಲ್ಲಿ ತುಂಬಿದ್ದ ಬೆಲ್ಲದ ಚಹ ಕುಡಿಯುತ್ತ ಕುಳಿತಿದ್ದಾಗ, ಚಹದಲ್ಲಿ ಏನೋ ಕಾಣಿಸಿದಂತೆ ಭಾಸವಾಗಿತ್ತು. ಆದರೊಡನೆಯೆ, ಮುದುಕಿಯ “ ಅಂಽಯ್....ಫೂಅಂಽಯ್........ ಅಂಽಯ್ ” ಎಂಬ ನರಳುವಿಕೆ ಅವನ ಕಿವಿಗಳಲ್ಲಿ ದುಮುದುಮಿಸಿದಂತಾಗಿತ್ತು. ಒಂದು ಗುಟುಕು ಚಹ ಕುಡಿಯುವಷ್ಟರಲ್ಲಿ ಅವನ ಕೈಗಳೆರಡೂ ಕಂಪಿಸತೊಡಗಿದ್ದುವು. ಹಿಡಿತ ತಪ್ಪಿ, ತಾಬಾಣ ಕೆಳಕ್ಕೆ ಬಿದ್ದುಬಿಟ್ಟಿತ್ತು. ಸೇವಿಸಿದ್ದ ಗುಟುಕು ಚಹ ಎದೆಯನ್ನು ಸುಡುತ್ತ ಹೊಟ್ಟೆಯಲ್ಲಿ ಹೊಕ್ಕಂತಾಗಿತ್ತು. ಗಾಬರಿಯಿಂದ ದೇಹವೆಲ್ಲವೂ ನಡುಗಿತ್ತು. ಎಂದೂ ವಾಂತಿ ಮಾಡಿಕೊಳ್ಳದಿದ್ದ ಭೀಮಪ್ಪ ಅಂದು ವಾಂತಿ ಮಾಡಿಕೊಂಡಿದ್ದ. ಒಂದೆರಡು ದಿನಗಳ

ವರೆಗೆ ಅವನ ಮೈಯಲ್ಲಿ ಜ್ವರವೂ ಕಾಯುತ್ತಿತ್ತು. ಅಂದಿನಿಂದ ಮನೆಯಲ್ಲಿ ಚಹ ಕುಡಿಯುವುದನ್ನೇ ಬಿಟ್ಟುಬಿಟ್ಟಿದ್ದ ಭೀಮಪ್ಪ, ಅಂದಿನಿಂದಲೇ ಹೆಂಡತಿಯನ್ನು ಥಳಿಸುವುದನ್ನು ಮೊದಲು ಮಾಡಿದ್ದ. "ಇದೇನ ಚಾನೋ ಮುಸುರೀ ನೀರೋ, ಹೊಲಸ ರಂಡೆ, ಇಂಥಾದ್ದೆಲ್ಲಾ ಕುಡಿಸಿ ನನ್ನ ಲಗೂ ತೀರಿಸಿ ಬಿಡಬೇಕಂತ ಮಾಡೀಯೇನ ?" ಎಂದು ಅವಳನ್ನು ಗದರಿಸಿದ್ದ. ಬೈಗಳು, ಬಡಿತ ಎಲ್ಲವೂ ಅಂದಿನಿಂದಲೇ ಪ್ರಾರಂಭವಾಗಿತ್ತು.

ಬೆಳಗಿನಿಂದ ಮಧ್ಯಾಹ್ನದ ವರೆಗೆ ಬಸವಾಣಿಯ ಚಹದಂಗಡಿ, ಇಲ್ಲವೆ ಕಾಮಣ್ಣನ ಮನೆ. ಅನಂತರ ಮನೆಗೆ ಬಂದು ಊಟ ಮಾಡಿ ಮತ್ತೆ ಹೊರಕ್ಕೆ ಹೊರಡುತ್ತಿದ್ದ. ಕಾಮಣ್ಣ ಊರಲ್ಲಿದ್ದ ದಿನ ಅವನೊಂದಿಗೆ ಇಸ್ಪೀಟಾಟ ಆಡುತ್ತ ಹೊತ್ತು ಕಳೆಯುತ್ತಿದ್ದ. ಆತನಿಲ್ಲದ ದಿನ ಬಸವಾಣಿಯ ಅಂಗಡಿಗೆ ಹೋಗಿ ಒಂದು ಬೆಂಚಿನ ಮೇಲೆ ಬಿದ್ದುಕೊಂಡು ಶಿವರಾಯಿಯೊಂದಿಗೆ ಹರಟುತ್ತ ವೇಳೆಗಳೆಯುತ್ತಿದ್ದ. ಸೂರ್ಯ ಮುಳುಗುವ ವೇಳೆಗೆ ನಾಲ್ಕೈದು ಜನ ಸೇರಿಕೊಂಡು ಬಿದಿರುಮೆಳೆಗೆ ಹೋಗುತ್ತಿದ್ದರು. ಅಷ್ಟರೊಳಗಾಗಿ ಯಸನೋವಪ್ಪ ಸೆರೆಯ ಗಡಿಗೆ ತಂದು ಅಲ್ಲಿ ಸಿದ್ಧವಾಗಿರುತ್ತಿದ್ದ. ರಾತ್ರಿಯಾಗುವ ವರೆಗೂ ಕುಡಿತ. ಗಡಿಗೆಯಲ್ಲಿನ ಸೆರೆಯೆಲ್ಲಾ ಮುಗಿದ ಬಳಿಕ, ಯಸನೋವಪ್ಪ ಎದ್ದು ಹೊರಟಾಗಲೇ ಭೀಮಪ್ಪನೂ ಹೊರಡುತ್ತಿದ್ದ. ಒಂದೊಂದು ಸಲ ಆತ ಮನೆಗೆ ಬರಬೇಕಾದರೆ ಮಧ್ಯರಾತ್ರಿಯಾಗುತ್ತಿತ್ತು. ಓಣಿಯನ್ನೆಲ್ಲ ಎಚ್ಚರಿಸುವಂತೆ ಕೂಗಾಡುತ್ತ ಬಂದು ಹೆಂಡತಿಯನ್ನು ಅಶ್ಲೀಲವಾಗಿ ಬಯ್ಯುತ್ತ ಪಡಸಾಲೆಯಲ್ಲಿ ಬಿದ್ದುಕೊಳ್ಳುತ್ತಿದ್ದ. ರಾತ್ರೆ ಊಟ ಮಾಡುವುದನ್ನೂ ಆತ ಎಂದೋ ಬಿಟ್ಟಂತಾಗಿತ್ತು.

ಒಂದೊಂದು ದಿನ, ಚಹದಂಗಡಿಯಲ್ಲಿ ಕುಳಿತಿದ್ದಾಗ, ಬೀದಿಯಲ್ಲಿ ಗೌಡನ ಪಕ್ಷದ ಜನರಲ್ಲಿ ಯಾರೊಬ್ಬರು ಹೊರಟಿದ್ದುದನ್ನು ಕಂಡು, ಮೀಸೆಯನ್ನು ಹುರಿಗೊಳಿಸುತ್ತ ಶಿವರಾಯಿಯ ಕಡೆ ತಿರುಗಿ ಅಹಂಕಾರಪೂರಿತ ಧ್ವನಿಯಲ್ಲಿ ಹೇಳುತ್ತಿದ್ದ: "ಭೀಮಸೇನ ಅರ್ಜುನರಂಥಾ ಗಂಡುಮಕ್ಕಳನ ಹಡದೀನಿ. ಊರಾಗ ಗೂಳಿ ಬಿಟ್ಟಂಗ ಅವರನ್ನ ಬಿಟ್ಟೇನಿ. ಹೆಂಡರಿಗೆ ಗಟ್ಟಿ ಬೀಜ ಬೇಕಾದವರು ಕರಕೊಂಡ್ಹೋಗಲಿ ನನ್ನ ಭೀಮಾರ್ಜುನರನ್ನ. ಯಾಕೋ ಶಿವರಾಯಿ ?"

" ಭೇಶ್ ಮಾತೋ ಭೀಮಣ್ಣಾ. ಊರಾಗೆಲ್ಲಾ ಡಂಗುರಾ ಸಾರಿಸ ಬೇಕು ನೋಡು ಡಂಗುರಾ.... " ಎನ್ನುತ್ತಿದ್ದ ಶಿವರಾಯಿ.

ಎದುರಿಗಿದ್ದ ಬಾವಿಯ ಮೇಲೆ ನೀರು ಸೇದುತ್ತ ನಿಂತ ಹೆಂಗುಸರು ಅವರ ಮಾತು ಕೇಳಿ, ಸಂತಾಪದಿಂದಲೂ ಲಜ್ಜೆಯಿಂದಲೂ ಕುದಿಯುತ್ತ, ಮೈತುಂಬಾ ಸೆರಗು ಹೊದೆದುಕೊಂಡು ಬೇಗ ಬೇಗ ಕೊಡ ಹೊತ್ತುಕೊಂಡು ಅಲ್ಲಿಂದ ಹೊರಟು ಹೋಗುವರು. ಆ ಅವಹೇಳನಕಾರಕ ನುಡಿಗಳನ್ನು ಕೇಳಿ ಗೌಡನ ಪಕ್ಷದ ಗರಡಿಯಾಳುಗಳೆಲ್ಲ ಭೀಕರವಾದ ಕೋಪದಿಂದ ಕನಲಿದ್ದರಾ ದರೂ, ಭೀಮನಿಗೆ ಕೈಹಚ್ಚಬಾರದೆಂದು ಗೌಡ ಆಜ್ಞೆ ವಿಧಿಸಿದ್ದನಾದುದರಿಂದ ಅವರು ಒಳಗೊಳಗೇ ತಳಮಳಿಸುತ್ತ ತೆಪ್ಪಗಿರಬೇಕಾಗಿ ಬಂದಿತ್ತು.

" ಇನ್ನ ಅವನೂ ಅವನ ಪುಂಡರೂ ನಮ್ಮ ಹೆಂಗಸರ ಮ್ಯಾಲ ಕೈ ಹಾಕುವದಷ್ಟ ಉಳಿದೈತಿ. ಅಲ್ಲೀತನಕಾ ಸುಮ್ಮನಿರಬೇಕಂತೀಯೇನ ? ನಾವೆಲ್ಲಾ ಏನ ಬಳೀ ಇಟ್ಟೀವೋ ಏನ ? " ಎಂದು ವೀರಪ್ಪ ಪೈಲವಾನ ಕೇಳಿ ದಾಗ ಗೌಡ ಅವನನ್ನು ಶಾಂತಗೊಳಿಸುತ್ತ ಹೇಳಿದ್ದ: " ತಾಳಿದವನು ಬಾಳಿ ಯಾನು ವೀರಾ. ಅವರೇನ ಒದರಾಡೂದು ಒದರಾಡಿಕೊಳ್ಳಲೀಳ. ನಾವಾಗೇ ಅವರ ಮ್ಯಾಲ ಕೈಮಾಡೂದು ಬ್ಯಾಡ. ನಾವು ಅವರ ಮ್ಯಾಲ ಬೀಳೂದನ್ನs ಕಾಯುತಾ ಇದಾರ ಪೋಲೀಸರು. ನಮ್ಮೆಲ್ಲರ ಮ್ಯಾಲ ಚಾಪ್ಟರ ಖಟ್ಲೆಹಾಕಿ ಫಜೀತಿ ಮಾಡಬೇಕಂತ ಮಾಡಿದ್ದಾರಂತ. ಅವರ ಬಲಿಯಾಗ ನಾವು ಸಿಗ ಬಾರದಪಾ ತಮ್ಮಾ.... "

ತಾನು ಎಂಥ ಹೊಲಸು ಮಾತನಾಡಿದರೂ ಯಾರೂ ತುಟಿ ಬಿಚ್ಚದೆ ಸುಮ್ಮನಿರುವುದನ್ನು ಕಂಡ ಹಾಗೆಲ್ಲ ಭೀಮಪ್ಪನ ದಿಟ್ಟತನ ಬಲಿಯುತ್ತ ಬಂದಿತ್ತು. ಚಹದಂಗಡಿಯ ಬಾಗಿಲಲ್ಲೇ ಕುಳಿತುಕೊಂಡು ಆತ ಬಾಯಿಗೆ ಬಂದ ಮಾತುಗಳನ್ನು ನಿರ್ಭಯವಾಗಿ ಆಡಲು ಮೊದಲು ಮಾಡಿದ್ದ. " ಥೂ. ನಾಚಿಗ್ಗೇಡಿಗಳು....ಹೆಣ್ಣ್ಯಾಗಳು....ಸೀರಿ ಉಟ್ಟವರು....ಬಳೀ ಇಟ್ಟವರು.... ಒಬ್ಬನೂ ಗಂಡಸಿಲ್ಲ ಅವರಾಗ....ಅವರ ಹೆಂಡರನ್ನೆಲ್ಲಾ ನಮ್ಮ ಹುಡುಗರೇ.... ಇತ್ಯಾದಿ, ಇತ್ಯಾದಿ. "

ಭೀಮಪ್ಪನ ಮಾತುಗಳನ್ನು ಕೇಳಿ ಬಸವಾಣಿ, ಅವನ ಪ್ರೇಯಸಿ ನಾಗಿ ಇಬ್ಬರಿಗೂ ಜುಗುಪ್ಸೆಯಾಗತೊಡಗಿತ್ತು. ಕಾಮಣ್ಣನ ಪಕ್ಷದ ಜನರೂ ಒಳ

ಗೊಳಗೇ ಅಸಹ್ಯಪಟ್ಟುಕೊಳ್ಳತೊಡಗಿದ್ದರು. ಮಾತು ಅತಿಯಾಯಿತೆಂಬ ಅರಿವು ಶಿವರಾಯಿಗೂ ಆಗಿತ್ತು. ಭೀಮಪ್ಪನ ತಲೆ ಕೆಟ್ಟಿದೆಯೊ ಏನೊ—ಎಂಬ ಯೋಚನೆಯೂ ಒಂದೆರಡು ಬಾರಿ ಅವನ ತಲೆಯಲ್ಲಿ ಸುಳಿದಿತ್ತು. ಇಸ್ಪೀಟಾಟದ ನಿರುದ್ಯೋಗಿಗಳಿಗೂ ಅಂತರಂಗದಲ್ಲಿ ದಿಗಿಲಾಗತೊಡಗಿತ್ತು. ಗೌಡನ ಪಕ್ಷದವರು ಇಷ್ಟು ದಿನ ಏಕೋ ಏನೋ ಎಲ್ಲವನ್ನೂ ತಡೆದುಕೊಂಡು ಬಂದಿದ್ದಾರೆ. ಭೀಮಪ್ಪನ ಮಾತು ಮಿತಿಮೀರತೊಡಗಿದೆ. ಅಭಿಮಾನಿಗಳಾದವರಾರೂ ಅವನ್ನು ಸಹಿಸಲಾರರು. ಯಾವ ಕ್ಷಣದಲ್ಲಿ ಏನಾಗುವುದೋ ಏನೋ. ಹೊಡೆದಾಟ, ಬಡೆದಾಟ, ಬೆಂಕಿ, ರಕ್ತಪಾತ, ಖೂನಿ.... ?

ಕಾಮಣ್ಣನಿಗೂ ಈ ಸಂಗತಿಯೆಲ್ಲ ತಿಳಿದಿದ್ದಿತಾದರೂ ಆತ ಆ ಬಗೆಗೆ ಒಂದು ಶಬ್ದವನ್ನೂ ಆಡದೆ ಮೌನ ತಳೆದಿದ್ದ. ಗೌಡನ ಕಡೆಯವರು ಜಗಳಕ್ಕೆ ಬರುವುದನ್ನೇ ಆತ ಕಾದು ಕುಳಿತಿದ್ದ ಹಾಗಿತ್ತು. ಗೌಡನ ಪಕ್ಷದ ಬಲವನ್ನು ಮುರಿಯಲು ಅವಶ್ಯವಿದ್ದ ಉಪಾಯಗಳನ್ನೆಲ್ಲ ಆತ ಯೋಚಿಸತೊಡಗಿದ್ದ. ಗಿರಿಯನನ್ನು ದುರ್ಬಲಗೊಳಿಸುವ ಉದ್ದೇಶದಿಂದಲೇ ಇನಾಮದಾರನೊಂದಿಗೆ ಮಾತನಾಡಿ ಹೊಳೆಯ ಹೊಲದ ಲಾವಣಿಯನ್ನೇರಿಸಲು ಸೂಚನೆ ಕೊಟ್ಟಿದ್ದಾಗಿತ್ತು. ಈರ್ಷೆಗೆ ಕಟ್ಟುಬಿದ್ದಿದ್ದ ಭೀಮಪ್ಪ ಆ ಹೊಲವನ್ನು ತಾನೇ ಎರಡು ನೂರು ರೂಪಾಯಿ ಲಾವಣಿಗೆ ಹಿಡಿಯುವುದಾಗಿ ಒಪ್ಪಿಕೊಂಡಿದ್ದ. ಗಿರಿಯನನ್ನು ಕೋರ್ಟಿನಿಂದ ಕೋರ್ಟಿಗೆ ಅಲೆದಾಡಿಸಿ ಹಣ್ಣು ಮಾಡಬೇಕೆಂದು ಹೊಂಚು ಹೂಡಿದ್ದ ಕಾಮಣ್ಣ. ಈ ವಿಚಾರಗಳಲ್ಲಿ ಅವನಿಗೆ ಮರಿಯಪ್ಪನಿಂದಲೂ ಸಲಹೆ ದೊರೆಯುತ್ತಿತ್ತು. ಗೌಡನ ವಿರುದ್ಧವಾಗಿ ತಾವು ಒಂದು ಯುದ್ಧವನ್ನೇ ಹೂಡಿದ್ದಂತೆ ಭಾವಿಸಿದ್ದ ಕಾಮಣ್ಣ. ತಮ್ಮ ಥಂಡಿನ ಸೇನಾಪತಿಯೆಂದರೆ ತಾನು, ಯುದ್ಧಮಂತ್ರಿಯೆಂದರೆ ಮರಿಯಪ್ಪ—ಎಂಬುದಾಗಿ ಆತ ಆಗಾಗ ತನ್ನ ಹಿಂಬಾಲಕರೆದುರಿಗೆ ನಗುನಗುತ್ತಾ ಹೇಳುತ್ತಿದ್ದ. "ನೀ ಸೇನಾಪತಿ ಆದರ ನಾನೇನು ?" ಎಂದು ಭೀಮಪ್ಪ ಪ್ರಶ್ನಿಸುತ್ತಿದ್ದ. "ನೀನs ? ನೀ ಕೇಪ್ಟನ್," ಎಂದು ಉತ್ತರವಿತ್ತು ಗಹಗಹಿಸಿ ನಗುತ್ತಿದ್ದ ಕಾಮಣ್ಣ.

"ಅಹಾ, ಅಹಾ, ಯಸ್....ಯಸ್....ನೀ ಕೇಪ್ಟನ್, ನಾ ಕಮಾಂಡರ್" ಎನ್ನುತ್ತಿದ್ದ ಯಸನೋವಪ್ಪ.

ಭಟ್ಟಿ ಸೆರೆ ತಯಾರಿಕೆ, ಮಾರಾಟ, ಕುಡಿತ ಎಲ್ಲವೂ ಯಥಾಪ್ರಕಾರ ಸಾಗಿತ್ತು. ಆ ಸಮಯದಲ್ಲಂತೂ ಅವರಿಗೆ ಅಡ್ಡಿಯನ್ನೊದಗಿಸುವ ಧೈರ್ಯ ಯಾರಲ್ಲೂ ಇರಲಿಲ್ಲ. ಸುತ್ತಲಿನ ಇಪ್ಪತ್ತು ಹಳ್ಳಿಗಳ ಜನರೆಲ್ಲ ಕಾಮಣ್ಣನ ಗುಂಪಿನ ಬಗೆಗೆ ಭಯಗ್ರಸ್ತರಾಗಿದ್ದರು. "ದುಷ್ಟರನ್ನು ಕಂಡರೆ ದೂರವಿರಬೇಕು" ಎಂದುಕೊಳ್ಳುತ್ತ ಎಲ್ಲರೂ ತಮ್ಮ ಪಾಡಿಗೆ ತಾವು ತಮ್ಮ ಕೆಲಸಗಳಲ್ಲಿ ತೊಡಗಿಕೊಂಡಿರುತ್ತಿದ್ದರು. ಇಪ್ಪತ್ತು ಹಳ್ಳಿಗಳೊಳಗಿನ ಕುಡುಕರು, ಸೆರೆ ಮಾರುವವರು, ಅವರಿಗೆ ಬೆಂಬಲವಾಗಿರುವವರು— ಇವರದೆಲ್ಲಾ ಒಂದು ತಂಡವಾಗಿ ಪರಿಣಮಿಸಿತ್ತು. ತಂಡದ ವಿರುದ್ಧವಾಗಿ ಯಾವ ಹಳ್ಳಿಯಲ್ಲಾದರೂ ಏನಾದರೂ ಚಲನವಲನವಾದರೆ, ಚರ್ಚೆಯಾದರೆ, ತಕ್ಷಣ ಕಾಮಣ್ಣನಿಗೆ ವರದಿ ಬರುತ್ತಿತ್ತು. ವಿರೋಧಿಗಳ ಸದ್ದಡಗಿಸಲು ಅವಶ್ಯಕವಾದ ಕ್ರಮಗಳನ್ನೆಲ್ಲ ಕೂಡಲೆ ಕೈಗೊಳ್ಳಲಾಗುತ್ತಿತ್ತು. ಅಂತೆಯೆ, ಎಲ್ಲರೂ ಹೆದರಿ ಸುಮ್ಮನಿದ್ದು ಬಿಡುತ್ತಿದ್ದರು. ಅದರಿಂದಾಗಿ ಕಾಮಣ್ಣನ ಗುಂಪಿನವರ ಸೊಕ್ಕು ದಿನೇ ದಿನೇ ಬೆಳೆಯತೊಡಗಿತ್ತು.

ಒಂದು ಮಧ್ಯಾಹ್ನ ಧರ್ಮಣ್ಣ ಬಸವಾಣಿಯ ಚಹದಂಗಡಿಯೆದುರಿಗೆ ಹಾಯ್ದು ಹೊರಟ ವೇಳೆಯಲ್ಲಿ, ಅಂಗಡಿಯಲ್ಲಿ ಕುಳಿತಿದ್ದ ಭೀಮಪ್ಪ, ಅವನನ್ನು ಕಂಡು ಭೀಭತ್ಸವಾದ ಶಬ್ದಗಳನ್ನುಪಯೋಗಿಸಿ ಬಯ್ಯತೊಡಗಿದ. ಧರ್ಮಣ್ಣನ ಹೆಂಡತಿಯನ್ನು ಸಿದಗೌಡ ಇಟ್ಟುಕೊಂಡಿರುವನೆಂದೂ ಅದಕ್ಕಾಗಿಯೇ ಧರ್ಮಣ್ಣ ಗೌಡ ಹೇಳಿದಂತೆ ಕುಣಿಯುತ್ತಿರುವನೆಂದೂ ಅರ್ಥ ಹೊರಡುವ ಹಾಗೆ ಕೂಗಾಡಿದ. ಎಂಥವರಿಗಾದರೂ ಅಸಹನೀಯವಾಗುವ ಮಾತು. ಮರ್ಯಾದಸ್ತನಾಗಿ ಬಾಳಲು ಬಯಸುತ್ತಿದ್ದ ಧರ್ಮಣ್ಣನಿಗೆ ಪೂರಾ ಅವಹೇಳನವಾದಂತಾಯಿತು. ಆ ಕ್ಷಣಕ್ಕೆ ಆತ ಕೋಪವನ್ನು ನುಂಗಿಕೊಂಡು, ಅಲ್ಲಿಂದ ಹೊರಟು ನೇರವಾಗಿ ಗೌಡನ ಮನೆಗೆ ಬಂದ.

"ಇಷ್ಟು ದಿನ ಸಹಿಸಿ ಸಹಿಸಿ ಸಾಕಾತು. ಈಗ ಅವ ನಮ್ಮ ಮಾನಾನs ತಗೀಲಿಕ್ಕೆ ನಿಂತಾನ. ಇನ್ನುಮ್ಯಾಲ ಸುಮ್ಮದಿರೂದು ನನ್ನಿಂದಂತೂ ಆಗದಪ್ಪ."

"ಏನ ಮಾಡೂಣಂತೀ ಹಂಗಾದರ?"

"ಏನ ಸರಕಾರ ಗಿರಕಾರ ಐತ್ಯೋ ಇಲ್ಲೋ? ನಮ್ಮ ಕಣ್ಣೆದುರಿಗೇ ಭಟ್ಟೀ ಸೆರೆ ತಯಾರಿ ಮಾಡುತಾರ, ಮಾರುತಾರ, ಕುಡೀತಾರ, ಬಾಯಿಗೆ

ಬಂದಾಂಗ ಬಯ್ಯುತಾರ. ನಾವೆಲ್ಲಾ ಸುಮ್ಮನಿದೀವಿ ಅಂತ ಚೆಲ್ಲಾಟ ನಡದೈತಿ ಇವರದು."

"ಆ ಪೋಲೀಸುಸಾಬ ಬ್ಯಾರೆ ಕಾವ್ಯಾನ ಮಾಮಾ ಅಂತ."

"ಅದರಾಗರೆ ಎಷ್ಟ ಖರೇ ಐತ್ಯೋ ಎಷ್ಟ ಸುಳ್ಳ ಐತ್ಯೋ. ಒಂದು ವೇಳೆ ಆವ ಇವರ ಸಂಬಂಧಿಕ ಆಗಿದ್ದರೂ ಇದ್ದಾನು. ಅಂದಷ್ಟಕ ಏನಾದಂಗಾತು? ಪೋಲೀಸ ಖಾತೆಯೇನೂ ಅವರಪ್ಪಂದಲ್ಲಲ್ಲ?"

"ಪೋಲೀಸಖಾತೆ ಅಂದರ ನಿನಗ ನೆಟ್ಟಗ ಗೊತ್ತಿಲ್ಲ ಧರ್ಮಣ್ಣಾ. ಅದರಾಗ ಇಂಥಾ ಮಂದೀನs ಬಾಳ."

"ಚಲೋ ಮಂದಿ ಒಬ್ಬಿಬ್ಬರಾದರೂ ಇರುತಾರೋ ಇಲ್ಲೋ? ಡಿ. ಎಸ್. ಪಿ. ಸಾಹೇಬರ ಕಿವಿವ್ಯಾಲ ಈ ಸಂಗತಿ ಹಾಕೂಣು ಅವರೇನಂತಾರು ನೋಡೂಣು. ಅವರೂ ಲಕ್ಷ್ಯ ಕೊಡದಿದ್ದರ ನೆಟ್ಟಗ ಮುಂಬಯಿಗೆ ಹೋಗಿ ಗೃಹಮಂತ್ರಿಗಳನ್ನs ಭೇಟಿ ಮಾಡಿ ಕೆಳಗಿನ ಪೋಲೀಸರು ನಡಸಿರುವ ಕಾರಭಾರಾನೆಲ್ಲಾ ತಿಳಿಸೂಣು."

"ನಮ್ಮಂಥವರಿಗೆ ಭೆಟ್ಟಿ ಹೆಂಗ ಸಿಗಬೇಕು ಮಂತ್ರಿಗಳದು? ನಾ ಪೋಲೀಸ ಪಾಟೀಲ, ಸರಕಾರೀ ನೋಕರನಾಗುತೀನಿ—ನಾನಂತೂ ಬರೂದಕ್ಕಾಗೂದಿಲ್ಲ."

"ಚನ್ನಯ್ಯನವರನ್ನ ಕರಕೊಂಡ ಹೋದರಾತು."

"ಅವರು ಬರುತಾರೋ ಇಲ್ಲೋ. ವಯಸ್ಸಾಗ್ತಾ ಬಂತು. ಮೊದಲಿನಂಗ ಮೈಯಾಗ ಶಕ್ತಿ ಇಲ್ಲ."

"ಅವರು ಬರದಿದ್ದರ ಮತ್ತ್ಯಾರನ್ನಾದರೂ ಕಳಿಸ್ಯಾರು. ಕಾಂಗ್ರೆಸಿನವರ ವ್ಯಾಲೆಲ್ಲಾ ಚಲೋ ವರ್ಚಸ್ವ ಐತಿ ಅವರದು. ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರ ಹತ್ತರ ಕರಕೊಂಡು ಹೋಗಬೇಕು ಅವರನ್ನ. ಮುಂದ ಏನಾದರೂ ವ್ಯವಸ್ಥಾ ಆದೀತು," ಎಂದ ಧರ್ಮಣ್ಣಾ.

ಮಾರನೆಯ ದಿನ ಇಬ್ಬರೂ ರಾಮಾಪುರಕ್ಕೆ ಹೋಗಿ ಚನ್ನಯ್ಯನವರನ್ನು ಕಂಡು, ತಮ್ಮೂರಿನ ಪುಂಡರ ವೃತ್ತಾಂತವನ್ನೆಲ್ಲ ವಿವರಿಸಿದರು. ಅವರು ಹೇಳಿ ಮುಗಿಸುವ ವರೆಗೂ ಸುಮ್ಮನೆ ಕುಳಿತು ಕೇಳುತ್ತಿದ್ದು, ಅನಂತರ ಚನ್ನಯ್ಯನವರು ಮಾತನಾಡಿದರು:

" ಬ್ಯಾರೆಯವರು ಪುಂಡರಿದಾರ, ದುಷ್ಟರಿದಾರ ಅಂತ ನಾವು ಹೇಳು ತೀವಿ. ನಾವು ಸಂಭಾವಿತರಿದೇವೋ ಹೆಂಗ ಅನ್ನೂದನ್ನ ಮಾತ್ರ ವಿಚಾರ ಮಾಡುವುದಿಲ್ಲ. "

ಸಿದಗೌಡನ ಮುಖದ ಮೇಲಿನ ಕಳೆಯೇ ಮಾಯವಾದಂತಾಯಿತು. ಚನ್ನಯ್ಯನವರೆಂದರೆ ಮೊದಲಿನಿಂದಲೂ ಅವನಿಗೆ ಕೊಂಚ ಭೀತಿಯೆ. ಅವರು ಸ್ಪಷ್ಟವಾದಿಗಳು. ಯಾರಲ್ಲಾದರೂ ಯಾವುದೇ ದೋಷ ಕಂಡು ಬಂದಾಗ ಅವರೆದುರಿಗೇ ಅದನ್ನೆತ್ತಿ ನಿಷ್ಠುರವಾಗಿ ಖಂಡಿಸಿಬಿಡುವವರು. ನಲವತ್ತು ವರ್ಷಗಳ ಕಾಲ ಸಾರ್ವಜನಿಕ ಚಟುವಟಿಕೆಗಳಲ್ಲಿ ಭಾಗ ವಹಿಸುತ್ತ ಬಂದು ಜನತೆಗೆಲ್ಲ ಪರಿಚಿತರಾಗಿದ್ದವರು. ಮಂತ್ರಿಗಳು, ಉಪಮಂತ್ರಿಗಳು, ಶಾಸನ ಸಭಾ ಸದಸ್ಯರು, ಪತ್ರಿಕಾಕರ್ತರು, ಕಾಂಗ್ರೆಸ್ ಮುಖಂಡರು—ಎಲ್ಲರೂ ಅವ ರಿಗೆ ಪರಿಚಿತರಾಗಿದ್ದವರೇ. ಜಿಲ್ಲೆಯಲ್ಲೆಲ್ಲ ಅವರ ಮಾತಿಗೆ ತುಂಬ ಮರ್ಯಾದೆ ಯಿತ್ತು. ಅಂತೆಯೆ, ಸಿದಗೌಡನೂ ಅವರನ್ನು ಭಯ-ಆದರಗಳಿಂದ ಕಾಣು ತ್ತಿದ್ದ.

" ಕಾಮಣ್ಣಾ, ಭೀಮು, ಅವನ ಪುಂಡರ ವಿರುದ್ಧ ನೀವು ಹೇಳಿದ್ದಾಯ್ತು. ನಿಮ್ಮ ವಿರುದ್ಧ ನಾನೊಂದು ಮಾತು ಹೇಳೂದೈತಿ, ಸಿದಗೌಡರೇ. ಸಮಾ ಧಾನದಿಂದ ಕೇಳುತೀರಾ ? "

" ಏನ ಹೇಳ್ರಿ ಅಣ್ಣಾವರs. "

ವಿಕಾರರಹಿತ ಸ್ವರದಲ್ಲಿ ಚನ್ನಯ್ಯನವರು ಕೇಳಿದರು: " ಹೊಲದ ಲಾವಣಿ ಠರಾಯಿಸುವ ಖಟ್ಲೇ ನಡಿಸುವದಕ್ಕ ವಕೀಲಗ ಬಹಾಳ ಅಂದರ ಎಷ್ಟು ಫೀ ಕೊಡೂದು ನ್ಯಾಯ ? "

ಸಿದಗೌಡ ಗಾಬರಿಗೊಂಡು ತಲೆ ತಗ್ಗಿಸಿ ಕುಳಿತುಕೊಂಡಿದ್ದ. ಚನ್ನಯ್ಯ ನವರು ಮಾತನಾಡುವುದು—ಅರ್ಥಾತ್—ಗಿರಿಯನ ವಿಷಯವೆ. ಅದು ಹೇಗೆ ತಿಳಿಯಿತೋ ಅವರಿಗೆ ? ಗಿರಿಯನೇ ಎಲ್ಲವನ್ನೂ ಹೇಳಿರುವನೇ ಹೇಗೆ ?

" ಇನ್ನೊಂದೇ ಒಂದ ಮಾತು. ಸಂರಕ್ಷಿತ ರೈತನಿಂದ ಮಾಮಲೇ ದಾರರ ಸಮಕ್ಷಮ ರಾಜೀನಾಮೆ ಬರೆಸಿಕೊಳ್ಳದೆ ಮಾಲಕನಾದವ ಹೊಲಾ ಬಿಡಿಸೂದಕ್ಕ ಬರೂದಿಲ್ಲ ಅಂತ ಟೆನನ್ಸಿ ಕಾಯದೇದಾಗ ಇರೂದು ನಿಮಗ

ಗೊತ್ತೈತೋ ಇಲ್ಲೋ ಗೌಡರೇ ? "

" ಗೊತ್ತೈತಿ ಅಣ್ಣಾವರs. "

" ಊರಿನ ಗೌಡ ಅಂದರ ರೈತರ ಹಿರೀ ಅಣ್ಣ ಇದ್ದಂಗ. ಸಣ್ಣ ತಮ್ಮಗಳು ಅಜ್ಞಾನಿಗಳಿದ್ದರ, ಅವರಿಗೆ ತಿಳಿಯದ್ದನ್ನ ತಿಳಿಸಿ ಹೇಳಿ ಅವರು ಗಾಬರಿ ಆಗದಂಗ ಮಾಡೂದು ಗೌಡನಾದವನ ಕರ್ತವ್ಯ ಹೌದೋ ಅಲ್ಲವೋ ? "

ಬೆರಳಿನಿಂದ ನೆಲವನ್ನು ತೀಡುತ್ತ ಗೌಡ ಸುಮ್ಮನೆ ಕುಳಿತಿದ್ದ. ಚನ್ನಯ್ಯನವರು ಏರಿಸಿದ ಧ್ವನಿಯಲ್ಲಿ ಕೇಳಿದರು:

" ನಾ ಏನು ಕೇಳ್ತೀನಿ, ತಿಳೀತೈತ್ಯೋ ಇಲ್ಲೋ ? ಯಾಕ ಮಾತಾಡಲೊಲ್ಲಿರಿ ? ನನ್ನ ಪ್ರಶ್ನಕ್ಕ ಏನು ಹೇಳುತ್ತೀರಿ ? "

" ನೀವು ಹೇಳೂದು ಬರೋಬರಿ ಅಣ್ಣಾವರs. "

" ಹೂಂ. ನೀವು ಗೌಡರು. ಊರಿನ ಹಿರೇರು. ಒಂದು ಪಾರ್ಟಿಯ ಮುಖಂಡರು. ಇನ್ನೊಂದು ಪಾರ್ಟಿಯವರು ದುಷ್ಟರಿದ್ದಾರಂತ ಅವರನ್ನ ಬಯ್ಯುತೀರಿ. ನೀವು ಹೆಂಗ ಇದೀರಿ ಅನ್ನೂದನ್ನ ನೋಡಬೇಕೋ ಬ್ಯಾಡೋ ? "

ಅದುವರೆಗೆ ಮಾತನಾಡದೆ ಸುಮ್ಮನಿದ್ದ ಧರ್ಮಣ್ಣ ಧ್ವನಿಯೆತ್ತಿ—" ಯಾಕ್ರಿ ಅಣ್ಣಾವರ, ಇವನೇನ ಮಾಡಿದಾನ ? " ಎಂದು ಕೇಳಿದ.

ಕಣ್ಣೆವೆಗಳೊಳಗಿಂದ ಅವರಿಬ್ಬರನ್ನೂ ದಿಟ್ಟಿಸುತ್ತ ಚನ್ನಯ್ಯನವರು ಕಠೋರವಾದ ಸ್ವರದಲ್ಲಿ ನುಡಿದರು:

" ಇವರಷ್ಟs ಅಲ್ಲ. ನೀವೂ ತಪ್ಪು ಮಾಡೀರಿ. "

" ಆ ? ನಾನೂ ? "

" ಹೌದು. ನೀವೂ. ನೀವೂ ದೊಡ್ಡ ತಪ್ಪು ಮಾಡೀರಿ. ಆ ಭೀಮಪ್ಪನಿಂದ ಹೊಲಾ ಬಿಡಿಸಿಕೊಂಡದ್ದs ಮೊದಲನೇ ತಪ್ಪು. "

" ಮೂರು ವರ್ಷ ಪಾಳೇನs ಕೊಡಲಿಲ್ಲ ಅಣ್ಣಾವರs. ನಾ ಆದ್ರೂ ಏನು ಮಾಡಲಿ ? ಸಾವಿರಾರು ರೂಪಾಯಿ ಸುರಿದು ಖರೀದಿ ಮಾಡಿದ ಹೊಲಾ. ಪಾಳೇ ಕೂಡಾ ಬರದಿದ್ದರ ಹೆಂಗ ನನಗ ? "

" ನೀವು ಸಾವಿರಾರು ರೂಪಾಯಿ ಸುರಿದು ಅದನ್ನು ಖರೀದಿ ಮಾಡಿರಬಹುದು. ಅವ, ಅವನ ಹೆಂಡರು ಮಕ್ಕಳು, ಅವನ ತಂದಿ ತಾಯಿ ಜೆವರು

ಸುರಿದು, ರಕ್ತ ಸುಟ್ಟು ಎಷ್ಟೋ ವರ್ಷ ದುಡಿದು ಆ ಹೊಲವನ್ನು ಬಂಗಾರ ದಂಗ ಮಾಡಿದ್ದರು. ಅದನ್ನ ಬಿಟ್ಟರ ಅವರ ಉಪಜೀವನಕ್ಕ ಬ್ಯಾರೆ ಏನೂ ಇರಲಿಲ್ಲ. ಹೌದೋ ಅಲ್ಲೋ ? ”

ಚನ್ನಯ್ಯನವರು ಹೀಗೇಕೆ ಮಾತನಾಡುವರೆಂಬುದೇ ಅರ್ಥವಾಗಲಿಲ್ಲ ಧರ್ಮಣ್ಣನಿಗೆ. ಆತ ಅವರ ಮುಖವನ್ನೆ ಮಿಕಿಮಿಕಿ ನೋಡುತ್ತ ಕುಳಿತಿದ್ದ.

“ ಮೂರು ವರ್ಷ ಪಾಳೀ ಕೊಡಲಿಲ್ಲ ಅಂತೀರಿ. ಎರಡು ವರ್ಷ ನೆಟ್ಟಗ ಮಳಿ ಬರಲಿಲ್ಲ, ಬೆಳಿ ಬರಲಿಲ್ಲ ಅನ್ನೂದು ನನಗೂ ಗೊತ್ತೈತಿ. ನಿಮಗೂ ಗೊತ್ತೈತಿ. ಹೊಲದಾಗ ಬೆಳೆದದ್ದು ಅವರ ಹೊಟ್ಟೆಗೇ ಆಗಿರಲಿಕ್ಕಿಲ್ಲ. ಇನ್ನ ಪಾಳೀ ಎಲ್ಲಿಂದ ಕೊಟ್ಟಾರು ನಿಮಗ ? ಅವರ ಸಂಗಡ ಕೆಡಿಸಿಕೊಳ್ಳದೆ ಸುಮ್ಮ ನಿದ್ದಿದ್ದರ ಒಂದೆರಡು ವರ್ಷ ಹೋದಮ್ಯಾಲ ತಾವಾಗೇ ಕೊಡುತಿದ್ದರು ಪಾಳಿ. ನಿಮಗ ಅಷ್ಟು ಸಮಾಧಾನದಿಂದ ಇರಾಕಾಗಲಿಲ್ಲ. ಖಟ್ಲೇ ಮಾಡಿದಿರಿ. ಸ್ವತಃ ಹೊಲಾ ಮಾಡುತೀನಂತ ಸುಳ್ಳು ಹೇಳಿ ಬಿಡಿಸಿಕೊಂಡಿರಿ. ಹೌದೋ ಅಲ್ಲೋ ? ಈಗ ನೀವs ಸ್ವತಃ ಹೊಲದಾಗ ದುಡೀಲಿಕ್ಕೆ ಹತ್ತಿದಿರೋ ಹೆಂಗ ? ”

“ ಗಿರಿಯ ಕೂಲೀ ಮಾಡುತಾನ. ”

“ ಸುಳ್ಳು. ಮತ್ತೂ ಸುಳ್ಳs. ಅವ ಪಾಲಿನಿಂದ ಹಿಡಿದಿದಾನ, ಅದನ್ನು ಮುಚ್ಚಿಟ್ಟು ಹೊರಗ, ಕೂಲಿಯಿಂದ ಮಾಡುತಿದಾನಂತ ಸುಳ್ಳುಹೇಳು ವದು ನಡದೈತಿ. ಟೆನನ್ಸಿ ಕಾಯದೆ ಬಂದಮ್ಯಾಲ ನಿಮ್ಮಂಥ ಎಷ್ಟೋ ಮಂದಿ ಮಾಲಕರು ಹೀಂಗs ಮಾಡುತಾ ಇದಾರ. ನೀವೂ ಮಾಡುತಾ ಇದೀರಿ. ನಿಮ್ಮೊಬ್ಬರನ್ನs ಯಾಕ ದೂಷಿಸಬೇಕು ? ” ಎಂದು ನುಡಿದು, ಕೊಂಚ ತಡೆದು ಅನಂತರ ಮತ್ತೆ ಹೇಳತೊಡಗಿದರು, ಚನ್ನಯ್ಯನವರು: “ ಅವನಿಂದ ಹೊಲಾ ಬಿಡಿಸಿಕೊಳ್ಳದಿದ್ದರ ಅವ ನಿಮ್ಮ ವಿರುದ್ಧ ಯಾಕ ಆಗುತಿದ್ದ ? ಹೊಲಾ ಹೋತು ಅಂತ ಅವನ ಹೊಟ್ಟೆಯೊಳಗ ಬೆಂಕಿ ಬೀಳೂದು ಸಹಜ ಐತಿ. ಹೊಲಾ ಕಳಕೊಂಡವರು ಖೂನಿ ಕೂಡಾ ಮಾಡುತಾರ. ಇನ್ನು ಚಾದಂಗಡಿ ಯೊಳಗ ಕೂತು ಬಯ್ಯುವದೇನ ದೊಡ್ಡದು ? ”

“ ಹಂಗಾದರ ನಾವು ಸುಮ್ಮನs ಅವರ ಬಯ್ಗಳಾ ಎಲ್ಲಾ ಕೇಳಬೇಕಂ ತೀರೋ ಏನ ? ” ಎಂದ ಧರ್ಮಣ್ಣ.

ಚನ್ನಯ್ಯನವರು ಆ ಮಾತಿಗೆ ಉತ್ತರವೀಯದೆ, ಗೌಡನ ಕಡೆ ದೃಷ್ಟಿ ತಿರುಗಿಸಿ ನುಡಿದರು: "ಅವರು ಭಟ್ಟೀ ಸೆರೆ ತಯಾರಿಸುತಾರ, ಮಾರುತಾರ, ರೊಕ್ಕ ಗಳಿಸುತಾರ ಅಂತ ನೀವು ಹೇಳುತೀರಿ. ಭಟ್ಟೀ ಸೆರೆ ಮಾಡೂದು ತಪ್ಪು. ಮಾಡಬಾರದು. ಎಲ್ಲಾ ಖರೇ. ಆದರ s ಗೌಡರಾದ ನೀವೂ ಕೂಡಾ ಏನೂ ಅರಿಯದ ರೈತರಿಗೆ ಮೋಸ ಮಾಡಬಾರದು, ಹಣ ತಿನ್ನ ಬಾರದು ಹೌದಲ್ಲೋ?"

ಒಂದು ಕ್ಷಣ ಸುಮ್ಮನಿದ್ದು, ಬೀಡಿಯೊಂದನ್ನು ಹೊತ್ತಿಸಿ ಸೇದುತ್ತ ಚನ್ನಯ್ಯನವರು ಹೇಳತೊಡಗಿದರು:

"ಹೊಲಾ ಬಿಡಿಸುತೀನಂತ ಇನಾಂದಾರ ಆ ಗಿರಿಯನ್ನ ಸುಮ್ಮನ s ಬೆದ ರಿಸಿ ಕಳಿಸಿದ್ದು ಸ್ಪಷ್ಟ ಐತಿ. ಕಾಯದೇ ಪ್ರಕಾರ ರಾಜೀನಾಮೆ ತಗೊಳ್ಳದ s ಹಂಗ s ಬಿಡಿಸಾಕ ಬರೂದಿಲ್ಲ. ಭೀಮಗ ಅದನ್ನ ಹಚ್ಚಲಿಕ್ಕೂ ಬರೂದಿಲ್ಲ. ಆ ಗಿರಿಯಗ ಕಾಯದೆ ಹೆಂಗ ತಿಳೀಬೇಕು? ಹೊಲಾ ಹೋಗುತ್ತೈತಂತ ಗಾಬರಿಯಾಗಿ ಅವ ನಿಮ್ಮ ಹತ್ತರ ಬಂದಾಗ ಕಾಯದೆ ಬಲ್ಲ ನೀವು ಗಾಬರಿ ಯಾಗಬಾರದಂತ ಅವಗ ಹೇಳಿ ಕಳಿಸೂದು ಬಿಟ್ಟು ಪಾಳೀ ಠರಾಯಿಸುವ ಖಟ್ಲೇಕ್ಕ ಸಿಗಿಸಬೇಕೇನ ಅವನ್ನ? ಆ ಖಟ್ಲೇದ ಅಗತ್ಯ ಏನಿತ್ತು ಈಗ? ಅದಕ್ಕಾಗಿ ಅವನ್ನ ಸಾಲಗಾರನ್ನ ಮಾಡಿದಿರಿ. ಮೂವತ್ತು ರೂಪಾಯಿಯ ಸೊಟ್ಟ ಖಟ್ಲೇ ನಡಸೂದಕ್ಕ ನೂರಾಐವತ್ತು ರೂಪಾಯಿ ಬಿಚ್ಚಿಸಿದಿರಿ. ಆ ಕರೀಗೌಡರ ವಕೀಲಗ ಕೇಸು ಇರಲಿಲ್ಲ. ಸೆರೆ ಕುಡಿಯೂದಕ್ಕ ರೊಕ್ಕ ಇರ ಲಿಲ್ಲ. ಅವಗೊಂದು ಕೇಸು ಸಿಕ್ಕಂಗಾತು, ರೊಕ್ಕ ಸಿಕ್ಕಂಗಾತು. ನಿಮಗ ಕಮಿಶನ್ ಸಿಕ್ಕಂಗಾತು. ಏನಿಲ್ಲ ಅಂದರೂ ಐವತ್ತು ರೂಪಾಯಿ ಆದರೂ ಸಿಕ್ಕಿರಬೇಕಲ್ಲ ನಿಮಗ? ಕೇಸು ಒಯ್ದು ಕೊಟ್ಟವರಿಗೆ ಮೂರರಲ್ಲೊಂದು ಪಾಲು ಕಮಿಶನ್ ಕೊಡುವ ವಕೀಲರೂ ಇದಾರ, ನನಗ ಗೊತ್ತೈತಿ...."

ಬಹಳ ಮಾತನಾಡಿದುದರಿಂದ ಚನ್ನಯ್ಯನವರಿಗೆ ಆಯಾಸವಾದಂತಾ ಯಿತು. ಆಳನ್ನು ಕೂಗಿ ಸೋಡಾ ತರಲು ಹೇಳಿ, ಬೀಡಿಯ ಹೊಗೆಯನ್ನೆಳೆ ಯುತ್ತ ಅವರು ಮತ್ತೆ ಮಾತನಾಡತೊಡಗಿದರು:

"ಕಾಮಣ್ಣ ಭಟ್ಟೀ ಸೆರೆಯಿಂದ ಹಣ ಗಳಿಸುತಾನ. ನೀವು ರೈತರಿಗೆ ಮೋಸಾ ಮಾಡಿ ಗಳಿಸುತೀರಿ. ಭೀಮನೂ ಸೆರೆ ಕುಡೀತಾನ, ಕರಿಗೌಡರಂಥ

ವಕೀಲರೂ ಕುಡೀತಾರ. ಕಾಯದೆ ಕಲಿತು ಅದರಿಂದಲೇ ಹೊಟ್ಟಿ ಹೊರೆಯುವವರೇ ಕಾಯದೆ ಮುರಿದು ಕುಡೀತಾ ಇರುವಾಗ ಇವರ್‍ಯಾಕ ಕುಡಿಯಬಾರದು ? ಅಂ, ಏನಂತೀರಿ ? ”

“ ಅಂದರs ? ಕುಡೀಲಿಕ್ಕೆ ಏನೂ ಅಡ್ಡಿಯಿಲ್ಲ ಅಂತೀರಾ ? ” ಧರ್ಮಣ್ಣ ಕೇಳಿದ.

“ ಕುಡಿಯಬಾರದು. ಸೆರೆ ಸಿಂದೀ ಎಲ್ಲಾ ಬಹಳ ಕೆಟ್ಟದ್ದು. ಪಾನ ಪ್ರತಿಬಂಧ ಕಾಯದೆ ಮಾಡಿ ಸರಕಾರ ಚಲೋ ಕೆಲಸಾನs ಮಾಡ್ಯೈತಿ. ಈ ಒಂದು ವಿಷಯದಾಗ ಮಹಾತ್ಮಾ ಹೇಳಿದಂಗ ನಡದೈತಿ ಸರಕಾರ. ಆದರs ಅವರ ಸಂಗಡ ಇನ್ನೂ ಎಷ್ಟೋ ವಿಷಯ—ಮಹಾತ್ಮಾ ಹೇಳಿದ್ದುವೇ—ಮಾಡಬೇಕಾಗಿತ್ತು. ಮಾಡಿಲ್ಲ ಇನ್ನೂ. ಸೆರೆ ಸಿಂದಿ ಕುಡಿಯೂದು ಚಲೋದು ಅಂತ ಏನೂ ಕುಡಿಯೂದಿಲ್ಲ ಜನರು. ಕುಡಿಯೂದು ಕೆಟ್ಟದು ಅಂತ ಮೂವತ್ತು ವರ್ಷದಿಂದ ನಾವು ಪ್ರಚಾರ ಮಾಡುತಾ ಬಂದೀವಿ. ಸಿಂದೀ ಗಿಡ ಕಡಿದೀವಿ. ಸೆರೆ ಸಿಂದೀ ಅಂಗಡಿಗಳ ಮುಂದ ಪಿಕೆಟಿಂಗ್ ಮಾಡೀವಿ. ಅದಕ್ಕಾಗಿ ಜೇಲಿಗೆ ಹೋಗಿ ಬಂದೀವಿ, ತಲೆ ಒಡಿಸಿಕೊಂಡೀವಿ. ಕುಡಿಯೂದು ಕೆಟ್ಟದು ಅನ್ನೂದು ಎಂಥಾ ಅಶಿಕ್ಷಿತರಿಗೂ ಕೂಡಾ ಗೊತ್ತಾಗೈತಿ. ಎಷ್ಟೋ ಮಂದಿ ಬಿಟ್ಟೂ ಬಿಟ್ಟಿದಾರ. ಆದರೂ ಇನ್ನೂ ಎಷ್ಟೋ ಮಂದಿಗೆ ಬಿಡೂದಕ್ಕಾಗಿಲ್ಲ. ಬಹಳ ದಿನಗಳಿಂದ ಹತ್ತಿದ ದುಶ್ಚಟ ಒಮ್ಮೆಲೆ ಬಿಡೂದಂದರ ಹುಡುಗಾಟ ಅಲ್ಲ. ಈಗ ನೋಡಿರಿ. ನನಗೇನೂ ಕುಡಿತದ ಚಟ ಇಲ್ಲ. ಬ್ಯಾರೆ ಯಾವ ಚಟವೂ ಇಲ್ಲ. ಆದರೂ ಈ ಬೀಡಿಯ ಚಟ ಒಂದೈತಲ್ಲ ? ಬೀಡೀ ಸೇದೂದು ಚಲೋ ಚಟ ಅಂತ ಯಾರಾದರೂ ಹೇಳಿಯಾರೇನು ? ಇದು ಕೆಟ್ಟದು, ಇದರಿಂದ ಪ್ರಕೃತಿ ಕೆಡುತೈತಿ ಅನ್ನೂದು ನನಗೇನು ಗೊತ್ತಿಲ್ಲ? ಇದನ್ನು ಬಿಡಬೇಕು ಅಂತ ಎಷ್ಟೋ ಸರತಿ ಪ್ರಯತ್ನ ಮಾಡಿದರೂ ಬಿಡಾಕಾಗಲಿಲ್ಲ. ಚಟ ಅಂದರ ಹೀಂಗs. ಅವನ್ನ ಕಲಿಯೂದು ಸುಲಭ. ಬಿಡೂದು ಬಹಾಳ ಕಷ್ಟ. ಕುಡಿತದ ಚಟಕ್ಕ ಬಿದ್ದವರದು ಹಂಗs ಆಗೈತಿ. ಕುಡೀಬಾರದನ್ನೂದು ತಿಳೀತೈತಿ ಅವರಿಗೆ. ಸರಕಾರ ಕಾಯದೆ ಮಾಡಿ ಚಲೋ ಮಾಡೀತನ್ನೂದೂ ಅವರಿಗೆ ಗೊತ್ತೈತಿ. ಕುಡಿಯೂದು ಬಿಟ್ಟುಬಿಡಬೇಕು ಅಂತಲೂ ಅನಿಸುತೈತಿ. ಆದರೂ ದುರ್ಬಲ ಮನಸ್ಸು....ಬಿಡೂವಕ್ಕಾಗುವ

ದಿಲ್ಲ.... ”

ಅಷ್ಟರಲ್ಲಿ ಸೋಡಾ ಬಂದಿತು.

ಸೀಸೆಯನ್ನು ಕೈಗೆತ್ತಿಕೊಂಡು, ಒಂದು ಗುಟುಕು ಕುಡಿದು ಚನ್ನಯ್ಯನವರೆಂದರು: “ ನೋಡ್ರಿ. ಮಾತಾಡಿ ಮಾತಾಡಿ ನನ್ನ ಗಂಟಲು ಒಣಗಿತು. ದಣಿವಾತು. ಸೋಡಾ ಕುಡಿದರ ದಣಿವು ಹೋದಂಗಾಗುತ್ತೈತಿ. ಅದಕ್ಕ ಕುಡೀತೀವಿ. ದಿನವೆಲ್ಲಾ ದುಡಿದು ದುಡಿದು ದಣಿದು ಬಂದಿರುತಾರ ಬಡವರು. ಆ ದಣಿವನ್ನೆಲ್ಲಾ ಮರಿಯೂದಕ್ಕ ಹೆಂಡಾ ಕುಡೀತಾರ. ಇದು ನಮ್ಮ ಸೋಡಾ....ಅದು ಅವರ ಸೋಡಾ.... ”

ಸೀಸೆಯಲ್ಲಿನ ಸೋಡಾ ನೀರನ್ನೆಲ್ಲ ಕುಡಿದು, ಅದನ್ನು ಆಳಿನ ಕೈಗೆ ಕೊಟ್ಟು, ಅಡಕೆಯದೊಂದು ಹೋಳನ್ನು ಬಾಯಿಗಿಟ್ಟುಕೊಂಡು ಚನ್ನಯ್ಯನವರು ಮುಂದುವರಿಸಿದರು:

“ ಕುಡೀಬ್ಯಾರದಂತ ಕಾಯದೆ ಮಾಡಿ ಕುಂತುಬಿಟ್ಟರ ಕುಡಿತ ನಿಂತೀತೇನು ? ಎರಡು ರೊಟ್ಟಿಗಾಗಿ ಮನುಷ್ಯ ದಿನದ ಹನ್ನೊಂದು ಹನ್ನೆರಡು ತಾಸು ದನದಂತೆ ದುಡಿದು ಹೆಣದಂತಾಗುವದು ಮೊದಲು ನಿಲ್ಲಾಕ ಬೇಕು. ಅವರ ಬಡತನ ಹೋಗಬೇಕು. ದಿನಕ್ಕ ನಾಲ್ಕು ತಾಸು ಕೆಲಸ ಮಾಡಿದರ ಸುಖದಿಂದ ಜೀವನ ನಡಿಯುವಂತಾಗಬೇಕು. ನಾಳಿನ ಚಿಂತೆ ಅವರಿಗಿರಬಾರದು. ಹಾಂಗ ನಾವು ವ್ಯವಸ್ಥಾ ಮಾಡಿದಾಗ ಕುಡಿತ ಅನ್ನೂದು ತಂತಾನೇ ಮಾಯವಾದೀತು. ಅದುವರೆಗೂ ಇರೂದs ಅದು.... ” ಎಂದು ಹೇಳಿ, ಚನ್ನಯ್ಯನವರು ಕೊಂಚ ನಕ್ಕು “ ಮಾತು ಬಹಾಳ ದೂರ ಹೋದಂಗಾತು. ನಿಮಗ ಬ್ಯಾಸರಾಯಿತೇನೋ ? ” ಎಂದರು.

ಧರ್ಮಣ್ಣ ದೇಶಾವರಿ ನಗೆ ನಗುತ್ತ ನುಡಿದ: “ ಛೆ. ಛೆ. ನಿಮ್ಮಂಥಾ ಹಿರೇರ ಮಾತು ಬ್ಯಾಸರು ಯಾಕಾದೀತು ? ”

“ ಮೊನ್ನೆ ನಮ್ಮಲ್ಲಿಗೆ ಕಾಂಗ್ರೆಸ್ ಮುಖಂಡರೊಬ್ಬರು ಬಂದಿದ್ದಾಗ ಅವರಿಗೂ ನನಗೂ ಇದೇ ವಿಷಯ ವಾದ ಆತು. ಈಗ ನಿಮ್ಮೆದುರಿಗೆ ಆಡಿದ್ದನ್ನs ಅಂದು ಅವರೆದುರಿಗೂ ಆಡಿದಾಗ ಅವರು ದಂಗುಬಡಿದವರಂಗ ಕುಂತು ಏನ ಹೇಳಿದ್ರು ಅಂತೀರಿ ! ಹ....ಹ....ಹಾ........ಅವರೇನಂದರು ಗೊತ್ತೈತೇನ ನಿಮಗ ? ನಾನೇನೋ ಕಮ್ಯೂನಿಸ್ಟರ ಹಂಗ ಮಾತಾಡುತೀನಿ ಅಂತಂದರು....

ನನಗ ನಗೀ ತಡೀಲಿಕ್ಕಾಗಲಿಲ್ಲ. ಕಮ್ಯೂನಿಸ್ಟರ ಹಂಗ! :ಹ....ಹ.... ಹಾ.... ಒಳೇ ಮೋಜಿನ ಮಾತೇ ಅಲ್ಲೇನ? ಕಮ್ಯೂನಿಸ್ಟರಂದರ ಹೆಂಗಿರು ತಾರ, ಅವರ ತತ್ವ ಏನ, ಪಾನಪ್ರತಿಬಂಧದ ಸಂಬಂಧ ಅವರ ಅಭಿಪ್ರಾಯ ಏನೈತಿ—ಯಾವದೂ ಗೊತ್ತಿಲ್ಲ ನನಗ. ಆ ಮಹಾತ್ಮಾ ಇದ್ದನಲ್ಲಾ—-ಪುಣ್ಯ ವಂತ—ಅವ ಆಗಾಗ ಭಾಷಣಾ ಮಾಡಿದ್ದು ಪೇಪರಿನಾಗ ಪುಸ್ತಕದಾಗ ಓದಿ ನೆನಪಿಟ್ಟುಕೊಂಡೀನಿ. ಅವನ ವಿಚಾರಗಳs ನನ್ನ ಬಾಯಾಗಿಂದ ಹೊರ ಬೀಳತಾವ. ಇಲ್ಲದಿದ್ದರ ನನಗೇನ ತಿಳೀತೈತಿ ಮಣ್ಣು! ನನ್ನ ಮಾತು ಕಮ್ಯೂನಿಸ್ಟರ ಮಾತಿನ ಹಂಗ ಇದ್ದರ ಆ ಮಹಾತ್ಮನೂ ಕಮ್ಯೂನಿಸ್ಟನೇ ಆಗಿ ದ್ದನನ್ನಬೇಕಾಗುತೈತಿ....ಆಂ, ಏನಂತೀರಿ ನೀವು ಧರ್ಮಣ್ಣಾ?"

"ಇದರಾಗೆಲ್ಲಾ ನಮಗೇನು ತಿಳೀತೈತಿ ಅಣ್ಣಾವರs? ನಾವು ಹೊರ ಡೋಣವೇನು ಇನ್ನು?"

"ಆಂ? ಹೋಗುತೀರಿ? ಹೂಂ. ಮತ್ತ ಬಂದ ಕೆಲಸ ಏನು, ಮರೆತೇ ಬಿಟ್ಟಿರಲ್ಲಾ?"

"ಅದನ್ನs ಆಗ ಹೇಳಿದಿವಲ್ಲ ಅಣ್ಣಾವರs."

"ಭಟ್ಟಿ ಸೆರೆ ತಯಾರಿ ನಿಲ್ಲಿಸೂದಕ್ಕ ಪ್ರಯತ್ನ ಮಾಡೂಣು. ಶಹರಕ್ಕ ಎಂದು ಹೋಗಬೇಕು ಅಂತೀರಿ?"

"ನಿಮಗ ಸವುಡು ಆದಾಗ."

"ನಾಳೆ ಶನಿವಾರ ಹೋಗೂಣು, ಮಧ್ಯಾಹ್ನದ ಗಾಡಿಗೆ. ಸ್ಟೇಶನಕ್ಕೆ ಬರ್ರಿ. ನಾನೂ ಬಂದಿರುತೀನಿ," ಎಂದು ನುಡಿದು ಚನ್ನಯ್ಯನವರು ಎದ್ದು ನಿಂತರು.

ಗೊತ್ತುಪಡಿಸಿದಂತೆ ಶನಿವಾರ, ಧರ್ಮಣ್ಣನೂ ಚನ್ನಯ್ಯನವರೂ ಜಿಲ್ಲಾ ಸ್ಥಳಕ್ಕೆ ಹೊರಟರು. ಸಿದಗೌಡ ಯಾವುದೋ ನೆವ ಹೇಳಿ ತಪ್ಪಿಸಿ ಕೊಂಡ.

ಅದೇ ದಿನವೆ, ಸರಕಾರದ ಪಾರ್ಲಿಮೆಂಟರಿ ಸೆಕ್ರೆಟರಿಗಳಲ್ಲೊಬ್ಬರು ಜಿಲ್ಲೆಯ ಸ್ಥಳಕ್ಕೆ ಆಗಮಿಸಿದ್ದರು. ಚನ್ನಯ್ಯನವರಿಗೆ ಅವರ ಪರಿಚಯವೂ ಇತ್ತು. ಅವರನ್ನೇ ಕಂಡರಾಯಿತೆಂದು ಇಬ್ಬರೂ ಟಿ. ಬಿ. ಯ ಬಳಿ ಬಂದರು. ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರು, ಕಾರ್ಯದರ್ಶಿ, ಇನ್ನು ಕೆಲವರು ಕಾರ್ಯ

ಕರ್ತರೂ ಅಲ್ಲಿಯೇ ಇದ್ದರು. ಚನ್ನಯ್ಯನವರು ವ್ಯರ್ಥ ಹರಟೆಯಲ್ಲಿ ಕಾಲ ಹರಣ ಮಾಡದೆ ನೇರವಾಗಿ ವಿಷಯಕ್ಕೆ ಬಂದು ತಮ್ಮ ಭಾಗದ ಭಟ್ಟಿ ಸೆರೆಯ ವ್ಯವಹಾರವನ್ನು ಕುರಿತು ಸೆಕ್ರೇಟರಿಗಳಿಗೆ ವಿವರಿಸಿದರು.

"ನೀವು ಇಷ್ಟು ಆಸಕ್ತಿ ವಹಿಸಿ ಇಷ್ಟು ದೂರ ಬಂದು ಈ ವಿಷಯ ತಿಳಿಸಿದ್ದಕ್ಕಾಗಿ ಆಭಾರಿಯಾಗಿದ್ದೇನೆ. ಇದು ನನ್ನ ಖಾತೆಗೆ ಸಂಬಂಧಪಟ್ಟ ವಿಷಯವಲ್ಲ. ಆದರೂ ಈ ವಿಚಾರವಾಗಿ ಪೋಲೀಸು ಖಾತೆಗೆ ತಿಳಿಸುತ್ತೇನೆ. ಅವರು ವಿಚಾರಣೆ ಮಾಡುವರು," ಎಂದು ಸೆಕ್ರೆಟರಿಗಳು ಹೇಳಿದರು.

ಪೋಲೀಸು ಖಾತೆಯವರು ನಡಸುವ ವಿಚಾರಣೆಯ ವೈಖರಿಯನ್ನು ಚೆನ್ನಾಗಿ ಬಲ್ಲವರಾಗಿದ್ದ ಚನ್ನಯ್ಯನವರು, ಅಷ್ಟಕ್ಕೇ ಮಾತು ನಿಲ್ಲಿಸದೆ, ಮತ್ತೆ ಹೇಳಿದರು:

"ಪೋಲೀಸರ ಪ್ರತ್ಯಕ್ಷ ಬೆಂಬಲದಿಂದಲೇ ಭಟ್ಟಿ ಸೆರೆ ವ್ಯವಹಾರ ನಡೀತಾ ಐತಿ. ಠಾಣಾ ಅಮಲ್ದಾರನಿಗೆ ಸೆರೆ ಮಾರುವವರು ತಿಂಗಳು ತಿಂಗಳಿಗೆ ಹಣವನ್ನು ಕೊಡುತ್ತಾರೆ. ಅದರಿಂದಲೇ ಕಾಯದೇ ವಿರುದ್ಧ ಈ ಕೆಲಸ ನಡಿಸಿರೂದು."

ಸೆಕ್ರೆಟರಿಗಳು ವಿಶಾಲ ನಗೆ ಬೀರುತ್ತ ನುಡಿದರು:

"ಇದೆಲ್ಲ ನಮಗೆ ಗೊತ್ತಿಲ್ಲವೆಂದು ತಿಳಿದಿದ್ದೀರಾ ಚನ್ನಯ್ಯನವರೆ?— ಎಲ್ಲಾ ಗೊತ್ತಿದೆ. ಈ ಬಗ್ಗೆ ಸರಕಾರಕ್ಕೆ ರಿಪೋರ್ಟುಗಳೂ ಬಂದಿವೆ. ಲಂಚ ಗುಳಿತನವನ್ನು ನಿರ್ಮೂಲ ಮಾಡಲು ನಾವು ಶಕ್ತಿಮೀರಿ ಶ್ರಮಿಸುತ್ತಿದ್ದೇವೆ. ಆದರೆ, ನಿಮಗೇ ಗೊತ್ತಿರುವಂತೆ ಅದು ಒಮ್ಮಿಂದೊಮ್ಮೆಲೆ ಹೋಗುವದಿಲ್ಲ. ಕಾಲ ಬೇಕಾಗುತ್ತದೆ."

"ಸರಕಾರ ಉಗ್ರಕ್ರಮ ಕೈಗೊಳ್ಳುವದಿಲ್ಲಾದ್ದರಿಂದ ಲಂಚಗುಳಿತನ ಹಂಗs ನಡದೈತಿ. ಒಬ್ಬ ಪೋಲೀಸನ್ನ ಒಬ್ಬ ಪೋಲೀಸ್ ಸಾಬನ್ನ ಡಿಸ್ ಮಿಸ್ ಮಾಡಿ ಮನೆಗೆ ಕಳಿಸಿರಿ. ನೋಡ್ರಿ, ಆಮ್ಯಾಲ ನಿಲ್ಲುತ್ತೈತ್ಯೋ ಇಲ್ಲೋ?"

"ಅದನ್ನೂ ನಡಸಿಯೇ ಇರುವೆವಲ್ಲಾ? ಅದಕ್ಕಾಗಿಯೆ ಲಂಚನಿರ್ಮೂಲನ ಶಾಖೆಯನ್ನೇ ತೆರೆದಿದ್ದೇವೆ."

"ದೊಡ್ಡ ದೊಡ್ಡ ಪೋಲೀಸುಸಾಬರೇ ಭಟ್ಟಿಸೆರೆ ತಯಾರಕರಿಗೆ ಬೆಂಬಲ

ಕೊಡುವಾಗ ಈ ಚಿಕ್ಕ ಶಾಖೆಯಾದರೂ ಏನು ಮಾಡಿತು ? "

ಸೆಕ್ರೆಟರಿಗಳು ಬೆಚ್ಚಿಬಿದ್ದು ಕೇಳಿದರು:

" ದೊಡ್ಡ ದೊಡ್ಡ ಸಾಬರು ಅಂದಿರಾ ? ಯಾರಿದಾರೆ ಅಂಥವರು ಈ ಭಾಗದಲ್ಲಿ ? "

ಚನ್ನಯ್ಯನವರು ಆ ' ದೊಡ್ಡ ಸಾಬರ ' ಹೆಸರು ಹೇಳಿದರು. " ಈ ಸಾಬ ನಮ್ಮ ಮಾಮಾ ಆಗುತಾನ, ನಮ್ಮನ್ನ ಹಿಡಿಯುವವರು ಯಾರಿದಾರ ಅಂತ ಸೊಕ್ಕು ಮಾಡಿಕೊಂಡು ಊರೊಳಗೆಲ್ಲಾ ಉಡಾಳತನ ಮಾಡುತಾಗ ಪುಂಡರು. "

" ಐ ಸೀ ! ಹೀಗಿದೆಯೇನು ? ಆ ದೊಡ್ಡ ಸಾಬ ಇಲ್ಲೇ ಇದಾರೇನು ನೋಡೋಣ. ನಾನೇ ಕರೆಯಿಸಿ ಕೇಳುತ್ತೇನೆ, " ಎಂದರು, ಸೆಕ್ರೆಟರಿಗಳು.

ಒಂದು ತಾಸು ಕಳೆದ ಬಳಿಕ ಡಿ. ಎಸ್. ಪಿ. ಯವರೂ ಆ ' ದೊಡ ಸಾಬ ' ರೂ ಆಗಮಿಸಿದರು. ವಿಷಯವೇನೆಂಬುದನ್ನು ತಿಳಿದುಕೊಂಡ ಬಳಿಕ ಆ ' ದೊಡ್ಡ ಸಾಬ ' ರು ಭುಜ ಕುಣಿಸುತ್ತ ಹೇಳಿದರು:

" ಅವ ಯಾವ ಕಾಮಣ್ಣೋ ಯಾವ ರಾಮಣ್ಣೋ ಎಲ್ಲಿಯವನೋ ಒಂದೂ ಗೊತ್ತಿಲ್ಲ ನನಗೆ. ಅಲ್ಲಿ ನಮ್ಮ ಸಂಬಂಧಿಕರು ಯಾರೂ ಇಲ್ಲ. "

" ಎಲ್ಲಿಯದೋ ದೂರದ ಸಂಬಂಧ ಹುಡುಕಿ ಇವರು ತಮ್ಮ ಮಾಮಾ ಎಂದು ಆ ಕಿಡಿಗೇಡಿಗಳು ಪ್ರಚಾರ ಮಾಡುತ್ತ ಇವರ ಹೆಸರಿನ ದುರುಪಯೋಗ ನಡಸಿರುವಂತೆ ತೋರುತ್ತದೆ. ಅವರಿಗೆ ತಕ್ಕ ಶಾಸ್ತಿ ಮಾಡಿಸುತೇನೆ, ಸುಮ್ಮ ನಿರಿ, " ಎಂದು ಡಿ. ಎಸ್. ಪಿ. ಯವರು ಭರವಸೆ ಕೊಟ್ಟರು.

" ಮಾಮಾನ ಕೈ ಎಂಥಾದ್ದು ಅನ್ನೂದನ್ನ ಆ ಅಳಿಯಂದಿರಿಗೆ ಚೆನ್ನಾಗಿ ತೋರಿಸ್ತೇನೆ. ನನಗಿದೇನೂ ಗೊತ್ತೇ ಇಲ್ಲವಲ್ಲಾ. ಆಗಲೇ ಗೊತ್ತಾಗಿದ್ದರೆ ಇಷ್ಟು ಹೊತ್ತಿಗೆ ಬುದ್ಧಿ ಕಲಿಸುತ್ತಿದ್ದೆ. " ಎಂದು ' ದೊಡ್ಡ ಸಾಬ ' ರು ಹೇಳಿ ದರು.

" ಸಮಾಧಾನವಾಯಿತೇ ಚನ್ನಯ್ಯನವರೇ ? " ಸೆಕ್ರೆಟರಿಗಳು ಕೇಳಿ ದರು.

" ಈ ಇಬ್ಬರು ಸಾಹೇಬರೂ ಹೇಳುತ್ತಾರಂದ ಬಳಿಕ ನಂಬಾಕs ಬೇಕಲ್ಲರೀ ? " ಎಂದು ನುಡಿದು, ಚನ್ನಯ್ಯನವರು ಪಾರ್ಲಿಮೆಂಟರಿ ಸೆಕ್ರೆಟರಿ

ಗಳನ್ನು ಬೀಳ್ಕೊಂಡು ಹೊರಟರು.

ಹೊರಗಡೆ, ವರಾಂಡದಲ್ಲಿದ್ದ ಜಿಲ್ಲಾ ಕಾಂಗ್ರೆಸ್ ಕಾರ್ಯದರ್ಶಿಗಳು ಚನ್ನಯ್ಯನವರು ಹೊರಟಿದ್ದನ್ನು ಕಂಡು, ಹತ್ತಿರ ಬಂದು ಕೇಳಿದರು:

" ಬಂದ ಕೆಲಸ ಆಯಿತೇ ಅಣ್ಣಾವರೇ ? "

" ಆದ ಹಂಗs ಆತು. ಹೂಂ. ನಿಮ್ಮನ್ನೂ ಒಂದು ಮಾತು ಕೇಳು ವದಿತ್ತು. "

" ಅವಶ್ಯ ಕೇಳಿರಿ. "

" ಹಿಂದೆ ಸೇಂದೀ ಕಂಟ್ರಾಕ್ಟ್ ಹಿಡಿದಿದ್ದನಲ್ಲಾ ಆ ಸಾಹುಕಾರ ಮರಿ ಯಪ್ಪ....ಅವನೂ ಈಗ ಕಾಂಗ್ರೆಸಿಗೆ ಸೇರಿದಾನೇನ ? "

ಕಾರ್ಯದರ್ಶಿಗಳು ನಗುತ್ತಾ ಉತ್ತರವಿತ್ತರು:

" ಸ್ವಾತಂತ್ರ್ಯ ಬಂದ ಬಳಿಕ ಸಾವಿರಾರು ಮಂದಿ ಸೇರಿದ್ದಾರೆ. ಅವನೂ ಸೇರಿದ್ದಾನು. "

" ಭಟ್ಟಿ ಸೆರೆ ತಯಾರಿಸುವ ಪುಂಡರ ಗುಂಪಿಗೆ ಆ ಮರಿಯಪ್ಪನೇ ಮುಖಂಡನಾಗಿದ್ದಾನ. ಅವ ಕಾಂಗ್ರೆಸ್ಸಿನಲ್ಲಿರೂದರಿಂದ ಸಂಸ್ಥಾದ ಹೆಸರು ಕೆಡೂದಿಲ್ಲೇನ ? "

" ಪುಂಡರ ಗುಂಪಿಗೆ ಆತ ಮುಖಂಡ ಎಂದು ಸಿದ್ಧವಾದರಷ್ಟೇ ಈ ಮಾತು ? ಮರಿಯಪ್ಪ ಅಂಥವನಿರಬಹುದೆಂದು ನನಗೇನೂ ಅನಿಸುವ ದಿಲ್ಲ. "

" ನನಗೆ ಪೂರಾ ಖಾತ್ರಿಯಾಗ್ಯೆತಿ. ಅವನ ಬಲದಿಂದಲೇ ಭಟ್ಟಿ ಸೆರೆ ತಯಾರಿ ನಡದಿರೂದು. ಜಿಲ್ಲಾ ಕಾಂಗ್ರೆಸ್ ಕಮಿಟಿ ಅಧ್ಯಕ್ಷ, ಕಾರ್ಯದರ್ಶಿ ಎಲ್ಲಾರೂ ತನ್ನ ಮಾತು ಕೇಳುತಾರಂತ ಹೇಳುತಾನಂತ ಅವ. "

" ಹೀಗೆ ಹೇಳುವವರು ಎಷ್ಟೋ ಜನ ಇರಬಹುದು. ಅದಕ್ಕೆ ನಾವೇನು ಮಾಡಲಿಕ್ಕಾಗುತ್ತದೆ ? ನನ್ನ ಮಟ್ಟಿಗೆ ಹೇಳಬೇಕಾದರೆ ಅವನಿಗೊಂದು ಕವಡಿಯ ಬೆಲೆಯನ್ನೂ ನಾ ಕೊಡುವದಿಲ್ಲ. "

" ಸರಿ. ಹಂಗಾದರ ಮಾತು ಮುಗಿದಂಗಾತು, " ಎಂದರು ಚನ್ನಯ್ಯ ನವರು.

ಸಾಯಂಕಾಲದ ರೈಲಿಗೆ ಇಬ್ಬರೂ ಹಿಂದಿರುಗಿದರು.

"ಡಿ. ಎಸ್. ಪಿ. ಸಾಹೇಬರೇ ಸ್ವತಃ ಬಂದೋಬಸ್ತಿ ಮಾಡುತೀನಂತ ಹೇಳಿದಾರ. ಏನಾದರೂ ಆಗಬಹುದು," ಎಂದು ಧರ್ಮಣ್ಣ ಸಿದಗೌಡ ನೊಂದಿಗೆ ಮಾತನಾಡುತ್ತ ಹೇಳಿದ.

ಈ ವಿಷಯವನ್ನೆಲ್ಲ ರಹಸ್ಯವಾಗಿರಿಸಬೇಕೆಂದು ಧರ್ಮಣ್ಣ ಸಿದಗೌಡ ನಿಗೆ ಸ್ಪಷ್ಟ ಶಬ್ದಗಳಲ್ಲಿ ಸೂಚಿಸಿದ್ದನಾದರೂ ಸ್ವತಃ, ತಾನೇ ಆ ಬಗೆಗೆ ಮೌನ ವಹಿಸಲಿಲ್ಲ. ರಾತ್ರಿ ಊಟಕ್ಕೆ ಕುಳಿತಿದ್ದಾಗ ಹೆಂಡತಿಯೊಂದಿಗೆ ಮಾತನಾ ಡುತ್ತ, ತಾನು ಉಪಮಂತ್ರಿಗಳನ್ನು ಕಂಡು ಕಾಮಣ್ಣನ ಗುಂಪಿನ ಸಂಗತಿಯ ನ್ನೆಲ್ಲ ಅವರ ಕಿವಿಯ ಮೇಲೆ ಹಾಕಿದುದಾಗಿಯೂ, ಡಿ. ಎಸ್. ಪಿ. ಸಾಹೇಬರು ಆ ಬಗ್ಗೆ ವ್ಯವಸ್ಥೆ ಮಾಡಲು ಭರವಸೆ ಕೊಟ್ಟಿರುವುದಾಗಿಯೂ, ಒಂದು ವಾರ ದೊಳಗಾಗಿ ಕಾಮಣ್ಣ, ಭೀಮ, ಪುಂಡ ಮತ್ತು ಅವರ ಗುಂಪಿನವರೆಲ್ಲ ಜೇಲಿಗೆ ಹೋಗಿ ಬೀಳುವರೆಂದೂ ವಿವರವಾಗಿ ಹೇಳಿ, "ಧರ್ಮಣ್ಣನ ಶಕ್ತಿ ಅಂದರ ಎಂಥಾದ್ದು ಅನ್ನೂದು ಇನ್ನ ತಿಳೀತೈತಿ ಇವರಿಗೆ.... ಉಪಮಂತ್ರಿಗಳನ್ನು ಭೆಟ್ಟಿ ಯಾಗಿ ಬಂದೀನಿ, ಉಪಮಂತ್ರಿಗಳನ್ನ!" ಎಂದು ಜಂಬ ಕೊಚ್ಚಿಕೊಂಡ. ತನ್ನ ಗಂಡ ಉಪಮಂತ್ರಿಗಳನ್ನು ಕಂಡು ಬಂದದ್ದೇ ಒಂದು ಮಹಾ ವಿಷಯ ವಾಯಿತು ಆ ಹೆಣ್ಣುಮಗಳಿಗೆ. ಮಾರನೆಯ ದಿನ ಬೆಳಿಗ್ಗೆ ಧರ್ಮಣ್ಣ ಅಂಗ ಡಿಗೆ ಹೋಗುತ್ತಲೂ ಆಕೆ ನೆರೆಮನೆಯ ಗೆಳತಿಯನ್ನು ಕರೆದು, ತನ್ನ ಗಂಡನ ಪರಾಕ್ರಮದ ಕತೆಯನ್ನೆಲ್ಲ ಬಣ್ಣಿಸಿ ಹೇಳಿದಳು. ಸಂಜೆಯಾಗುವುದರೊಳ ಗಾಗಿ ಆ ವಾರ್ತೆ ಹಳ್ಳಿಯಲ್ಲೆಲ್ಲ ಹರಡಿತು. ಗೌಡನ ಪಕ್ಷದ ಗರಡಿಯಾಳು ಗಳು ಓಣಿಯಲ್ಲಿ ನಿಂತು ಮೀಸೆಯ ಮೇಲೆ ಕೈಯೆಳೆಯತೊಡಗಿದರು.

ಎರಡು ದಿನಗಳ ತರುವಾಯ, ರಾತ್ರಿ ಎಂಟು ಗಂಟೆಯ ವೇಳೆಗೆ ಎರಡು ಪೋಲೀಸು ಲಾರಿಗಳು ಹಳ್ಳಿಗೆ ಬಂದುವು. ಬಂದೂಕಧಾರಿ ಪೋಲೀಸರು ಎಲ್ಲ ಮನೆಗಳಲ್ಲೂ ಹೊಕ್ಕು ಶೋಧಿಸಿದರು. ಅಕ್ರಮ ಮದ್ಯ ಎಲ್ಲಿಯೂ ದೊರೆಯಲಿಲ್ಲ. ಅನಂತರ, ಹಳ್ಳಿಯ ಸುತ್ತುಮುತ್ತಲಿನ ಗುಡ್ಡ, ಮರಡಿ, ಕೊಳ್ಳಗಳಲ್ಲೆಲ್ಲ ತಿರುಗಿದರು. ಸೆರೆಯ ಭಟ್ಟಿಯಿದ್ದ ಸ್ಥಳವನ್ನೇನೊ ಕಂಡರಾ ದರೂ ಭಟ್ಟಿಯ ಹರವಿಗಳ ಸುಳಿವು ಹತ್ತಲಿಲ್ಲ.

ಬೆಳಗಿನ ಜಾವದಲ್ಲಿ ಪೋಲೀಸು ಲಾರಿಗಳು ಹೊರಟು ಹೋಗುತ್ತಲೂ ಕಾಮಣ್ಣನ ಗುಂಪಿನವರೆಲ್ಲ ವಿಜಯೋತ್ಸಾಹದಿಂದ ಕೇಕೆ ಹಾಕತೊಡಗಿದರು.

ಭೀಮಪ್ಪ ಬಸವಾಣಿಯ ಅಂಗಡಿಗೆ ಬಂದು ನಿಂತು ಗೌಡನ ಪಕ್ಷದವರ ವಂಶಾವಳಿಯನ್ನೆಲ್ಲ ಉದ್ಧಾರ ಮಾಡತೊಡಗಿದ. "ನಮ್ಮನ್ನ ಹಿಡಕೊಂಡು ಹೋಗುತಾರಂತ ಸುದ್ದಿ ಎಬ್ಬಿಸಿದ್ದ ಸೂಳೀಮಕ್ಕಳು ಈಗ ಬರಲಿ ಹೊರಗ. ತೋರಿಸ್ತೇನಿ," ಎಂದು ಪುಂಡ ಆರ್ಭಟಿಸತೊಡಗಿದ.

ಕಾಮಣ್ಣನೊಬ್ಬ ಮಾತ್ರ ಯಾವ ಗದ್ದಲಕ್ಕೂ ಹೋಗದೆ, ಗಂಭೀರ ವಾಗಿ ಮನೆಯಲ್ಲಿ ಕುಳಿತಿದ್ದ.

ಆ ರಾತ್ರಿಯೆಲ್ಲಾ ಹಳ್ಳಿಯಲ್ಲಿ ಗದ್ದಲವೋ ಗದ್ದಲ. ಕಾಮಣ್ಣನ ಪಕ್ಷದ ಪೈಲವಾನರೆಲ್ಲ ಕುಡಿದು, ಅವಾಚ್ಯ ಶಬ್ದಗಳನ್ನಾಡುತ್ತ ಗೌಡನ ಮನೆಯ ಮೇಲೂ ಧರ್ಮಣ್ಣನ ಮನೆಯ ಮೇಲೂ ಕಲ್ಲು ತೂರಿದರು.

ಗೌಡ, ಧರ್ಮಣ್ಣ ಇಬ್ಬರೂ ಮನೆಬಿಟ್ಟು ಹೊರಗೇ ಬರಲಿಲ್ಲ.

## ಹನ್ನೊಂದು

"ಏಳ, ಕೂಳ ಕೆಡಿಸೇಳ ಎದ್ದ. ಹೀಂಗs ಬಿದ್ದಿದ್ದರ ಯಾವ ಗೆಣ್ಯಾನೂ ಬಂದು ರಮಿಸಿ ಎಬ್ಬಿಸೂದಿಲ್ಲ ನಿನ್ನ." ಎಂದು ಸಣ್ಣವ್ವ ಮಗಳನ್ನು ಗದರಿಸುತಿದ್ದಳು.

"ನೀ ತಿಂದ ಬೀಳ," ಎಂದು ಬಾಲಿ ಉತ್ತರವಿತ್ತಳು.

"ದಿನಕ್ಕ ದಿನಾ ನಿನಗ ಮೈಯಾಗ ಸೊಕ್ಕು ಬೆಳೀಲಾಕ ಹತ್ತೈತಿ. ನೀನರೆ ಏನ ಮಾಡೀ?"

"ನಾ ಏನs ಮಾಡಲಿ, ನೀ ಕರಕೊಂಡ ಬಂದವರ ಸಂಗಾತ ಹಾದರಾ ಮಾಡಾಕಂತೂ ತಯಾರಿಲ್ಲ. ತಿಳಕೊಂಡ ಬಿಡ," ಎಂದಳು ಬಾಲಿ.

"ಮಾಡದಿದ್ರ ಕೂಳ ಯಾರ ಹಾಕವ್ರು ನಿನಗ? ಎಷ್ಟ ದಿನಾ ಅಂತ ನನಗ ಮೂಲ ಆಗಿ ಕುಂತು ತಿನಬೇಕಂತ ಮಾಡಿದ್ದೀ?"

"ನಿನ್ನ ಮಾತ ಕೇಳಿ ಮೂರ ವರ್ಷ ಹಾದರಾ ಮಾಡಿ ಗಳಿಸಿದ್ದೇನಲಾ ಅದನ್ನ ಮುರಿಸಿ ಹಾಕಲಾ ಕೂಳ!"

“ಹೂಂ. ಬಳೆ ಗಳಿಸಿದ್ದೀ ತೊಲೀ ತೊಲೀ ಬಂಗಾರಾ. ನಾ ಗಂಟ ಕಟ್ಟಿ ಇಟ್ಟೇನಿ. ಹಾಕತೇನ ನಿನಗ!” ಎಂದು ಸಣ್ಣವ್ವ ಅಣಕವಾಡಿದಳು.

ಅದಕ್ಕೆ ಪ್ರತಿಯಾಗಿ ಬಾಲಿ ಏನನ್ನೂ ಆಡಲಿಲ್ಲ. ಹಾಗೆಯೆ, ಪಡಸಾಲೆ ಯಲ್ಲಿ ಬಿದ್ದುಕೊಂಡಿದ್ದಳು.

“ಅವರು ಬರೂ ಹೊತ್ತಾತು. ಉಂಡು ತಯಾರಾಗಂದರ ನಿಂದs ಹಟಾ ಹಚ್ಚೀದೀಯಲ್ಲ!” ಸಣ್ಣವ್ವ ಬೇಸರದ ಧ್ವನಿಯಲ್ಲಿ ನುಡಿದಳು.

“ಅವರನ್ನ ಕರಿ ಅಂತ ಯಾರ ಹೇಳಿದರs ನಿನಗ? ನಾಯೇನ ಅವರ ಸಂಗಾತ ಮಲಗೂದಿಲ್ಲ.”

“ಯಾಡ್ಡ ತಿಂಗಳಾತು. ಹೀಂಗs ವಾಂಡತನ ಮಾಡಾಕ ಹತ್ತೀದೀ. ಅಂದಿನಿಂದ ಒಂದು ಪೈಯೂ ಗಳಿಸಿಲ್ಲ. ಇವತ್ತಾದರೂ ಬಿಡು ನಿನ್ನ ಹಟಮಾರಿ ತನಾ. ಇವರು ದೊಡ್ಡ ಸಾವುಕಾರರು. ಬಂಗಾರ ಬಳಿ, ದಾಗೀನ, ರುಪಾಯಿ ಸೀರಿ ಯಾವದಕ್ಕೂ ಕಡಿಮಿ ಮಾಡೂದಿಲ್ಲ ನಿನಗ. ನಿನ್ನ ಹೆಸರಿನಾಗ ಒಂದ ಮನೀನs ಬರದುಕೊಡಾಕೂ ತಯಾರಾದಾರು—ಅವರನ್ನ ನೀ ಮಳ್ಳ ಮಾಡಿ ದರ. ಆಮ್ಯಾಲ ನಮಗ ಏನೂ ತ್ರಾಸ ಆಗೂದಿಲ್ಲ. ಸಾಯೂತನಕಾ ಆರಾ ಮಾಗಿ ಕುಂತು ತಿನ್ನಬಹುದು....”

“ನೀನs ಅರಾಮಾಗಿ ಅವರನ್ನ ಇಟಗೊಂಡು ಕುಂತು ತಿನ್ನು ಸಾಯೂ ತನಕಾ....”

ಸಣ್ಣವ್ವ ಕ್ರೋಧದಿಂದ ಅಡುಗೆಯ ಕೊಟಡಿಯಿಂದೆದ್ದು ಬಂದು, ಮಗಳ ತಲೆಗೂದಲನ್ನು ಹಿಡಿದು, ಎರಡು ಕೆನ್ನೆಗಳಿಗೂ ರಪರಪನೆ ಏಟು ಹಾಕಿದಳು.

“ಹಡದ ತಾಯಿಗೇ ಬಾಯಿಗೆ ಬಂದಂಗ ಮಾತಾಡತೀ ಹೊಯ್ಮಾಲೀ!”

ಬಾಲಿಯೂ ಎದ್ದು, ತಾಯಿಯನ್ನೆದುರಿಸಿ ನಿಂತು— “ಹಡದ ತಾಯಿ ಯಲ್ಲ ನೀ. ನನ್ನ ಹರಕೊಂಡ ತಿನ್ನುವ ಇದಿಮಾಯಿ....ಇದಿಮಾಯಿ!” ಎಂದಳು.

“ನಡೀ ನನ್ನ ಮನೀ ಬಿಟ್ಟ. ಪುಕ್ಕಟೀs ಕೂಳ ತಿನ್ನೂದು....ಮತ್ತು ನನಗs ಬಲ್ಲಂಗ ಮಾತಾಡೂದು. ನಡೀ ಹೊರಗ....”

“ಹೋಗುತೀನಿ, ಹೋಗುತೀನಿ. ನೀನೆs ಇರು ಇಲ್ಲೆ. ಚಲೋ ಚಲೋ ಗೆಣೇರನ ಕಟಕೊಂಡ. ಇನ್ನ ಮ್ಯಾಲ ನಿನ್ನ ಮಾರೀ ನೋಡಿದರ

ಹೇಳ. ನೀ ಸತ್ತರೂ ಸುದ್ಧಾ ಇತ್ತ ಹಾಯೂದಿಲ್ಲ...." ಎಂದು ಅರಚುತ್ತ ಬಾಲಿ ಮನೆಬಿಟ್ಟು ಹೊರಟಳು.

"ಹೋಗ. ಭಿಕಾರಿಯ ಹಂಗ ತಿರುಗಿದಾಗ ತಿಳೀತೈತಿ ನಿನಗ."

ಬಿರುಬಿರನೆ ಹೊರಟಿದ್ದ ಬಾಲಿ ಥಟ್ಟನೆ ಹೊರಳಿ ನಿಂತು, "ಭಿಕಾರಿ ನೀನs ಆಗು. ನಾಯಾಕ ಆಗಲಿ? ಎಲ್ಲ್ಯಾರೂ ದುಡಕೊಂಡ ತಿಂತೀನಿ" ಎಂದಳು.

"ನಿನ್ನಂಥಾಕಿಗೆ ಕೆಲಸ ಸಿಗೂದು ಎಂಥಾದು? ಅದs ಸೂಳೀ ಕೆಲಸ!"

"ಜೀವ ಹೋದರೂ ಇನ್ನ ವ್ಯಾಲ ಅದನ್ನ ಮಾಡೂದಿಲ್ಲ ನಾ. ನೇರ ಗಿಗೆ ಗಂಟು ಹಾಕ್ಕೊಂಡು ಬಿಡ."

"ಗೊತ್ತೈತಿ ಹೋಗ!" ಎಂದಳು ಸಣ್ಣವ್ವ.

"ನಿಂದೂ ಗೊತ್ತೈತಿ ಕುಂದ್ರು!" ಎಂದವಳೇ ಬಾಲಿ ಅಲ್ಲಿಂದ ಹೊರಟು ಬಿರುಗಾಳಿಯಂತೆ ಬೀದಿಯಲ್ಲಿ ನಡೆದಳು.

ಒಂದಿಲ್ಲೊಂದು ದಿನ ತಾನು ತಾಯಿಯ ಮನೆಯಿಂದ ಹೊರಡಬೇಕಾ ಗುವುದೆಂದು ಬಾಲಿಗೆ ಎರಡು ತಿಂಗಳ ಮೊದಲೇ ಅನ್ನಿಸಿತ್ತು. ಅಂದು—ಗಿರಿ ಯನ ಅಜ್ಜನನ್ನು ತಾನು ಕಂಡು ಬಂದಂದಿನಿಂದ ದಿನವೂ ತಾಯಿಗೂ ತನಗೂ ವಾದ-ವಿವಾದ ಒಂದೇಸವನೆ ನಡೆಯುತ್ತ ಬಂದಿದೆ. ಇನ್ನು ಮುಂದೆ ಹಾದ ರಕ್ಕೆ ಬೀಳಬಾರದೆಂದು ತನ್ನ ಹಟ. ತನ್ನನ್ನು ಮತ್ತೆ ಆ ಹೊಲಸು ಬಾಳಿಗೇ ಎಳೆಯಬೇಕೆಂದು ತಾಯಿಯ ಹಟ. ಗಿರಿಯನೊಂದಿಗೆ ಉಡಿಕೆಯಾಗುವ ಆಸೆಯಂತೂ ನಿರಾಸೆಯಲ್ಲಿ ಪರಿಣಮಿಸಿತ್ತು. ತಾನು ಮುಂದೇನನ್ನು ಮಾಡ ಬೇಕೆಂಬುದರ ಸ್ಪಷ್ಟ ಕಲ್ಪನೆ ತನಗಿರಲಿಲ್ಲ. ಕೂಲಿ ಕುಂಬಳಿ ಮಾಡಿ ಹೊಟ್ಟೆ ಹೊರೆದುಕೊಳ್ಳಬೇಕೆಂದು ಯೋಚಿಸಿದ್ದಳು. ಹಳ್ಳಿಯಲ್ಲಿ ಕೆಲಸ ದೊರೆತಿರ ಲಿಲ್ಲ. ಜಿಲ್ಲೆಯ ಸ್ಥಳಕ್ಕೆ ಹೋದರೆ ಏನಾದರೂ ಕೆಲಸ ಸಿಕ್ಕಬಹುದೆಂಬ ಆಸೆ ಯಿತ್ತು. ಆದರೆ, ಹರೆಯದ ಹೆಣ್ಣಾದ ತಾನು ಗುರುತು ಪರಿಚಯದ ಜನ ರಿಲ್ಲದ ಊರಿಗೆ ಒಬ್ಬಳೇ ಹೋಗುವುದು ಹೇಗೆ ಸಾಧ್ಯ? ಇರುವುದೆಲ್ಲಿ? ಯಾರ ಜತೆಗೆ? ಮಾಡುವುದೇನನ್ನು? ಒಂಟಿಯಾಗಿ ಹೋಗುವ ಹರೆ ಯದ ಹೆಂಗುಸರಿಗೆ ನಗರದಲ್ಲಿ ದೊರೆಯುವ ಆಸೆಯೆಂದರೆ ಸೂಳೆಯರ ಓಣಿ

ಗಳಲ್ಲಿ ಮಾತ್ರ. ಆ ಹೇಸಿ ಬಾಳಿನ ಬಗೆಗೆ ತನಗೆ ತಿರಸ್ಕಾರವುಂಟಾಗಿದೆ. ಅದ ರಿಂದ ತಪ್ಪಿಸಿಕೊಳ್ಳಲೆಂದೇ ನಗರಕ್ಕೆ ಹೋಗಲಿಚ್ಛಿಸುವವಳು ತಾನು. ಅಲ್ಲಿಯೂ ಅದೇ ಬಾಳು ಬಾಳುವುದೇ ಆದರೆ ಹಳ್ಳಿಯನ್ನು ಬಿಟ್ಟು ಹೋಗುವುದರಿಂದ ಉಪಯೋಗವಾದರೂ ಏನು ? ಛೆ. ಒಮ್ಮೆ ಗಟ್ಟಿ ಮಾಡಿದುದಾಗಿದೆ. ಇನ್ನು ಸೂಳೆಗಾರಿಕೆ ಮಾಡುವಂತಿಲ್ಲ. ಸಾಯುವ ಪ್ರಸಂಗ ಬಂದರೂ ಮಾಡು ವಂತಿಲ್ಲ....

ನೆತ್ತಿಯ ಮೇಲೆ ತಾರೆಗಳು ಮಿನುಗುತಿದ್ದುವು. ಬೇಸಿಗೆಯ ಉಷ್ಣ ಗಾಳಿ ಮಂದಮಂದವಾಗಿ ಬೀಸುತಿತ್ತು. ಕತ್ತಲೆಯಲ್ಲಿ ಏಕಾಕಿಯಾಗಿ ಅಲೆ ಯುವುದು ಹೊಸ ವಿಷಯವೇನೂ ಅಲ್ಲ ಬಾಲಿಗೆ. ಅವಳು ಮೊದಲಿನಿಂದಲೂ ಧೈರ್ಯವಂತೆ. ಭೂತ ಪಿಶಾಚಿಗಳ ಭಯವೇನೂ ಆಕೆಗಿಲ್ಲವಾದರೂ ತಾನು ಹೆಂಗುಸು ಎಂಬುದನ್ನು ಮಾತ್ರ ಪೂರ್ತಿಯಾಗಿ ಮರೆಯಲಾರಳು. ತಾಯಿ, ತನ್ನನ್ನು ಹೀಗೆ ಹೋಗಲು ಬಿಟ್ಟು ಸುಮ್ಮನೆ ಕುಳಿತುಕೊಳ್ಳಬಹುದೇ ? ಯಾರನ್ನಾದರೂ ತನ್ನ ಹಿಂದೆ ಬಿಟ್ಟು ಬಲಾತ್ಕಾರದಿಂದ ತನ್ನನ್ನು ಹೊತ್ತು ಕೊಂಡೊಯ್ಯಲು ಕಳಿಸಲಿಕ್ಕಿಲ್ಲವಷ್ಟೆ ? ಅವಳಿಗೆ ವಯಸ್ಸಾಗುತ್ತ ಬಂತು. ಕುಲಕರಣಿ ವೆಂಕಪ್ಪನನ್ನುಳಿದು ಇನ್ನಾರೂ ಅವಳ ಬಳಿ ಸುಳಿಯುತ್ತಲಿಲ್ಲ. ಆ ವೆಂಕಪ್ಪನಿಂದ ಅವಳಿಗೆ ಹಣ ಸಿಕ್ಕುವುದೂ ಅಷ್ಟರಲ್ಲೇ ಇದೆ. ತನ್ನನ್ನು ಬಿಡಲು ತಾಯಿಗೆ ಕೊಂಚವೂ ಇಷ್ಟವಿಲ್ಲ. ತನ್ನನ್ನು ಹಾದರಕ್ಕೆ ತೊಡಗಿಸಿ ಬಂದ ಹಣದಿಂದ ಸುಖವಾಗಿ ಬದುಕುವ ಬಯಕೆ ಅವಳದು. ಅವಳಿಂದಲೇ ತಾನು ಅಡ್ಡದಾರಿಗಿಳಿದಂತಾಯಿತು. ಬಾಳನ್ನೆಲ್ಲ ಹಾಳು ಮಾಡಿಕೊಂಡಂತಾ ಯಿತು. ತಾನು ಕೆಟ್ಟು ಹೋಗಿರದಿದ್ದಲ್ಲಿ ಗಿರಿಯ ತನ್ನನ್ನು ಹಾಗೆ ತಿರಸ್ಕಾರ ದಿಂದ ಕಾಣುತ್ತಿರಲಿಲ್ಲ. ಅವನೊಂದಿಗೆ ಉಡಿಕೆಯಾಗಿ ಸುಖದಿಂದ ಸಂಸಾರ ಮಾಡಿಕೊಂಡಿರಲು ಸಾಧ್ಯವಾಗುತ್ತಿತ್ತು. ತನ್ನ ತಾಯಿ....ತಾಯಿಯಲ್ಲ.... 'ಇದಿ ಮಾಯಿ....'

ರೈಲ್ವೆ ನಿಲ್ದಾಣ ಸಮೀಪಿಸಿತ್ತು. ಬಾಲಿ ತ್ವರೆಯಿಂದ ನಡೆಯತೊಡಗಿ ದಳು. ರಾತ್ರಿಯ ರೈಲು ಬರುವ ಸಮಯವಾಗಿರಬೇಕು. ಮನೆಯನ್ನಂತೂ ಬಿಟ್ಟು ಬಂದುದಾಯ್ತು. ಇನ್ನು ರೈಲು ಹತ್ತಿ ನಗರಕ್ಕೆ ಹೋಗಬೇಕು. ತನ್ನ ಹತ್ತಿರ ಒಂದು ಕಾಸೂ ಇಲ್ಲ. ಟಿಕೆಟ್ಟಿಗೆ ಹಣ ಬೇಡವೆ ?

ಹಾಗೆ ಯೋಚಿಸುತ್ತ ಅವಳು ನಿಲ್ದಾಣದ ಪ್ಲಾಟ್‌ಫಾರ್ಮಿನ ಮೇಲೆ ಬರುತ್ತಿದ್ದ ಹಾಗೆ, ದೀಪದ ಕಂಬದ ಕೆಳಗಡೆ ದೊಡ್ಡದೊಂದು ಬುಟ್ಟಿಯಿಟ್ಟು, ಅದರ ಹತ್ತರ ಕುಳಿತಿದ್ದ ನಡುವರಯದ ಹೆಂಗುಸೊಬ್ಬಳನ್ನು ಕಂಡು, ಗುರುತಿ ಸಿಕ್ಕೊಂಡು, ಆ ಸಮಯದಲ್ಲಿ ಅವಳ ಭೆಟ್ಟಿಯಾದುದಕ್ಕಾಗಿ ಮನಸ್ಸಿನಲ್ಲಿಯೆ ಸಂತೋಷಪಟ್ಟುಕೊಳ್ಳುತ್ತ— " ಎತ್ತ ಹೊಂಟೆ ಮುರಿಗೆವ್ವಾ, ಶಹರಕ್ಕೇನ ?" ಎಂದು ಕೇಳಿದಳು.

ಮುರಿಗೆವ್ವ ಮುಖವೆತ್ತಿ ಬಾಲಿಯನ್ನು ಗುರುತಿಸಿ, " ಅಯ್ಯs, ಯಾಕs ಬಾಲೀ, ಒಬ್ಬಾಕೇ ಎತ್ತಲಾಗ ಹೊಂಟಿ ? " ಎಂದಳು.

ಬಾಲಿ ಮುರಿಗೆವ್ವನ ಬಳಿ ಕುಳಿತುಕೊಂಡು ಹೇಳಿದಳು: " ಶಹರಕ್ಕs ಬರಬೇಕಂತ ಮಾಡೀನಿ. ಕರಕೊಂಡ ಹೋಗುತಿಯೇನ ? "

" ಒಬ್ಬಾಕೇ ಯಾಕ ಬಂದಿ ? "

ತಾಯಿಯೊಂದಿಗೆ ಜಗಳವಾಡಿ ತಾನು ಮನೆಬಿಟ್ಟು ಬಂದ ವಿಷಯ ವನ್ನು ಮುರಿಗೆವ್ವನಿಗೆ ಸ್ವಲ್ಪದರಲ್ಲಿಯೆ ವಿವರಿಸಿ ಹೇಳಿ, ಬಾಲಿ— " ಮನೀ ಅಂತೂ ಬಿಟ್ಟ ಹೊಂಟೀನಿ. ಮುಂದೇನಾಗುತ್ತೈತ್ಯೋ ನೋಡಬೇಕು. " ಎಂದಳು.

" ಶಹರದಾಗ ಇರುವಾಕಿ ಎಲ್ಲಿ ? ಮಾಡುವಾಕಿ ಏನ ? "

" ಅದೆಲ್ಲಾ ಮಾದೇವಗs ಗೊತ್ತು ! "

" ಅಯ್ಯs, ಹುಚ್ಚ ನನ್ನ ಮಗಳs ! " ಮುರಿಗೆವ್ವ ನಗುತ್ತಾ ಹೇಳಿ ದಳು: " ಶಹರ ಅಂದರ ಏನಂತ ತಿಳಿದೀದೀಯೆ ? ನಿನ್ನಂಥಾ ಹರೇದವರು ಅಲ್ಲಿ ಹೋದರ ಮುಗಿದs ಹೋತು. ತೋಳ ಕುರಿ ತಿಂದಂಗ ತಿಂದು ಬಿಡು ತಾರು. "

" ಹೆಂಗ ತಿಂತಾರೋ ನೋಡುತೀನಿ. ಎಲ್ಲಾದಕ್ಕೂ ತಯಾರಾಗೇ ಹೊಂಟೀನಿ. "

" ಅಯ್ಯs ! ನಿನಗಿನ್ನs ಗೊತ್ತಿಲ್ಲ ಶಹರದವರ ಕೈ ! "

" ಇರಲಿರಲಿ. ನೋಡಿದರಾತು. ರಾತ್ರಿ ನೀ ಅಲ್ಲಿ ಎಲ್ಲಿ ವಸ್ತಿ ಮಾಡುತೀ ಮುರಿಗೆವ್ವ ? "

" ನಮ್ಮ ಕಡೆಯವರೇ ಒಬ್ಬರದಾರಲಾ ಅಲ್ಲಿ—ಅವಲಕ್ಕೀ ಕಾರಖಾನೆ

ದಾಗ ಕೆಲಸಾ ಮಾಡುತಾನ—ಸಿದ್ದಪ್ಪ ಅಂತ. ನಿನಗೂ ಅವನು ದೂರದಿಂದ ಸಂಬಂಧ ಆಗೂ ಹಂಗ ಕಾಣುತ್ತೈತಿ."

"ನನಗ ಸಂಬಂಧ?" ಬಾಲಿ ಆಶ್ಚರ್ಯದ ಧ್ವನಿಯಲ್ಲಿ ಕೇಳಿದಳು.

"ಹೂಂ. ಹೀಂಗs ಕಳ್ಳಬಳ್ಳಿ. ಅವರು ಊರು ಬಿಟ್ಟು ಶಹರಕ್ಕ ಹೋಗಿ ನಲವತ್ತ ಐವತ್ತ ವರ್ಷ ಆತಂತ. ನಿನಗೇನೋ ಕಾಕಾ ಆಗಬೇಕ ಆ ಸಿದ್ದಪ್ಪ. ನಿನಗ ಗೊತ್ತ್ಕs ಇರಾಕಿಲ್ಲೇನ?"

"ಇಲ್ಲ ಬಿಡವ್ವ. ಈಗ ನೀ ಹೇಳಿದಾಗs ಗೊತ್ತಾತ ನೋಡ."

ನಗರದಲ್ಲಿ ಏನಾಗುವುದೋ ಎಂದು ಚಿಂತಿಸುತ್ತಿದ್ದ ಬಾಲಿಗೆ ತುಂಬ ಸಮಾಧಾನವಾದಂತಾಯಿತು. ತನ್ನ ಆ ದೂರದ ಸಂಬಂಧಿಕರ ಮನೆಯಲ್ಲಿ ತನಗೆ ಆಶ್ರಯ ದೊರೆಯಬಹುದೆಂದೇ ತೋರುತ್ತದೆ. ಅವರ ಸಹಾಯದಿಂದಲೇ ತನಗೂ ಒಂದು ಕೆಲಸ ದೊರೆಯಬಹುದು. ಸಂಪಾದಿಸಿದ ದುಡ್ಡನ್ನು ಅವರ ಕೈಗೇ ಒಪ್ಪಿಸಿ, ಅವರಲ್ಲಿಯೇ ಊಟ ಮಾಡಿಕೊಂಡು ಇರಲೂ ಸಾಧ್ಯವಾಗಬಹುದು....

ದೂರದಿಂದ ರೈಲು ಬರುತ್ತಿದ್ದುದು ಕಾಣಿಸಿತು. ಅದರ ತೀಕ್ಷ್ಣ ಬೆಳಕು ಅರ್ಧ ಮೈಲಿನ ವರೆಗೂ ಕೈಚಾಚಿ ರೈಲು ಕಂಬಿಗಳನ್ನು ತಬ್ಬಿಕೊಂಡಿತು.

"ಟಿಕೀಟು?" ಎಂದಳು, ಬಾಲಿ.

"ನಮುಗ್ಯಾತಕ್ಕ ಟಿಕೀಟs?" ಎಂದು ನುಡಿಯುತ್ತ ಮುರಿಗೆವ್ವ, ಮೆಣಸಿನಕಾಯಿಯ ಬುಟ್ಟಿಯನ್ನು ತಲೆಯ ಮೇಲಿಟ್ಟುಕೊಂಡು ಸಿದ್ಧಳಾದಳು.

"ಟಿಕೀಟು ಬ್ಯಾಡ ಅಂತೀಯಾ??

"ನಮುಗ್ಯಾರ ಟಿಕೀಟ ಕೇಳತಾರ ಬಾರs. ಟಿಕೀಟು ಚಕರಗೋಳೂ ನಮ್ಮವರs ಅದಾರ," ಎಂದು ಹೇಳಿ ಮುರಿಗೆವ್ವ ನಕ್ಕಳು.

ರಾತ್ರಿಯ ಗಾಡಿಯಾದುದರಿಂದ ಜನರ ಗದ್ದಲವಿರಲಿಲ್ಲ. ಅರ್ಧಕ್ಕರ್ಧ ಬರಿಯದಾಗಿದ್ದ ಡಬ್ಬಿಯೊಂದರಲ್ಲಿ ಹತ್ತಿ ಕುಳಿತುಕೊಂಡದ್ದಾಯಿತು. ಸಿಳ್ಳು ಹಾಕಿ ರೈಲು ನಿಧಾನವಾಗಿ ಮುಂದೆ ಸಾಗಿತು.

"ದಿನಾಲೂ ಟಿಕೀಟs ತಗೊಳ್ಳೂದಿಲ್ಲೇನs ನೀ?" ಎಂದು ಬಾಲಿ ಕಳ್ಳಧ್ವನಿಯಲ್ಲಿ ಕೇಳಿದಳು.

"ದಿನಾ ಟಿಕೀಟ ತಕ್ಕೊಂಡ ಹೋದರ ನಮುಗ ಲಾಭ ಆಗೂದಾದರೂ

ಹೆಂಗ ? ರಾತ್ರಿ ಗಾಡಿಗೆ ಹೋಗಿ ವಸ್ತಿ ಮಾಡಿ ಬೆಳಗಿನಿಂದ ಸಂಜೀತನಕಾ ಬಿಸಿಲಾಗ ಕುಂತು ಮಾರಿದರೂ ಬುಟ್ಟಿಗೆ ಹತ್ತು ರೂಪಾಯಿ ಬರೂದಿಲ್ಲ. ಇನ್ನ ಟಿಕೀಟಿಗೆ ಯಾಡ್ಡ ರೂಪಾಯಿ ಎಲ್ಲಿಂದ ತರೂದs ? ”

“ ಮತ್ತs ? ಹೆಂಗ ಬಿಡುತಾರ ? ”

“ ಈ ಮೆಣಸಿನಕಾಯಿ ವ್ಯಾಪಾರ ನಾ ಮಾಡಾಕ ಹತ್ತಿದ್ದಕ್ಕ ಐದಾರು ವರುಷಾತು. ರೇಲ ನೋಕರರದ್ದೆಲ್ಲಾ ಗುರುತಾಗ್ಯೆತಿ. ಅವರಿಗೆ ಯಾವಾಗೆರೆ ಏನಾರೆ ಕೊಟ್ಟರಾತು. ಅಷ್ಟರ ಮ್ಯಾಲs ನಡೀತೈತಿ. ”

“ ಅಂದರs ? ”

“ ಅದನ್ನೂ ಒಡದs ಹೇಳಬೇಕೇನs ? ನೀಯೇನು ಅರಿಯದಾಕಿಯಲ್ಲಲ್ಲ ? ಸಾಕಷ್ಟ ಮಂದಿ ಗೆಣೇರನ ನೋಡೀದೀ........ ” ಮುರಿಗೆವ್ವ ನಗುತ್ತ ನುಡಿದಳು.

“ ಅಂದರss ? ರೇಲ ನೌಕರರ ಗೆಣೆತನಾ.... ? ”

“ ಹೂಂ. ಅವರೂ ಗಂಡಸರs ಅಲ್ಲೇನ ? ” ಎಂದು ನುಡಿದು ಮುರಿಗೆವ್ವ ಉಡಿಯಿಂದ ತಂಬಾಕು ಚೀಲ ತೆಗೆದು ಎಲೆ ಹಾಕಿಕೊಳ್ಳತೊಡಗಿದಳು.

ಮುರಿಗೆವ್ವನ ವಿಷಯವನ್ನು ಬಾಲಿ ಆ ಮೊದಲೇ ಅಲ್ಪಸ್ವಲ್ಪ ಅರಿತಿದ್ದಳು. ತನ್ನಂತೆ ಅವಳೂ ಗಂಡನನ್ನು ಬಿಟ್ಟು ಬಂದವಳು. ಕೋಗೀಹಳ್ಳಿ ಅವಳ ತವರೂರು. ತಂದೆಯದೊಂದು ಮನೆಯಿತ್ತು. ಅಣ್ಣತಮ್ಮಂದಿರಾರೂ ಇರಲಿಲ್ಲ. ಮುರಿಗೆವ್ವ ಮತ್ತೊಬ್ಬನನ್ನು ಉಡಿಕೆಯಾಗುವ ಗೊಡವೆಗೆ ಹೋಗದೆ ತನ್ನ ಒಬ್ಬನೇ ಒಬ್ಬ ಮಗನ ಜತೆಗೆ ತವರುಮನೆಯಲ್ಲಿಯೇ ನೆಲಸಿದ್ದಳು. ಕೆಲವು ದಿನ ಕೂಲಿ ಮಾಡುತ್ತ ಜೀವಿಸಿದ್ದಳು, ಅನಂತರ ಮೆಣಸಿನಕಾಯಿ ವ್ಯಾಪಾರ ಕೈಕೊಂಡಿದ್ದಳು. ಹತ್ತು ಹನ್ನೊಂದು ವರುಷದ ಅವಳ ಮಗ ಕನ್ನಡ ಸಾಲೆಯಲ್ಲಿ ಕಲಿಯುತ್ತಿದ್ದ. ಮುರಿಗೆವ್ವನ ನಡತೆ ನೆಟ್ಟಗಿಲ್ಲವೆಂಬುದು ಹಳ್ಳಿಯಲ್ಲೆಲ್ಲ ಮನೆ ಮಾತಾಗಿತ್ತು. ತನ್ನಂತೆ, ತನ್ನ ತಾಯಿಯಂತೆ ಮುರಿಗೆವ್ವ....

“ ವ್ಯಾಪಾರ ಹೆಂಗೈತಿ ಮುರಿಗೆವ್ವ ? ”

“ ಲುಕ್ಸಾನ ಏನೂ ಇಲ್ಲವ್ವ. ಆದರೂ ಅಂಥಾ ಲಾಭನೂ ಇಲ್ಲ. ”

“ ದಿನಾ ಮೂರು ನಾಕು ರೂಪಾಯಿ ಉಳೀತಿರಬೇಕಲ್ಲ ? ”

"ಹೂಂ. ಅಷ್ಟಾದರ ಬಹಳ ಆತು"

"ಮೂರು ನಾಕು ಅಂದರೂ ಏನ ಕಡಿಮಿಯಾತೇನs? ಸಾಕಷ್ಟು ಗಂಟ ಮಾಡಿರಬೇಕಲ್ಲಾ ಇಷ್ಟೊತ್ತಿಗೆ?"

"ಎಲ್ಲೀ ಗಂಟs ಬಾಲೀ? ಅರೊಂದ ಹೊಲಾ ತಗೋಬೇಕಂತ ಲೆಕ್ಕ ಹಾಕೀನಿ. ಐದು ಸಾವಿರಕ್ಕ ಕೊಡತೀನಿ ಅಂತ ಇನಾಮುದಾರ ಹೇಳಿ ದಾರ. ಅದನ್ನೊಂದ ತಗೊಂಡ ಮ್ಯಾಲ ಈ ವ್ಯಾಪಾರ ಬಿಟ್ಟಬಿಡಬೇಕಂತ ಮಾಡೀಸಿ. ಅಷ್ಟರಾಗ ನನ್ನ ಮಗ ಇಂಗ್ಲೀಷ ಕಲಿತಿರತಾನ. ಅವಗ ರೇಲ್ವೇದಾಗ ಏನಾರೆ ನೌಕರಿ ಕೊಡಿಸುತೀನಂತ ಚಕರ್‌ಸಾಬ ಹೇಳಿ ದಾನ."

"ಇಂಗ್ಲೀಷ ಕಲಿಸುವಾಕೇನ ಮಗನಿಗೆ?" ಎಂದು ಬಾಲಿ ವಿಸ್ಮಯ ದಿಂದ ಕೇಳಿದಳು.

"ಹೌದು. ಕಲಿಸಬೇಕಂತ ಮಾಡೀನಿ. ಇನ್ನೊಂದು ಯಾಡ್ಡ ವರ ಸಕ್ಕ ಅವನ ಮುಲ್ಕೀ ಪರೀಕ್ಷೆ ಆಗುತ್ತೈತಿ. ಆಮ್ಯಾಲ ಅವನ್ನ ಶಹರಕ್ಕs ತಂದು ಸಿದ್ದಪ್ಪಗೋಳ ಮನಿಯಾಗ ಇಡುತೀನಿ. ಅವಗೂ ಕಲಿಯುವ ಹುರು ಪೈತಿ ಬಹಾಳ," ಎಂದು ಅಭಿಮಾನದಿಂದ ಹೇಳಿದಳು ಮುರಿಗೆವ್ವ.

ರೈಲು ನಗರವನ್ನು ತಲುಪಿದಾಗ ಗಂಟೆ ಹತ್ತೂವರೆಯಾಗಿತ್ತು. ಇಬ್ಬರೂ ಡಬ್ಬಿಯಿಂದಿಳಿದು ಹೊರಟರು. ಟಿಕೆಟ್ಟು ತೆಗೆದುಕೊಳ್ಳಲು ದ್ವಾರ ದಲ್ಲಿ ನಿಂತಿದ್ದ ರೇಲ್ವೆ ಅಧಿಕಾರಿ ಮುರಿಗೆವ್ವನನ್ನು ನೋಡುತ್ತಲೂ ಹುಬ್ಬು ಹಾರಿಸಿ ನಕ್ಕ, "ಇವಳೂ ನಮ್ಮವಳs," ಎಂದು ನುಡಿದು ಬಾಲಿಯನ್ನು ದಾಟಿಸಿದಳು ಮುರಿಗೆವ್ವ.

ಸ್ಟೇಶನ್ ರಸ್ತೆಯಲ್ಲಿ ಹೊರಟು, ಬಲಕ್ಕೆ ತಿರುಗಿಕೊಂಡು, ಅರ್ಧ ಮೈಲು ನಡೆದು, ಅನಂತರ ಎಡಕ್ಕೆ ಹೊರಳಿ, ಕೆಲವು ಚಿಕ್ಕ ಓಣಿಗಳಲ್ಲಿ ಹಾಯ್ದು, ವಿದ್ಯುದ್ದೀಪವಿಲ್ಲದಿದ್ದ ಕತ್ತಲೆಯ ಬೀದಿಯೊಂದಕ್ಕೆ ಬಾಲಿಯನ್ನು ಕರೆದು ತಂದಳು ಮುರಿಗೆವ್ವ, ಬೀದಿಯಲ್ಲೆಲ್ಲ ಚರಂಡಿ ನೀರಿನ ದುರ್ಗಂಧ ಪಸರಿ ಸಿತ್ತು. ಎಡಕ್ಕೂ ಬಲಕ್ಕೂ ಹರಡಿದ್ದ ಚಿಕ್ಕ ಚಿಕ್ಕ ಮನೆಗಳು ಚಿಕ್ಕೆಗಳ ಬೆಳ ಕಿನಲ್ಲಿ ಅಸ್ಪಷ್ಟವಾಗಿ ಗೋಚರಿಸುತ್ತಿದ್ದುವು. ಅವುಗಳಲ್ಲಿ ವಾಸಿಸುತ್ತಿದ್ದ ಜನ ರೆಲ್ಲ ನಿದ್ರಾಧೀನರಾದಂತಿತ್ತು. ಯಾವ ಮನೆಯಲ್ಲೂ ಬೆಳಕು ಕಾಣುತ್ತಿರ

ಲಿಲ್ಲ.

ಸಣ್ಣ ಮನೆಯೊಂದರ ಮುಂದೆ ನಿಂತು ಮುರಿಗೆವ್ವ ಮೆಲ್ಲನೆ ಬಾಗಿಲು ತಟ್ಟಿ, " ಬಸವ್ವಾ, ಏ ಬಸವ್ವಾ, " ಎಂದು ಕೂಗಿದಳು.

ಒಳಗಡೆ ಕಡ್ಡಿ ಕೊರೆದ ಸದ್ದು ಕೇಳ ಬಂದಿತು. ಒಡನಯೆ ಬಾಗಿಲೂ ತೆಗೆಯಲ್ಪಟ್ಟಿತು. ಸಣ್ಣ ಬಾಗಿಲು. ಒಳಗಡೆ ಅಡಿಯಿರಿಸುವಾಗ ದೇಹವನ್ನು ಅರ್ಧಕ್ಕರ್ಧ ಬಾಗಿಸಬೇಕಾಗುತಿತ್ತು. ತಲೆಯ ಮೇಲಿನ ಬುಟ್ಟಿಯನ್ನಿಳಿಸಿ ಕೈಗಳಲ್ಲಿ ಹಿಡಿದುಕೊಂಡು ಮುರಿಗೆವ್ವ ಒಳಸೇರಿದಳು. ಅವಳ ಹಿಂದೆ ಹಿಂದೆ ಬಾಲಿಯೂ ಮನೆಯಲ್ಲಿ ಪ್ರವೇಶಿಸಿದಳು.

ತೀರಾ ಸಣ್ಣದಾಗಿದ್ದ ಮನೆಯ ನಡುವೆ ಗೋಣಿತಟ್ಟಿನ ಚೀಲಗಳನ್ನು ಪರದೆಯಂತೆ ಇಳಿಬಿಟ್ಟು, ಎರಡು ಭಾಗಗಳನ್ನು ಮಾಡಲಾಗಿದ್ದಿತು. ಬಾಗಿಲಿನ ಬಳಿಯಲ್ಲಿಯೆ ಹಾಸಿದ್ದ ಚಾಪೆಗಳ ಮೇಲೆ ಹರಕು ಚದ್ದರಗಳನ್ನು ಹೊದೆದು ಕೊಂಡು ಇಬ್ಬರು ಹುಡುಗರು ನಿದ್ರೆ ಹೋಗಿದ್ದರು. ಅವರ ಬಳಿಯಲ್ಲಿಯೆ ಮನೆಯ ಒಡೆಯ ಸಿದ್ದಪ್ಪನೂ ಮಲಗಿದ್ದ. ಗೋಣಿ ಚೀಲಗಳ ಛಿದ್ರಗಳೊಳ ಗಿನಿಂದ, ಆಚೆಯ ಭಾಗದಲ್ಲಿದ್ದ ಗಡಿಗೆ ಮಡಕೆಗಳು ಕಾಣಿಸುತಿದ್ದುವು.

ಬಾಗಿಲು ಮುಚ್ಚಿ ಬಸವ್ವ ಕೈಗಳೆರಡನ್ನೂ ಮೇಲಕ್ಕೆತ್ತಿ ಕುರುಡರಂತೆ ಹಾಸುಗೆಯ ಕಡೆ ನಡೆದುಬರುವುದನ್ನು ಕಂಡಾಗ ಬಾಲಿ ಬೆಚ್ಚಿ ಬಿದ್ದು— " ಇವಳ ಕಣ್ಣು ಕಾಣುವದಿಲ್ಲೇನ ಮುರಿಗೆವ್ವ ? " ಎಂದು ಕೇಳಿದಳು.

ಬುಟ್ಟಿಯನ್ನು ಮೂಲೆಯಲ್ಲಿಟ್ಟು ಮುರಿಗೆವ್ವ ಹೇಳಿದಳು:

" ಹೌದು ಪಾಪ. ಕಾಣೂದಿಲ್ಲ. ಯಾಡ್ಡ ವರಸದ ಹಿಂದ ಒಂದು ಬಾಣಂತನದಾಗ ಹೀಂಗಾತಂತ. "

ಹಾಸುಗೆಯ ಮೇಲೆ ಕುಳಿತುಕೊಂಡು, ತನ್ನ ಕುರುಡು ಕಣ್ಣುಗಳನ್ನು ಬಾಲಿಯ ಕಡೆ ತಿರುಗಿಸಿ, ಬಸವ್ವ ಕೇಳಿದಳು:

" ಈಕಿ ಯಾರು ಮುರಿಗೆವ್ವ ? "

ಮುರಿಗೆವ್ವ ಸ್ವಲ್ಪದರಲ್ಲಿಯೆ ಬಾಲಿಯ ಪರಿಚಯ ಮಾಡಿಕೊಟ್ಟಳು.

ಬಸವ್ವನ ಮುಖದ ಮೇಲೆ ಆನಂದದ ತೆರೆಯೊಂದು ಹರಡಿತು. ಬಾಲಿ ಯನ್ನು ಹತ್ತಿರ ಕೂಡ್ರಿಸಿಕೊಂಡು, ವಾತ್ಸಲ್ಯದಿಂದ ಅವಳ ತಲೆಯನ್ನು ನೇವ ರಿಸುತ್ತ ಅವಳೆಂದಳು:

"ಸಣ್ಣಪ್ಪನ ಮಗಳೇನ ನೀ? ಬಾಳ ಪರಸಾತು. ಕಳ್ಳಬಳ್ಳಿಯವ ರಾರದೂ ಭೆಟ್ಟಿಯಿಲ್ಲ ನಮಗ. ನಾವೂ ಊರಕಡೆ ಬಂದಿಲ್ಲ. ಬಾಳ ಚಲೋ ಆತೇಳ. ನೀಯೇನ ಬ್ಯಾರೆಯವಳಲ್ಲ ನಮಗ. ನನ್ನ ಮಗಳs ಆಗಬೇಕು. ಏಳ, ಉಣ್ಣೇಳವ್ವ."

ಈ ಅಕೃತ್ರಿಮ ಪ್ರೀತಿ ವಾತ್ಸಲ್ಯಗಳನ್ನನುಭವಿಸಿ ಬಾಲಿಯ ಹೃದಯ ಕರಗಿತು. ಕೊರಳುಬ್ಬಿ ಬಂದಿತು. ಅಂದು ರಾತ್ರೆ ಅವಳು ಊಟ ಮಾಡಿರ ಲಿಲ್ಲವಾದರೂ ಈಗ ಅವಳಿಗೆ ಹಸಿವೂ ಅಡಗಿದಂತಾಯಿತು.

"ಉಂಡs ಬಂದೀನಿ ಚಿಗವ್ವಾ."

"ಮಲಕ್ಕೋ ಹಂಗಾದರ. ದಣಿದು ಬಂದಿದ್ದೀ," ಎಂದು ನುಡಿದು ಬಸವ್ವ ತನ್ನ ಹೊದಿಕೆಯನ್ನು ಬಾಲಿಗೆ ಕೊಟ್ಟು, ತನ್ನ ಮಗ್ಗುಲಲ್ಲೇ ಅವ ಳನ್ನು ಮಲಗಿಸಿಕೊಂಡಳು.

ಬೆಳಗಿನ ಜಾವದಲ್ಲಿ ಬಾಲಿಗೆ ಎಚ್ಚರವಾಯಿತು. ಅವಳು ಕಣ್ದೆರೆದು ನೋಡಿದಾಗ ಅಡುಗೆಯ ಭಾಗದಲ್ಲಿ ದೀಪ ಉರಿಯುವುದು ಕಾಣಿಸಿತು. ಕಟ್ಟಿಗೆ ಗಳನ್ನು ಮುರಿದು ಸಿದ್ದಪ್ಪ ಒಲೆಯಲ್ಲಿ ಉರಿ ಹೊತ್ತಿಸುತ್ತಿದ್ದ. ಬಸವ್ವ, ಅವಳ ಮಕ್ಕಳು, ಮುರಿಗೆವ್ವ ಎಲ್ಲರೂ ಇನ್ನೂ ಮಲಗಿಕೊಂಡೇ ಇದ್ದರು.

ಉರಿಯ ಶಾಖ ಮನೆಯಲ್ಲೆಲ್ಲ ಹರಡುತ್ತಲೂ ಬಸವ್ವನಿಗೆ ಎಚ್ಚರವಾ ಯಿತು. ಅವಳು ಹಾಸುಗೆಯ ಮೇಲೆದ್ದು ಕುಳಿತು ಅಡುಗೆಯ ಭಾಗದ ಕಡೆ ಮುಖ ತಿರುಗಿಸಿ ಕೇಳಿದಳು:

"ಬಾಳ ಲಗೂ ಎದ್ದಂಗ ಕಾಣುತ್ತೈತಲಾ ಇವೊತ್ತು?"

"ಬೆಳಕು ಹರೀತಾ ಬಂದೈತಿ ಬಸ್ಸೀ," ಎಂದ, ಸಿದ್ದಪ್ಪ.

ಬಾಲಿಯಿನ್ನೂ ನಿದ್ದೆ ಮಾಡುತ್ತಿರಬಹುದೆಂದು ಭಾವಿಸಿ ಬಸವ್ವ, ರಾತ್ರೆ ಅವಳು ಬಂದುದನ್ನೂ ಅವಳ ಇತಿಹಾಸವನ್ನೂ ಸ್ವಲ್ಪದರಲ್ಲಿಯೆ ಗಂಡನಿಗೆ ವರದಿಯೊಪ್ಪಿಸಿದಳು.

"ಯಾತಕ್ಕ ಬಂದಾಳಂತ?" ಎಂದು ಕೇಳಿದ, ಸಿದ್ದಪ್ಪ.

"ಇಲ್ಲೇ ಏನಾರ ಒಂದ ಕೆಲಸಕ್ಕ ಹತ್ತಿದರಾತು ಅಂತ ಬಂದಾಳ."

ಸಿದ್ದಪ್ಪ ಮಿತಭಾಷಿಯಾಗಿದ್ದಂತೆ ತೋರಿತು. ಆತ ಮತ್ತೆ ಮಾತು ಬೆಳಿಸಲಿಲ್ಲ. ಒಲೆಯ ಮೇಲೆ ದೊಡ್ಡ ಗಡಿಗೆಯೊಂದನ್ನಿಟ್ಟು ಅದಕ್ಕೆ ನೀರು

ತುಂಬತೊಡಗಿದ.

ಬಸವ್ವ ಎದ್ದು, ಅಡುಗೆಯ ಭಾಗಕ್ಕೆ ಹೋದಳು. ಒಲೆಯ ಪಕ್ಕದಲ್ಲೆ ಚಿಕ್ಕದೊಂದು ಬಚ್ಚಲು. ಸಿದ್ದಪ್ಪ ಒಂದು ತಂಬಿಗೆ ನೀರು ತುಂಬಿ ಹೆಂಡತಿಯ ಕೈಗೆ ಕೊಟ್ಟ. ಬಚ್ಚಲಿನ ಬಳಿ ಕುಳಿತು ಅವಳು ಮುಖ ತೊಳೆದುಕೊಂಡು, ಸೀರೆಯ ಸೆರಗಿನಿಂದ ಮುಖವನ್ನೊರೆಸಿಕೊಂಡು ಅಡುಗೆಯಲ್ಲಿ ಗಂಡನಿಗೆ ನೆರವಾಗತೊಡಗಿದಳು.

ಹೊರಗಡೆ, ಓಣಿಯಲ್ಲಿ ಚಟುವಟಿಕೆಗಳಿಗಾರಂಭವಾಗಿತ್ತು. ಕೆಲವು ನಿಮಿಷಗಳಲ್ಲಿಯೆ ಸೂರ್‍ಯನ ಕಿರಣಗಳು ಮನೆಯ ಹಂಚುಗಳೊಳಗಿನಿಂದ ಇಳಿದು ಬರತೊಡಗಿದುವು. ಮುರಿಗೆವ್ವ ಮೈಮುರಿಯುತ್ತ ಎದ್ದು ಕುಳಿತಳು. ಅವಳೊಂದಿಗೆ ಬಾಲಿಯೂ ಮೇಲಕ್ಕೆದ್ದಳು.

ಓಣಿಯ ಕೊನೆಯಲ್ಲಿದ್ದ ಸಾರ್ವಜನಿಕ ಶೌಚಕೂಪಕ್ಕೆ ಧಾವಿಸಿ ಹೋಗಿ ಮುರಿಗೆವ್ವ ಬೆಳಗಿನ ಕರ್ಮವನ್ನು ತೀರಿಸಿಕೊಂಡು ಬಂದು, ಮುಖ ತೊಳೆದು ಕೊಂಡಳು.

"ನಾ ಹೋಗುತೀನಿ ಬಾಲೀ."

"ಮತ್ತೆ ಯಾವಾಗ ಬರುತೀ ಮುರಿಗೆವ್ವ?"

"ರಾತ್ರಿ ಬಂದs ಬರುತೀನಲ್ಲ," ಎಂದು ಹೇಳಿ, ಮುರಿಗೆವ್ವ ಬುಟ್ಟಿಯನ್ನು ತಲೆಯ ಮೇಲಿಟ್ಟುಕೊಂಡು ಹೊರಟುಹೋದಳು.

"ತಂಬಿಗೀ ತಗೊಂಡು ಹೋಗೂದಿದ್ದರ ಹೋಗಿ ಬಾ ಬಾಲೀ," ಎಂದಳು ಬಸವ್ವ.

ಬಾಲಿ ತಂಬಿಗೆ ತಗೊಂಡು ಹೊರಟಳು.

ಸುತ್ತಲೂ ದುರ್ನಾತ ಹರಡುತ್ತ ನಿಂತಿದ್ದ ಶೌಚಕೂಪದ ಬಳಿ ಏಳೆಂಟು ಜನ ಗಂಡುಸರೂ ಹೆಂಗುಸರೂ ತಂಬಿಗೆಗಳನ್ನು ಹಿಡಿದುಕೊಂಡು ತಮ್ಮ ತಮ್ಮ ಸರದಿ ಬರುವುದನ್ನು ಕಾಯುತ್ತ ನಿಂತಿದ್ದರು. ನಗರದ ಶೌಚಕೂಪಗಳ ಸಹವಾಸ ತೀರ ಹೊಸದು ಬಾಲಿಗೆ. ಮೂಗನ್ನು ಸೆರಗಿನಲ್ಲಿ ಮುಚ್ಚಿಕೊಂಡು ಆಕೆ ಒಂದುಕಡೆ ನಿಂತುಕೊಂಡಳು.

ಕೊಳಕು ಅಂಗಿಗಳನ್ನು, ಹೊಲಸು ಚಲ್ಲಣಗಳನ್ನು ಧರಿಸಿ ಬೀಡಿಯೆಳೆಯುತ್ತ ನಿಂತಿದ್ದ ಗಂಡುಸರು ಈ ಹೊಸಬಳನ್ನು ಎವೆ ಹಿಳುಕಿಸದೆ ದಿಟ್ಟಿಸತೊಡ

ಗಿದರು.

ಅವಳು ಹಿಂತಿರುಗಿ ಬರುವಷ್ಟರಲ್ಲಿ ಸಿದ್ದಪ್ಪ ಅನ್ನ ತಯಾರಿಸಿದ್ದ. ಒಲೆಯ ಮೇಲಿನ ಹಂಚಿನಲ್ಲಿ ರೊಟ್ಟಿಗಾಗಿ ನೀರು ಕುದಿಯುತ್ತಿತ್ತು.

ಕೈಕಾಲು ಮುಖ ತೊಳೆದುಕೊಂಡು ಬಾಲಿ ತಾನೇ ರೊಟ್ಟಿ ಮಾಡಲು ಕುಳಿತಳು. ಸಿದ್ದಪ್ಪನ ಮುಖದ ಮೇಲೆ ಸಮಾಧಾನದ ಅಲೆಯೊಂದು ಮೂಡಿ ಮಾಯವಾಯಿತು.

ರೊಟ್ಟಿ ತಿಂದು, ಅನ್ನ ಉಂಡು, ಮಧ್ಯಾಹ್ನದ ಊಟಕ್ಕೆಂದು ಸ್ವಲ್ಪ ಕಟ್ಟಿಕೊಂಡು ಸಿದ್ದಪ್ಪ ಕೆಲಸಕ್ಕೆ ಹೊರಟು ನಿಂತ.

“ ಈಗ ಹೋದರ ಬರೂದು ಸಂಜೀಕS ಏನ? ” ಎಂದು ಬಾಲಿ ಕೇಳಿದಳು.

“ ಹೌದು. ಹೊತ್ತು ಮುಳುಗುವಾಗ ಬರುತಾನ, ” ಎಂದಳು ಬಸವ್ವ.

“ ನಿಮ್ಮ ಕಾರಖಾನೇದಾಗS ನನಗೂ ಕೆಲಸ ಹಚ್ಚಿಕೊಡು ಕಾಕಾ, ” ಎಂದಳು ಬಾಲಿ.

“ ನೋಡೂಣು. ಕೇಳುತೀನಿ ಮಾಲಕನ್ನ ಇವೊತ್ತ, ” ಎಂದು ನುಡಿದು ಸಿದ್ದಪ್ಪ ಮಕ್ಕಳನ್ನು ಮುದ್ದಿಸಿ ಹೊರಟುಹೋದ.

ನಾಲ್ಕು ದಿನಗಳ ತರುವಾಯ, ಒಂದು ಸಂಜೆ ಮನೆಗೆ ಬರುತ್ತಲೂ ಆತ ಹೇಳಿದ:

“ ನಿನಗೊಂದು ಕೆಲಸ ನೋಡಿಕೊಂಡು ಬಂದೀನಿ ಬಾಲೀ. ”

ಸ್ವರ್ಗದ ಬಾಗಿಲೇ ತನಗಾಗಿ ತೆರೆದ ಹಾಗೆ ತೋರಿತು ಬಾಲಿಗೆ. ಅವಳು ಮುಖವನ್ನರಳಿಸಿ ಕೇಳಿದಳು:

“ ಖರೇನS ? ”

“ ಖರೇನS. ನಮ್ಮ ಕಾರಖಾನೇದಾಗ ಕೆಲಸ ಖಾಲಿ ಇಲ್ಲ. ಎರಡು ಮೂರು ದಿನದಿಂದ ಜ್ಯಾರೆ ಎಲ್ಲಾದರೂ ಖಾಲಿ ಐತೇನಂತ ಕೇಳುತಾ ಇದ್ದಿನಿ. ಇವೊತ್ತ ಒಂದುಕಡೆ ಖಾಲಿಯಾಗೈತಿ. ಮೊದಲು ಅಲ್ಲಿದ್ದಾಕಿಗೆ ಮದುವಿಯಾಗೂದೈತಿ. ಆಕಿ ಕೆಲಸಾ ಬಿಟ್ಟು ಬಿಡುತಾಳ. ನಾಳಿಯಿಂದ ನೀ ಬರುತೀ ಅಂತ ಹೇಳಿ ಬಂದೀನಿ ಅವರಿಗೆ. ”

" ಕೂಲಿ ಎಷ್ಟುಸಾ ಕಾಕಾ ? "

" ನೀವು ಮಾಡಿದ ಕೆಲಸದ ಮ್ಯಾಲ ಕೂಲಿ ಕೊಡುತಾರ. ಅಂತೂ ದಿವಸಕ್ಕ ಒಂದು ಒಂದೂವರಿ ರೂಪಾಯಿ ಬಂದs ಬರುತೈತಿ. "

ಮಾರನೆಯ ದಿನದಿಂದ ಬಾಲಿ, ಅವಲಕ್ಕಿ ಕಾರಖಾನೆಯಲ್ಲಿ ಅವಲಕ್ಕಿ ತಿರುವಿ ಹಾಕುವ ಕೆಲಸಕ್ಕಾರಂಭಿಸಿದಳು. ಅವಳದು ಅಂಥ ಪರಿಶ್ರಮದ ಕೆಲಸವೇನೂ ಆಗಿರಲಿಲ್ಲ. ಗಂಡಾಳುವೊಬ್ಬ ನಿಂತುಕೊಂಡು ಭಾರವಾದ ಕೊರಡನ್ನು ಕಾಲಿನಿಂದ ತುಳಿಯುತ್ತಿದ್ದ, ಅದರ ಕೊನೆಗಿದ್ದ ಒನಕೆಯ ಆಕಾರದ ತುಂಡು ಅಕ್ಕಿಯ ಒರಳಿನ ಮೇಲೆ ಬೀಳುತ್ತಿತ್ತು. ಅದು ಮತ್ತೆ ಮೇಲಕ್ಕೆದ್ದು ಪುನಃ ಒರಳಿಗಿಳಿಯುವಷ್ಟರಲ್ಲಿ ಅಕ್ಕಿಯನ್ನು ತಿರುವಿ ಹಾಕುವುದಷ್ಟು ಹೆಣ್ಣಾಳುಗಳ ಕೆಲಸ. ಅತ್ತ ಇತ್ತ ಕತ್ತು ಹೊರಳಿಸದೆ, ಯಾವಾಗಲೂ ಒರಳಿನ ಮೇಲೆಯೇ ದೃಷ್ಟಿಯಿಟ್ಟು ಅವರು ಕೆಲಸ ಮಾಡಬೇಕಾಗುತ್ತಿತ್ತು. ಸಾಯಂಕಾಲವಾಗುವುದರೊಳಗಾಗಿ ಕತ್ತು-ಕೈ ಎರಡೂ ಸೋತು ಹೋಗುತ್ತಿದ್ದುವು. ದಿನವಿಡೀ ಕೊರಡನ್ನು ತುಳಿದ ಗಂಡಾಳುಗಳಂತೂ ಆ ವೇಳೆಗೆ ಜೀವಚ್ಛವಗಳಂತಾಗುತ್ತಿದ್ದರು.

ಸಿದ್ದಪ್ಪ ಬಾಲಿ ಇಬ್ಬರೂ ಜತೆಯಾಗಿಯೆ ಮನೆಗೆ ಬರುತ್ತಿದ್ದರು. ಅವರು ಮನೆ ಮುಟ್ಟುವಷ್ಟರಲ್ಲಿ ಬಸವ್ವ ಅನ್ನವನ್ನೂ ಬೇಳೆಯ ಸಾರನ್ನೂ ಸಿದ್ಧಗೊಳಿಸಿರುತ್ತಿದ್ದಳು. ಊಟ ಮಾಡಿ ಮುಗಿಸುವಷ್ಟರಲ್ಲಿ ಕಣ್ಣುಗಳಲ್ಲಿ ನಿದ್ದೆ ತುಂಬಿ ಬರುತ್ತಿತ್ತು. ಹಾಸುಗೆಯ ಮೇಲೆ ದೇಹವನ್ನೊರಗಿಸಿ ಬಿಟ್ಟರೆ ಬೆಳಗಾಗುವವರೆಗೂ ಎಚ್ಚರವಾಗುತ್ತಿರಲಿಲ್ಲ. ಏಳುತ್ತಲೂ ಅವಸರದಲ್ಲಿ ಊಟ. ಅನಂತರ ಕಾರಖಾನೆ. ಉಸಿರು ಕಟ್ಟುವಂಥ, ಮೈತುಂಬಾ ಬೆವರು ಬರಿಸುವಂಥ ಕಮಟು ಹವೆಯಲ್ಲಿ ಸಂಜೆಯ ವರೆಗೂ ದುಡಿತ. ಒನಕೆಯ ಕೊರಡಿನ ಧಾಡ್‌ಧಾಡ್‌ಧಾಡ್ ಎಂಬ ಕರ್ಣಕಠೋರ ಸದ್ದು. ಅಯ್ಯೋ ಎನ್ನಿಸುವಂಥ ಬಳಲಿಕೆ. ಮರಳಿ ಮನೆ. ಊಟ. ನಿದ್ದೆ. ನಿದ್ದೆ. ಒನಕೆಯ ಕೊರಡಿನಂತೆಯೇ ಬಾಲಿಯ ಬಾಳೂ ಯಂತ್ರವತ್ತಾಗಿ ಸಾಗತೊಡಗಿತು. ಆ ಜೀವನದಲ್ಲಿ ಅವಳು ಆನಂದ ಉತ್ಸಾಹಗಳನ್ನು ಅನುಭವಿಸಲಿಲ್ಲವಾದರೂ ಅಂಥ ಬೇಸರವೂ ಅವಳಿಗುಂಟಾಗಲಿಲ್ಲ. ಕೊನೆಗೂ ತನ್ನ ಹಟಕ್ಕೇ ಗೆಲವು ಸಿಕ್ಕಿತು

ತಾನು ಅವರಿವರ ಸೂಳೆಯಾಗಿ ಬಾಳುವುದು ತಪ್ಪಿತು—ಎಂದುಕೊಂಡು ಅವಳು ಸಮಾಧಾನದಿಂದಲೇ ದಿನಗಳೆಯತೊಡಗಿದಳು.

# ಹನ್ನೆರಡು

ಇಲ್ಲಿ, ನಗರದಲ್ಲಿ ಬಾಲಿಗೆ ಕೊಂಚವಾದರೂ ಸಮಾಧಾನವಿದ್ದಿತು.

ಆದರೆ, ಅಲ್ಲಿ ಹಳ್ಳಿಯಲ್ಲಿ ಗಿರಿಯನಿಗೆ ಮಾತ್ರ ಕೊಂಚವೂ ನೆಮ್ಮದಿಯಿರಲಿಲ್ಲ. ಧರ್ಮಣ್ಣನ ಹೊಲವನ್ನು ಹಿಡಿದಂದಿನಿಂದ ಆತ ಬಲೆಯಲ್ಲಿ ಸಿಲುಕಿದ ಮೃಗದಂತೆ ತೊಳಲಾಡುತ್ತಿದ್ದ. ಅಂಥ ಕಷ್ಟವನ್ನು ಆತ ಹಿಂದೆ ಎಂದೂ ಅನುಭವಿಸಿರಲಿಲ್ಲ.

ಆ ಹೊಲದಲ್ಲಿ ನಡೆದ ಬಡಿದಾಟದ ಖಟ್ಲೆ. ಹೊಲದ ಮೇಲಿನ ಲಾವಣಿಯ ಖಟ್ಲೆ. ವಾರದಲ್ಲಿ ಎರಡು ಬಾರಿಯಾದರೂ ಈ ಖಟ್ಲೆಗಳಿಗಾಗಿ ಆತ ತಾಲೂಕಿನ ಸ್ಥಳಕ್ಕೆ ಹೋಗಿ ಬರಬೇಕಾಗಿ ಬಂದಿತ್ತು. ಒಬ್ಬನೇ ಹೋದರೆ ನಡೆಯುವಂತಿಲ್ಲ. ಜತೆಗೆ ಸಾಕ್ಷಿಗಳನ್ನು ಬೇರೆ ಕರೆದೊಯ್ಯಬೇಕು. ಅವರೆಲ್ಲರಿಗೂ ರೈಲು ವೆಚ್ಚ, ಮೋಟಾರು ವೆಚ್ಚ, ಊಟದ ವೆಚ್ಚ, ಚಹ ತಿಂಡಿಗಳ ವೆಚ್ಚ, ಬೀಡಿ ಸಿಗರೇಟುಗಳ ವೆಚ್ಚವೆಲ್ಲವನ್ನೂ ಆತನೇ ವಹಿಸಿಕೊಳ್ಳಬೇಕು. ಅಷ್ಟೆಲ್ಲ ಖರ್ಚು ಮಾಡಿ ಸಾಕ್ಷಿಗಳನ್ನು ಕರೆದುಕೊಂಡು ಕೋರ್ಟಿಗೆ ಹೋಗುವುದು, ಆ ದಿನ ವಿಚಾರಣೆಯಿಲ್ಲವೆಂಬ ಆಜ್ಞೆಯನ್ನು ಕೇಳಿಕೊಂಡು ತೆಪ್ಪಗೆ ಮರಳಿ ಬರುವುದು. ಮಾಡಿದ ಖರ್ಚೆಲ್ಲವೂ ವಿಫಲವಾಗುವುದು.

" ಒಂದು ಮುದ್ದತ್ತಿನಾಗs ಖಟ್ಲೆ ಯಾಕ ಮುಗಿಸೂದಿಲ್ಲ ಇವರು ? " ಎಂದು ಆತ ಒಂದು ದಿನ ಸರಕಾರಿ ವಕೀಲರನ್ನು ವಿಚಾರಿಸಿದಾಗ ಅವರು ವ್ಯಂಗ ಬೆರೆತ ಸ್ವರದಲ್ಲಿ ಹೇಳಿದರು:

" ಕೋರ್ಟು ಅಂದರೆ ನಿಮ್ಮಪ್ಪಂದು ಅಂತ ತಿಳಿದಿದ್ದೀಯೇನು? ನಿನ್ನಂಥ ಸಾವಿರಾರು ಖಟ್ಲೆಗಳಿರುತ್ತವೆ. ಮ್ಯಾಜಿಸ್ಟ್ರೇಟರಿಗೆ ಒಂದು ಮಿನಿಟು ಸಹ ಬಿಡುವಿರುವದಿಲ್ಲ. "

" ನಾವು ಬಡವರು ಎಷ್ಟು ಸಾರಿ ಅಂತ ರೊಕ್ಕಾ ಖರ್ಚು ಮಾಡಿಕೊಂಡು ತಿರುಗಬೇಕು ವಕೀಲಸಾಬರs ? "

" ಖಟ್ಲೆ ಅಂಪವ್ಯಾಲ ತಿರುಗಲಿಕ್ಕೇ ಬೇಕಾಗತದ. ಬೇಡವಾದರೆ ಮನೆಯಲ್ಲಿ ಕೂತಿರಬಹುದಲ್ಲ ? ನೀನಿಲ್ಲದಿದ್ದರೂ ವಿಚಾರಣೆ ನಡೆದು ತೀರ್ಪು ಹೊರಬೀಳುತದ. "

ಮರುಮಾತನಾಡದೆ ಗಿರಿಯ ಹೊರಟು ಬಂದಿದ್ದ.

ಒಂದು ಸಲ ರಾಮಾಪುರಕ್ಕೆ ಸಂತೆಗೆ ಹೋಗಿದ್ದಾಗ, ಆತ ಚನ್ನಯ್ಯ ನವರನ್ನು ಕಂಡು ತನ್ನ ಗೋಳನ್ನೆಲ್ಲ ತೋಡಿಕೊಂಡಿದ್ದ. ಅವರಾದರೂ ಅವ ನಿಗೆ ಏನೆಂದು ಸಮಾಧಾನ ಹೇಳಬೇಕು ? ಕೆಲವು ನಿಮಿಷ ಸುಮ್ಮನೆ ಕುಳಿ ತಿದ್ದು ಅನಂತರ ಚನ್ನಯ್ಯನವರು ಹೇಳಿದ್ದರು:

" ಕೋರ್ಟು ಕಚೇರಿಯೊಳಗ ನ್ಯಾಯ ಸಿಗಬೇಕಾದರೂ ಕೈಯ್ಯಾಗ ರೊಕ್ಕ ಇರಾಕಬೇಕಪ್ಪ. "

" ಹಂಗಾದರ, ಕೋರ್ಟು ಕಚೇರಿ ಇರೂದು ರೊಕ್ಕದವರಿಗಾಗೇ ಏನ್ರೀ ? "

" ಹೂಂ. ಹಾಂಗs ಅನ್ನಬಹುದು. ನಿಮ್ಮಂಥಾವರು ಖಟ್ಲೆ ಗಿಟ್ಲೆ ಅಂತ ಬಡಿದಾಡೂದಕ್ಕs ಬರಬಾರದು. ಗೌಡರು ಕುಲಕರಣೇರು ವಕೀಲರು ಕಾರಕೂನರು ಎಲ್ಲರೂ ಒಂದಾಗಿ ನಿಮ್ಮನ್ನು ಮೋಸಾ ಮಾಡುತಾರ. ನಿನಗ ಗೊತ್ತಿಲ್ಲೇನ ಗಿರಿಯಾ, ಪಾಳೀ ಠರಾಯಿಸುವ ಖಟ್ಲೆ ಹಾಕುವ ಅಗತ್ಯನs ಇರಲಿಲ್ಲ. ನಿನ್ನಿಂದ ರೊಕ್ಕ ತಿನ್ನೂದಕ್ಕಾಗಿ ಗೌಡ ಮೋಸ ಮಾಡಿದಾನ ನಿನಗ, " ಎಂದು ಅವರು ಆ ವಿಷಯಕ್ಕೆ ಸಂಬಂಧಪಟ್ಟ ಅಂಶಗಳನ್ನೆಲ್ಲ ಅವ ನಿಗೆ ತಿಳಿಯುವಂತೆ ವಿವರಿಸಿ ಹೇಳಿದರು.

" ನನಗೂ ಆಗs ಅನಿಸಿತ್ತು ಅಣ್ಣಾವರs. ಗೌಡ ವಕೀಲ ಇಬ್ಬರೂ ಕೂಡಿ ನನ್ನ ಫಸಾಯಿಸಿದರು ಅಂತ. ಆದರೇನ ಮಾಡೂದು ಹೇಳ್ರಿ. ಕುತ್ತಿಗೀ ಅವರ ಕೈಯಾಗ ಕೊಟ್ಟು ಕುಂತೀನಿ, " ಎಂದು ನುಡಿದು ಒಂದುಕ್ಷಣ ಸುಮ್ಮನಿದ್ದು ಗಿರಿಯ ಮತ್ತೆ ಕೇಳಿದ: " ನಮ್ಮಂಥಾ ಬಡವರನ್ನ ಉಳಿಸೂ ವವರು ಯಾರೂ ಇಲ್ಲೇನ್ರಿ ಅಣ್ಣಾವರs ? "

ಅದಕ್ಕೆ ಚನ್ನಯ್ಯನವರಿಂದ ಉತ್ತರ ದೊರೆಯಲಿಲ್ಲ.

ಆ ವರ್ಷ ಮುಂಗಾರಿ ಮಳೆಯೂ ಸಕಾಲಕ್ಕೆ ಬರದೆ ತಪ್ಪಿಸಿಕೊಂಡಿತು. ಮೇ ತಿಂಗಳ ಮಧ್ಯಭಾಗದಲ್ಲಿ ಮೋಡ ಕವಿದು ಗುಡುಗಾಡಿತಾದರೂ ಒಂದು ಹನಿಯೂ ಉದುರಲಿಲ್ಲ. ರೈತರೆಲ್ಲ ಚಿಂತಾಗ್ರಸ್ತರಾಗಿ ಮುಗಿಲ ಕಡೆ ಮುಖ ಹೊರಳಿಸಿ ಕುಳಿತರು. ಜೂನ ತಿಂಗಳ ಮೊದಲ ವಾರದಲ್ಲಿ ಒಂದೆರಡು ಸೆಳಕು ಮಳೆ ಬಿತ್ತು. ಅದರಿಂದ ಅಂಥ ಉಪಯೋಗವೇನೂ ಆಗುವಂತಿರಲಿಲ್ಲ. ಭೂಮಿ ಬಿತ್ತಿಗೆಗೆ ಸಿದ್ಧವಾಗಬೇಕಾದರೆ ಇನ್ನೂ ನಾಲ್ಕೈದು ಸಲ ಮಳೆ ಸೆಳೆಯ ಬೇಕಾದುದು ಅಗತ್ಯವಿತ್ತು.

ಬಹಳ ತಡವಾಗಿ ಕೊನೆಗೊಮ್ಮೆ ಮಳೆ ಸುರಿಯಿತು. ಗಿರಿಯು ಅವಸರ ದಿಂದ ಹೊಲಗಳನ್ನು ಹದಗೊಳಿಸತೊಡಗಿದ. ಎರಡು ಹೊಲಗಳಲ್ಲಿ ಅವನೊ ಬ್ಬನೇ ದುಡಿಯಬೇಕಾಗಿದ್ದಿತು. ಮುದುಕನಿಂದ ಅಂಥ ಸಹಾಯವೇನೂ ಆಗುವಂತಿರಲಿಲ್ಲ. ಮನೆಗೆಲಸ ಹೊಲಗೆಲಸಗಳೆರಡನ್ನೂ ತೂಗಿಸಿಕೊಂಡು ಹೋಗುವುದಲ್ಲದೆ ಖಟ್ಲೆಗಳಿಗಾಗಿ ತಾಲೂಕಿನ ಸ್ಥಳಕ್ಕೂ ಅಲೆಯಬೇಕು. ಮಿತಿ ಮೀರಿದ ದುಡಿತದಿಂದಾಗಿ ಗಿರಿಯು ಹುಚ್ಚು ಹಿಡಿದವರ ಹಾಗೆ ಆಚರಿಸುವಂತಾ ಯಿತು. ಹೊಲದಲ್ಲಿ ನೆರವಾಗಲು ಒಬ್ಬ ಆಳು ಸಿಕ್ಕಿದರೊಳ್ಳೆಯದೆಂದು ಅದ ಕ್ಕಾಗಿ ಯತ್ನಿಸಿದನಾದರೂ ಬಿತ್ತಿಗೆಯ ದಿನಗಳಲ್ಲಿ ಕೂಲಿಯಾಳುಗಳೂ ಸಿಕ್ಕು ವಂತಿರಲಿಲ್ಲ.

ಗಿರಿಯನ ಕಷ್ಟವನ್ನು ನೋಡಲಾರದೆ, ಅಜ್ಜ ಮತ್ತೆ ಮತ್ತೆ ಹೇಳತೊಡ ಗಿದ: “ ಮತ್ತೊಂದು ಮದುವಿಯಾಗಿ ಬಿಡೋ ತಮ್ಮಾ. ಎಲ್ಲಾ ತ್ರಾಸ ತಪ್ಪುತ್ತೈತಿ. ”

“ ತ್ರಾಸ ಏನೋ ತಪ್ಪುತ್ತೈತಿ. ಆದರs ಮದುವೆಯೆಂದರೇನ ಫುಕಟ ಆಗುತ್ತೈತೇನು ? ಹೆಣ್ಣಿಗೆ ತೆರಾ ಕೊಡಬೇಕು, ಸೀರಿ ಗೀರಿ ಅಂತ ಮ್ಯಾಲ ಯಾಡ್ನು ನೂರು ರುಪಾಯಿ ಆದರೂ ಬೇಕು.... ”

ಹಣದ ಮಾತು ಬರುತ್ತಲೂ ಮುದುಕನೂ ಸುಮ್ಮನಾಗುತ್ತಿದ್ದ.

ಒಂದೊಂದು ರಾತ್ರಿ, ನಿದ್ದೆಯಿಲ್ಲದೆ ಮಲಗಿದ್ದಾಗ ಗಿರಿಯನಿಗೆ ಬಾಲಿಯ ಜ್ಞಾಪಕ ಬರುವುದು. ಅವಳು ಕೋಗಿಹಳ್ಳಿಯನ್ನು ಬಿಟ್ಟು ಹೊರಟು ಹೋದ ವಿಚಾರವೇನೊ ಅವನಿಗೆ ಗೊತ್ತಿದ್ದಿತಾದರೂ ಅವಳು ಹೋದುದೆಲ್ಲಿಗೆ, ಮಾಡು ತ್ತಿರುವುದೇನು ಎಂಬುದೇನೂ ತಿಳಿದುಬಂದಿರಲಿಲ್ಲ. ತಾನಾಗಿಯೆ ಅದರಿವ

ರನ್ನು ಮಾತನಾಡಿಸಿ ಅಂಥ ವಿಚಾರಗಳನ್ನು ತಿಳಿದುಕೊಳ್ಳುವ ಸ್ವಭಾವವೂ ಅವನದಲ್ಲ. "ಹೋದಳೇನ ಮನೀ ಬಿಟ್ಟು ? ಯಾವನದಾದರೂ ಬೆನ್ನು ಹತ್ತಿ ಹೋಗಿದ್ದಾಳು ಬಿಡು," ಎಂದು ಹೇಳಿಕೊಂಡು ಅವಳ ನೆನಪನ್ನೇ ತೊಡೆದು ಹಾಕಲು ಯತ್ನಿಸಿದ್ದ. ಆದರೆ, ಆತ ಏಕಾಕಿಯಾಗಿದ್ದ ಸಮಯಗಳಲ್ಲೆಲ್ಲ ಅವಳ ಮೂರ್ತಿ ಅವನ ಒಳಗಣ್ಣುಗಳೆದುರಿಗೆ ಮೂಡುವುದು ತಪ್ಪಿರಲಿಲ್ಲ. ಅಂದು ಹೊಳೆಯ ಬಳಿ ನಡೆದ ಆ ಘಟನೆ, ಲಕ್ಕಿಯ ಪೊದೆಯಲ್ಲಿನ ಆ ರೋಮಾಂಚಕಾರಕ ಸನ್ನಿವೇಶಗಳು ಮತ್ತೆ ಮತ್ತೆ ಅವನ ಬಗೆಯನ್ನು ಕದಡಿ ಅವನನ್ನು ವಿಷಣ್ಣ ಔದಾಸೀನ್ಯಕ್ಕೀಡು ಮಾಡುತ್ತಿದ್ದುವು. ಸಂತೆಯ ದಿನ ತಾನು ಅವಳೊಂದಿಗೆ ಹಾಗೆ ಒರಟಾಗಿ ವರ್ತಿಸಿದ್ದು ತಪ್ಪಾಯಿತೆಂದೂ ಅವನಿಗೆ ಆಗಾಗ ಅನ್ನಿಸುತ್ತಿತ್ತು. ಕರಿಯ ಹೇಳಿದ ಮಾತುಗಳನ್ನೆಲ್ಲ ತಾನು ತಲೆಯಲ್ಲಿ ತುಂಬಿಕೊಂಡದ್ದು ತಪ್ಪಾಯಿತು....ಬಾಲಿ ತನ್ನನ್ನು ಹುಡುಕಿಕೊಂಡು ಹೊಲಕ್ಕೆ ಬಂದಿದ್ದಳಂತೆ. ತನ್ನನ್ನೇ ಉಡಿಕೆಯಾಗುವುದಾಗಿ ಹೇಳಿದ್ದಳಂತೆ. ತನ್ನ ಮೇಲೆ ಮನಸ್ಸಿದ್ದುದರಿಂದಲೇ ಹಾಗೆ ಹೇಳಿದ್ದಳಲ್ಲವೆ ? ಕರಿಯನೆಂದಂತೆ ಆಕೆ ಕೆಟ್ಟ ನಡತೆಯವಳೇ ಆಗಿದ್ದರೆ ಹೀಗೆಲ್ಲ ಮಾತನಾಡಲು ಸಾಧ್ಯವಿರುತ್ತಿರಲಿಲ್ಲ. ಅದರ ಮರುದಿನವೇ ತಾನು ಹೋಗಿ ಅವಳನ್ನು ಕರೆದುಕೊಂಡು ಬರಬೇಕಾಗಿತ್ತು. ಭೀಮ, ಗಿಡ್ಡ, ಪುಂಡ, ಕಾಮಣ್ಣ ಎಲ್ಲರೂ ಎಷ್ಟೇ ವಿರೋಧಿಸಿದರೂ ಲೆಕ್ಕಿಸದೆ ಅವಳನ್ನಿಟ್ಟುಕೊಂಡು ಬಾಳಬೇಕಾಗಿತ್ತು. ಮೂರ್ಖ.... ತಾನೊಬ್ಬ ಮಹಾ ಮೂರ್ಖ....

ಹಾಗೆ ಯೋಚಿಸಿದಾಗಲೆಲ್ಲ, ಬಾಲಿಯಿರುವ ಸ್ಥಳವನ್ನು ಪತ್ತೆ ಮಾಡಿ ಅಲ್ಲಿಗೆ ಹೋಗಿ ಅವಳನ್ನು ಕರೆದುಕೊಂಡು ಬರಬೇಕೆಂದೂ ಅವನಿಗೆನ್ನಿಸಿತ್ತು. ಯಾರನ್ನು ಕೇಳುವುದು, ಎಲ್ಲಿಗೆ ಹೋಗುವುದು ಎಂಬುದು ಮಾತ್ರ ಅವನ ಬುದ್ಧಿಗೆ ಸಿಲುಕದ ವಿಚಾರವಾಗಿತ್ತು, ಕೋಗಿಹಳ್ಳಿಗೆ ಹೋಗಿ ಅವಳ ತಾಯಿಯನ್ನು ಕಂಡರೆ ಬಾಲಿಯ ವಾರ್ತೆ ತಿಳಿಯಬಹುದೆಂಬ ಅಲ್ಪ ಸಂಗತಿಯೂ ಅವನಿಗೆ ಹೊಳೆಯಲಿಲ್ಲ.

ಆತ ಅವಳನ್ನು ಕಾಣುವ ಸಂದರ್ಭ ಒಂದು ದಿನ ಅಕಸ್ಮಾತ್ತಾಗಿ ಒದಗಿ ಬಂತು.

ಮರಡಿಯ ಕೆಳಗಿನ ಹೊಲದಲ್ಲಿನ ಅರ್ಧದಷ್ಟು ಸ್ಥಳದಲ್ಲಿ ಆತ ಮೆಣಸಿನ

ಕಾಯಿ, ಬದನೇಕಾಯಿ, ಬೆಂಡೇಕಾಯಿಗಳನ್ನೂ ಇನ್ನುಳಿದ ಸ್ಥಳದಲ್ಲಿ ನವಣೆ ಯನ್ನೂ ಬಿತ್ತಿದ್ದ. ಕಾಯಿಪಲ್ಯ ಕೊಯ್ಯುವದಕ್ಕಾರಂಭವೂ ಆಗಿತ್ತು. ಒಂದು ಸಂತೆಯ ದಿನ ಕಾಯಿಪಲ್ಯದ ಗಂಟು ಹೊತ್ತು ಆತ ಜಿಲ್ಲೆಯ ಸ್ಥಳಕ್ಕೆ ಹೊರಟಿ ದ್ದಾಗ ಮೆಣಸಿನಕಾಯಿ ಮುರಿಗೆವ್ವ ನಿಲ್ದಾಣದಲ್ಲಿ ಭೆಟ್ಟಿಯಾದಳು. ಇಬ್ಬರೂ ಒಂದೇ ಡಬ್ಬಿಯನ್ನೇರಿ ಕುಳಿತರು. ರೈಲು ಹೊರಡುತ್ತಲೂ ಮುರಿಗೆವ್ವ ಬಾಲಿಯ ವಿಷಯವನ್ನು ಪ್ರಸ್ತಾಪಿಸಿ, ಅವಳಿರುವ ಸ್ಥಳ, ತೊಡಗಿದ್ದ ಕೆಲಸ ಎಲ್ಲವನ್ನೂ ವಿಶದವಾಗಿ ತಿಳಿಸಿದಳು.

"ಅವಳ ಸಂಗಾತ ಯಾರಿದಾರ ಮುರಿಗೆವ್ವ?" ಎಂದು ಕೇಳಿದ ಗಿರಿಯ.

"ಯಾರಿರಬೇಕು ಅಂತೀ ನೀ? ಗೆಣೇರು ಅಂತೀಯಾ? ಅಂಥಾವ ರ‍್ಯಾರೂ ಅಲ್ಲಿ ಇಲ್ಲ."

"ಒಬ್ಬಾಕೇ ಹೆಂಗಾದರೂ ಅದಾಳೋ!"

"ಒಬ್ಬಾಕೇ ಯಾಕಿದ್ದಾಳು? ಚಿಗಪ್ಪ ಚಿಗವ್ವ ಅದಾರಲ್ಲಾ?"

ಗಿರಿಯನಿಗೂ ಬಾಲಿಗೂ ಕೆಲವು ದಿನ ಗೆಳೆತನವಿದ್ದ ಸಂಗತಿಯನ್ನು ಮುರಿಗೆವ್ವ ಬಲ್ಲವಳಾಗಿದ್ದುದರಿಂದ ಆಕೆ ಚೇಷ್ಟೆಯ ನಗೆಯೊಂದಿಗೆ ಕೇಳಿದಳು.

"ಇವತ್ತು ರಾತ್ರಿ ಅಲ್ಲಿಗೇ ಕರಕೊಂಡು ಹೋಗುತೀನಿ. ಬರ್ತೀ ಯೇನೋ?"

"ಛೆ. ಅಲ್ಲಿ ಹೆಂಗ ಬರೂದು? ನನಗ ಅವರ ಗುರುತಿಲ್ಲ, ಏನಿಲ್ಲ...."

"ಅದಕ್ಕೆಲ್ಲಾ ಗುರುತು ಯಾತಕ್ಕ ಬೇಕೋ ಮಳ್ಳ? ನೀ ಬಾ. ನಾ ಕರಕೊಂಡು ಹೋಗುತೀನಿ.?"

ಗಿರಿಯ ಬಾಲಿಯನ್ನು ಕಂಡದ್ದು ಹಾಗೆ.

ಆ ರಾತ್ರಿ ಸಿದ್ದಪ್ಪ ಮನೆಯಲ್ಲಿರಲಿಲ್ಲ. ಅಂದು ರಾತ್ರಿಸರದಿಯ ಕೆಲಸ ಅವನದಾಗಿತ್ತು. ತನಗೆ ಸಹಜವಾದ ಹುಡುಗಾಟಿಕೆಯ ಸ್ವರದಲ್ಲಿಯೇ ಗಿರಿ ಯನನ್ನು ಬರಮಾಡಿಕೊಂಡಳು ಬಾಲಿ.

"ಇಷ್ಟು ದಿನಾ ಆದಮ್ಯಾಲ ನನ್ನ ನೆನಪಾಯಿತೇನು ನಿನಗ?"

ಸಂಕೋಚದಿಂದಾಗಿ ಗಿರಿಯನ ಬಾಯಿಯಿಂದ ಮಾತೇ ಹೊರಡಲಿಲ್ಲ.

"ಇವ ಯಾರೇ ಬಾಲಿ?" ಬಸವ್ವ ಕೇಳಿದಳು.

"ಇವನs? ನನ್ನ ಉಡಿಕೀ ಮಾಡಿಕೋಬೇಕಂತ ಮಾಡಿದಾನ."

"ಹೌದೇನ? ಎಂಥ ಆಗುವಾಕಿ ಉಡಿಕೀ?"

"ಇವ ಮಾಡಿಕೊಂಡಾಗ."

"ಮೊದಲು ಸೋಡಚೀಟಿ ಸಿಗಾಕ ಬೇಕಲ್ಲ?" ಮುರಿಗೆವ್ವ ಹೇಳಿದಳು: "ಅದಕ್ಕಾರೆ ಖಟಪಟಿ ಮಾಡಾಕೋ ಗಿರಿಯಾ?"

"ಸವ್ಡಾದ್ರೂ ಎಲ್ಲೈತಿ ನನಗ ಮುರಿಗೆವ್ವ?"

"ಹೆಂಗೂ ನಾಳೆ ಇಲ್ಲೇ ಇರುತೀಯಲ್ಲ? ವಕೀಲನ ಪಂತೀಲೆ ಆದ್ರೂ ಕರಕೊಂಡು ಹೋಗಲಾ ಇವಳನ್ನ. ವರ್ತಮಾನ ಪತ್ರದಾಗ ಜಾಹೀರ ನೋಟೀಸ ಕೊಟ್ಟರ ತಂತಾನೇ ಸೋಡಚೀಟಿ ಸಿಗತೈತಂತೆ...."

"ಅದನ್ನೆಲ್ಲಾ ಯಾರವ್ವಾ ಮಾಡವ್ರು? ನನಗೇನ ತಿಳೀತೈತಿ?"

"ಯಾಕೋ ಗಿರಿಯಾ, ಹೀಂಗ ಮಾತಾಡುತೀ? ಗಂಡಸಾಗಿದ್ದೀ. ಇಷ್ಟುದ್ದ ಬೆಳದಿದ್ದೀ. ಮೀಸೀ ಹೊತ್ತಿದ್ದೀ. ಕೈಲಾಗದವರಂಗ ಮಾತಾಡು ತೀಯಲ್ಲಾ? ನಡಿ. ನಾನೂ ಬರ್ತೀನಂತ ನಿಮ್ಮ ಸಂಗಾತ. ಹೋಗಿ ಬರೂಣು." ಎಂದಳು ಮುರಿಗೆವ್ವ.

"ಮನಸ್ಸಿಲ್ಲದವಗ ದೈನಾಸಪಡೂದು ಯಾಕ ಬಿಡs," ಎಂದಳು ಬಾಲಿ.

"ಮನಸಿಲ್ಲ ಅಂದಿಯಾ? ಹೌದೇನೋ ಗಿರಿಯಾ?"

"ಹಳ್ಳಿಯೊಳಗಿದ್ದಾಗ ನಾ ಮಾಡುತಿದ್ದುದು ಅವಗ ಸರಿಬರಲಿಲ್ಲಂತ ಕಾಣುತೈತಿ. ಗಿರಿಯು ಅಂದರ ಏನಂತ ತಿಳಿದಿದ್ದೀ ಮುರಿಗೆವ್ವ? ಅವನಂಥಾ ಸಂಭಾವಿತ ಲೋಕದಾಗ ಇನ್ನೊಬ್ಬನಿಲ್ಲ," ಎಂದು ಬಾಲಿ ಅಣಕದ ಧ್ವನಿಯಲ್ಲಿ ಹೇಳಿದಳು.

"ಅಯ್ಯs ಬಿಡs. ಇಂಥಾ ಸಂಭಾವಿತರನ್ನ ಬಾಳ ಮಂದೀನ್ನ ಕಂಡೀನಿ. ಚಂದದ ಹೆಣ್ಣು ಪಂತೀಲಿ ಬಂತೆಂದರ ಸಾಕು. ಎಲ್ಲಾ ಮಂಗ್ಯಾನಂಗ ಮಾಡುತಾರ. ಬಿಡ, ಬಿಡ," ಎಂದಳು ಮುರಿಗೆವ್ವ.

ಕೊಂಚ ಹೊತ್ತು ಸುಮ್ಮನಿದ್ದು ಅವಳೇ ಪುನಃ ಹೇಳಿದಳು:

"ಕೋಗಿಹಳ್ಳಿಯೊಳಗ ಇರುವಾಗ ಬಾಲಿಯ ನಡತೆ ಚಲೋ ಇರಲಿಲ್ಲ ಅನ್ನೂದೇನೂ ಸುಳ್ಳಲ್ಲ ಗಿರಿಯಾ. ಅವರಪ್ಪನ ನಡತೆಯೂ ಚಲೋದಿಲ್ಲ.

ಎಲ್ಲಾ ಖರೇ. ಹೆಂಗಸರು ಹಿಂಗ್ಯಾಕ ಆಗುತಾರ ಅನ್ನೂದು ಗಂಡಸರಾದ ನಿಮಗ ಹೆಂಗ ತಿಳೀಬೇಕು? ಹೆಂಗಸರಿಗೂ ಏನಾರೆ ಸ್ವಲ್ಪ ಸುಕಾ ಅನ್ನೂದು ಬೇಕೋ ಬ್ಯಾಡೋ? ಪಾಪ. ಬಾಲಿಯಾದ್ರೂ ಏನ ಮಾಡ್ಯಾಳು? ಅವಳ ಗಂಡ ಆ ಗಿಡ್ಡಗ ತನ್ನ ಮೈ ಬೆಳಿಸಿಕೊಳ್ಳೂದೊಂದ ಬಿಟ್ಟರ ಬ್ಯಾರೆ ಧ್ಯಾಸನS ಇರಾಕಿಲ್ಲ. ಹರೇದಾಕಿ ಬಾಲಿ ಬಾಳೇವು ಮಾಡಬೇಕೋ ಬ್ಯಾಡೋ?"

ಮುರಿಗೆವ್ವನ ಮಾತು ಬಲು ವಿಚಿತ್ರವಾಗಿ ತೋರಿತು ಗಿರಿಯನಿಗೆ. "ಅಂದರS? ನೀ ಹೇಳೂದಾದ್ರೂ ಏನ?"

"ಇನ್ನS ತಿಳೀಲಿಲ್ಲೇನ ನಿನಗ? ಬಾಲಿ ಅವನ್ನ ಬಿಟ್ಟು ಬಂದದ್ದು ಯಾಕ ಅನ್ನೂದು ತಿಳೀಲಿಲ್ಲಾ?"

"ಹೆಂಗ ತಿಳೀಬೇಕವ್ವ?"

"ಎಲ್ಲಾ ಒಡದS ಹೇಳಬೇಕೇನ ನಿನಗ? ಹೂಂ. ಕೇಳು, ಹೇಳು ತೀನಿ. ಈಗ ನೀನS ಇವಳನ್ನ ಮಾಡಿಕೊಂಡಿದ್ದೀ ಅಂತ ತಿಳಕೋ. ಹೇಣ ತಿಯ ಸಂಗಾತ ರಾತ್ರಿ ಮಲಕೋತೀಯೋ ಇಲ್ಲೋ?"

ಗಿರಿಯ ಸಂಕೋಚದಿಂದ ಸುಮ್ಮನೇ ಕುಳಿತಿದ್ದ. ಮುರಿಗೆವ್ವ ಮುಂದು ವರಿಸಿದಳು: "ಹೇಣತಿಯ ಸಂಗಾತ ಮಲಗೂದರಿಂದ ಶಕ್ತಿ ಕಡಿಮಿಯಾಗು ತೈತಿ, ಪೈಲವಾನಕಿ ಮೈ ಇಳೀತೈತಿ ಅಂತ ಹೇಳಿ ವರ್ಷಾನುವರ್ಷ ಅವಳ ಸಂಗ ಮಾಡೂದನ್ನ ಬಿಟ್ಟುಬಿಟ್ಟರ ಅವಳೇನು ಮಾಡಬೇಕು, ನೀನS ಹೇಳು. ಅವಳೂ ಹೆಣ್ಣಲ್ಲಾ? ಮನುಷ್ಯೇಳಲ್ಲಾ? ಅವಳಿಗೂ ಮನಸು ಅನ್ನೂದು ಇಲ್ಲಾ? ಸುಕಾ ಅನ್ನೂದು ಬೇಕಾಗಿಲ್ಲಾ? ಗಂಡನಾದವ ಮಾಡಿಕೊಂಡ ಹೇಣತೀನ ಹಂಗS ಬಿಟ್ಟು ಬರೀ ತನ್ನ ಮೈ ನೋಡಿಕೊಂಡರ ಅವಳೂ ತನ್ನ ಹಾದಿ ತಾ ಹುಡುಕಿಕೊಳ್ಳತಾಳ. ಇದರಾಗ ಅವಳದೇನಾದರೂ ತಪ್ಪೈತೇನ?"

"ಹಂ....ಹಂ.... ಹಿಂಗೆಲ್ಲಾ ಇತ್ತೇನ? ನನಗೇನೂ ಗೊತ್ತೇ ಇರ ಲಿಲ್ಲ ಬಿಡವ್ವ."

"ನನಗೂ ಗೊತ್ತಿರಾಕಿಲ್ಲ. ಮನ್ನೆ ಬಾಳ ಕಾಡಿಸಿ ಪೀಡಿಸಿ ಕೇಳಿದಾಗ ಎಲ್ಲಾ ಹೇಳಿವಳು ಬಾಲಿ. ಈಗ ಹೇಳು ಗಿರಿಯಾ, ಬಾಲಿ ಹೀಂಗ ಆದವ್ದ ರಾಗ ಅವಳದೇನ ತಪ್ಪೈತಿ?"

" ಏನೂ ಇಲ್ಲ ಖರೇ. ಆದರೂ.... "

" ನೀ ಅನ್ನೂದೇನು ನನಗ ಗೊತ್ತಾತು. ಸೋಡಚೀಟಿ ತಗೊಂಡು ಬ್ಯಾರೆ ಒಬ್ಬನ್ನ ಮಾಡಿಕೋಬೇಕು ಅಂತೀ ಹೌದಲ್ಲೋ? ಬಾಳೇವು ಮಾಡೂದು ಬ್ಯಾಡಾದವ ತಣ್ಣಗs ಸೋಡಚೀಟಿನಾದರೂ ಕೊಟ್ಟು ಬಿಡ ಬೇಕೋ ಬ್ಯಾಡೋ? ನಾಕೈದು ನೂರು ರುಪಾಯಿ ಕೊಟ್ಟರ ಕೊಡುತೀನಿ ಅಂತಾನ. ಇವರು ಬಡವರು ಪಾಪ—ಎಲ್ಲಿಂದ ತಂದು ಕೊಟ್ಟಾರು ರುಪಾಯಿ " "

ಮಾರನೆಯ ದಿನ ಮುರಿಗೆವ್ವ ಅವರಿಬ್ಬರನ್ನೂ ಟೊಪಿಗೀ ವಕೀಲನ ಹತ್ತಿರ ಕರೆದೊಯ್ದಳು. ಅರವತ್ತು ರೂಪಾಯಿಗಳ ಸ್ಟಾಂಪು ಅಂಟಿಸಿ ವಿವಾಹ ವಿಚ್ಛೇದನಕ್ಕಾಗಿ ಖಟ್ಲೆ ಹೂಡಬೇಕಾಗುವುದೆಂದೂ, ತನ್ನ ಫೀಜಿಗಾಗಿ ಐವತ್ತು ರೂಪಾಯಿ ಕೊಡಬೇಕಾಗುವುದೆಂದೂ ಆತ ಹೇಳಿದ. ನೂರಾ ಹತ್ತು ರೂಪಾಯಿ ಎನ್ನುತ್ತಲೂ ಗಿರಿಯನ ಮುಖ ಕಳೆಗುಂದಿ ಹೋಯಿತು.

" ನಾಳೆ ಬಂದು ಹೇಳುತೀವಿ ವಕೀಲರೆ, " ಎಂದು ನುಡಿದು ಆವನನ್ನು ಬೀಳ್ಕೊಂಡು ಮುರಿಗೆವ್ವ ಅವರಿಬ್ಬರನ್ನೂ ಪತ್ರಿಕೆಯ ಕಚೇರಿಗೆ ಕರೆದು ಕೊಂಡು ಹೊರಟಳು. ಚಹದಂಗಡಿಯೊಂದರಲ್ಲಿ ವಿಚಾರಿಸಿದಾಗ ' ಜನಪಥ' ಪತ್ರಿಕೆಯ ಕಚೇರಿಯೆಲ್ಲಿರುವುದೆಂಬುದು ತಿಳಿದುಬಂದಿತು.

ಪತ್ರಿಕೆಯ ಸಂಪಾದಕ ಹರಿಹರನನ್ನು ಕಂಡು ಸೋಡಚೀಟಿಯ ವಿಷಯ ವನ್ನೆಲ್ಲ ವಿವರಿಸಿದರು.

" ಖಟ್ಲೆ ಹಾಕಿದರೆ ಸೋಡಚೀಟಿ ಸುಲಭವಾಗಿ ಸಿಗಬಹುದಲ್ಲಾ ? " ಎಂದು ಆತ ಕೇಳಿದ. ತಾವು ಟೊಪಿಗೀ ವಕೀಲನ ಹತ್ತಿರ ಹೋಗಿ ಬಂದು ದನ್ನು ಅವರು ಹೇಳಿದರು.

" ನೂರಾಹತ್ತು ರೂಪಾಯಿ ಕೇಳಿದನೇ ? ಎಲಾ ಕಳ್ಳ ! ನೀವು ಹಳ್ಳಿಯ ಮಂದಿ, ಸುಲಭವಾಗಿ ನಿಮ್ಮನ್ನು ಮೋಸಗೊಳಿಸಬಹುದೆಂದು ಹೀಗೆ ಹೇಳಿ ದ್ದಾನೆ. ನೀವು ಅವನ ಬಲೆಗೆ ಬೀಳದಿದ್ದುದೇ ಒಳ್ಳೆಯದಾಯಿತು. "

" ಯಾವ ಹುತ್ತದಾಗ ಯಾವ ಹಾವೈತ್ಯೋ ನಮಗ ಹೆಂಗ ತಿಳೀ ಬೇಕ್ರೀ ಅಣ್ಣಾವರs ? ಹಳ್ಳೀ ಮಂದಿ ಅಂದರ ಎಲ್ಲಾರೂ ಹರಕೊಂಡು ತಿನ್ನು ವವರs ನೋಡ್ರಿ, " ಎಂದಳು ಮುರಿಗೆವ್ವ.

"ನೀನು ಅನ್ನುವದೇನೂ ಸುಳ್ಳಲ್ಲ ತಾಯಿ. ನೀವು ಅಶಿಕ್ಷಿತರು. ಓದಲು ಬರೆಯಲು ಬರುವದಿಲ್ಲ. ನಿಮ್ಮ ಈ ಅಜ್ಞಾನದ ದುರುಪಯೋಗ ಮಾಡಿ ಕೊಂಡು ಧೂರ್ತ ಜನರು ನಿಮ್ಮನ್ನು ಸುಲಿದು ತಿನ್ನುತ್ತಿದ್ದಾರೆ.?

"ಬಡವರನ್ನು ಉಳಿಸಿಕೊಳ್ಳುವವರು ಯಾರೂ ಇಲ್ಲೇನ್ರೀ?" ಎಂದು ಗಿರಿಯ ಕೇಳಿದ.

"ನಿಮ್ಮ ಕಾಲ ಮೇಲೆ ನೀವು ನಿಲ್ಲಲು ಕಲಿಯಬೇಕಪ್ಪ. ತಾ ಬಲ, ಜಗ ಬಲ. ನೀವು ರೈತರು ಬಡವರು ಎಲ್ಲಾ ಒಂದಾಗಬೇಕು. ಸಂಘ ಕಟ್ಟಿ ಕೊಳ್ಳಬೇಕು. ನಿಮ್ಮನ್ನು ಸುಲಿಯುವವರನ್ನು ಎದುರಿಸಿ ನಿಂತು ಹೋರಾಡ ಬೇಕು," ಎಂದು ಹರಿಹರ ಒಂದು ಉಪನ್ಯಾಸವನ್ನೇ ಮಾಡಿ ಮುಗಿಸಿದ. ಆತ ಹೇಳಿದುದೇನು ಎನ್ನುವುದೇ ಗಿರಿಯನಿಗೆ ಅರ್ಥವಾಗಲಿಲ್ಲ.

ಮುರಿಗೆವ್ವ ಕೇಳಿದಳು: "ಸೋಡಚೀಟಿ ಹಾಕಿ ಬಿಡೂಣೇನ್ರಿ ಪತ್ರ ದಾಗ ?"

"ನಿಮಗೆ ಮನಸ್ಸಿದ್ದರೆ ಹಾಕಬಹುದು."

"ಅದಕ್ಕ ಎಷ್ಟಾಗುತ್ತೈತಿ ಅಣ್ಣಾವರs ?"

"ಬ್ಯಾರೆ ಪತ್ರಿಕೆಯವರು ಹತ್ತಿಪ್ಪತ್ತು ರೂಪಾಯಿ ಚಾರ್ಜು ಮಾಡು ತಾರ. ನೀವು ಬಡವರು. ನಿಮ್ಮಿಂದ ಹೆಚ್ಚು ರೊಕ್ಕ ಸ್ವೀಕರಿಸಲು ನನಗೆ ಮನಸ್ಸಿಲ್ಲ. ಏಳು ರೂಪಾಯಿ ಕೊಟ್ಟರೆ ಸಾಕು."

ನೋಟೀಸನ್ನು ಕೊಟ್ಟು ಮೂವರೂ ಬೀದಿಗೆ ಬಂದರು. ಮಧ್ಯಾಹ್ನದ ರೈಲಿಗೆ ಗಿರಿಯ ಮುರಿಗೆವ್ವ ಇಬ್ಬರೂ ಊರಿಗೆ ಹೊರಡಬೇಕಾಗಿದ್ದಿತು.

"ನೀನೂ ಬರ್ತೀಯೇನs ಬಾಲೀ ?" ಎಂದು ಕೇಳಿದ ಗಿರಿಯ.

"ನಾ ಯಾಕ ಬರಲಿ ಕೆಲಸಾ ಬಿಟ್ಟು ? ನೀನs ಬಾ ಬೇಕಾದರ ಇಲ್ಲಿಗೇ," ಎಂದಳು ಬಾಲಿ.

"ಇಷ್ಟ್ಯಾಕ ಅವಸರಾ ಬಾರೋ ಗಿರಿಯಾ. ನೋಟೀಸಿಗೆ ಅವರೇ ನಂತ ಉತ್ತರಾ ಕೊಡುತಾರೋ ನೋಡೂಣು. ಬಾಲಿ ಎಲ್ಲಿ ಓಡಿ ಹೋಗು ತಾಳ ?" ಎಂದು ನಗುತ್ತ ನುಡಿದಳು ಮುರಿಗೆವ್ವ.

# ಹದಿಮೂರು

" ಗಿಡ್ಡಪ್ಪಾ ಭೀಮಪ್ಪಾ ಕರೆಪ್ಪಗೋಳ ಸಾಕೀನ ............ಹಳ್ಳಿ ಇವನಿಗೆ :—

ಕೆಳಗೆ ಸಹಿ ಮಾಡುವ ಬಾಲವ್ವಾ ಕೋಂ ಗಿಡ್ಡಪ್ಪಾ ಕರೆಪ್ಪಗೋಳ ಹಾಲಿವಸ್ತಿ ............... ಇವಳು ಕೊಡುವ ಜಾಹೀರ ನೋಟೀಸು ಏನೆಂದರೆ :—

ನೀನು ನನ್ನ ಲಗ್ನದ ಗಂಡನಿದ್ದು ನಾನು ಮೈನೆರೆದ ಬಳಿಕ ಒಂದು ವರ್ಷದ ವರೆಗೆ ನಿನ್ನ ಮನೆಯಲ್ಲಿದ್ದರೂ ನೀನು ನನ್ನ ಸಂಗಡ ಸಂಸಾರ ಮಾಡದೆ ನನ್ನನ್ನು ಸರಿಯಾಗಿ ನಡೆಸಿಕೊಳ್ಳದೆ ಹೊಡೆದು ಬಡಿದು ಮಾಡಿ ನನ್ನನ್ನು ಮನೆ ಬಿಟ್ಟು ಹೊರಗೆ ಹಾಕಿ ಇಂದಿಗೆ ನಾಲ್ಕು ವರ್ಷಗಳಾಗುತ್ತ ಬಂದವು. ನನ್ನನ್ನು ಕರೆದೊಯ್ದು ಸಂಸಾರ ಮಾಡಬೇಕೆಂದು ಪಂಚರ ಸಮಕ್ಷಮ ಹೇಳಿ ಕಳಿಸಿದರೂ ನೀನು ನನ್ನನ್ನು ಕರೆದೊಯ್ಯಲಿಲ್ಲ. ನಾಲ್ಕು ವರ್ಷಗಳಿಂದಲೂ ನಾನು ನನ್ನ ತವರುಮನೆಯಲ್ಲಿಯೆ ಇರಬೇಕಾಗಿ ಬಂದಿದ್ದು ನನ್ನ ತವರಿನವರು ಬಹು ಬಡವರಿರುವ ಮೂಲಕ ನನ್ನ ಉಪಜೀವನಕ್ಕಾಗಿ ವರ್ಷಕ್ಕೆ ಎರಡು ನೂರು ರೂಪಾಯಿಗಳ ಪ್ರಕಾರ ಎಂಟು ನೂರು ರೂಪಾಯಿ ಸಾಲ ಮಾಡಬೇಕಾಗಿ ಬಂತು. ಈ ಸಾಲವನ್ನು ತೀರಿಸಿ, ಈ ನೋಟೀಸು ಮುಟ್ಟಿದ ಎಂಟು ದಿನಗಳಲ್ಲಿ ನೀನು ನನ್ನನ್ನು ಕರೆದೊಯ್ದು ಬಾಳ್ವೆ ಮಾಡಬೇಕು. ಇದಕ್ಕೆ ತಪ್ಪಿದರೆ ನಾನು ಬೇರೆಯವನನ್ನು ಉಡಿಕೆಯಾಗಿ ಹೋಗುವೆನು. ಆನಂತರ ನನ್ನ ಮೇಲಾಗಲಿ, ನನ್ನ ಉಡಿಕೆ ಗಂಡನ ಮೇಲಾಗಲಿ ನಿನ್ನ ಹಕ್ಕೇನೂ ನಡಿಯಲಾರದು. ಇದೇ ಸೋಡಚೀಟಿಯೆಂದು ತಿಳಿಯಬೇಕು. ಈ ನೋಟೀಸಿನ ಖರ್ಚು ನಿನ್ನ ತಲೆಯ ಮೇಲಿದೆ. ಎಂದು ಕೊಟ್ಟ ಜಾಹೀರ ನೋಟೀಸು ಸಹಿ ತಾರೀಖು............ "

ಓದಿ ಮುಗಿಸಿ, ಪತ್ರಿಕೆಯನ್ನು ಕೆಳಗಿರಿಸಿ ಕಾಮಣ್ಣನೆಂದ:

" ಎಲ್ಲಾ ನೆಟ್ಟಗ ಕೇಳಿದಿಯಾ ಭೀಮಾ ? "

" ಇದನ್ನೆಲ್ಲಾ ಯಾರು ಮಾಡಿಸಿದ್ದಾರು ಕಾಮಣ್ಣಾ ? "

" ಇನ್ಯಾರು ಬರುತಾರೋ ? ಅದಾನಲ್ಲಾ ಆ ಸೂಳೀಮಗಾ ಗೌಡ. ಅವನದs ಎಲ್ಲಾ ರಾಡಿ. "

" ಬಾಲಿ ಈಗ ಶಹರದಾಗ ಅದಾಳಂತಲ್ಲೋ ಕಾಮಣ್ಣಾ ? "

" ಹೂಂ. ನಾನೂ ಕೇಳೀನಿ. ಗಿರಿಯ ಆವಾಗ ಆವಾಗ ಅಲ್ಲಿಗೇ ಹೋಗಿ ಬರುತ್ತಿರುತಾನಂತ. ಗೌಡನೂ ಹೋಗಿದ್ದನಂತೆ ಮುಸ್ಸಿ ಮುಸ್ಸಿ. "

" ಆ ಸೂಳೀಮಗ ಗಿರಿಂಯನ್ನ ಏನು ಮಾಡಿದರ ನನ್ನ ಸಿಟ್ಟುಹೋದೀತು. ನಮ್ಮ ಹೊಲಾ ಎತ್ತಿ ಹಾಕಿದ್ದಲ್ಲದs ಹೆಣ್ಣೂ ಎತ್ತಿ ಹಾಕಿದನಲ್ಲಾ.... "

" ನಾನಿರೂತನಕ ನೀನ್ಯಾಕ ಚಿಂತೀ ಮಾಡುತೀ, ಸುಮ್ಮನಿರೋ ಭೀಮಾ. ಆ ಗಿರಿಯ ಈ ಊರಾಗ ಬಾಳೀವು ಹೆಂಗ ಮಾಡುತಾನ ನೋಡೂಣು, ನಮ್ಮ ವೈರ ಕಟ್ಟಿಕೊಂಡು. "

" ಈಗ ಈ ನೋಟೀಸಿಗೇನ ಮಾಡೂಣು ? "

" ಏನ, ಒಂದು ನೋಟೀಸು ಕೊಟ್ಟರ ಸೋಡಚೀಟಿ ಆದಾಂಗಾತೇನ ? ನಮಗೇನ ಕಾಯದೇ ತಿಳಿಯೂದಿಲ್ಲಾ ? ನಡೀ ಶಹರಕ್ಕ ಹೋಗೂಣು. ಇದ ಕ್ಕೊಂದು ಉತ್ತರಾ ಕೊಟ್ಟು ಬರೂಣಂತ. ನಮ್ಮ ಟೊಪಿಗೀ ವಕೀಲ ಅಂದರ ಇಂಥಾವರಾಗೆಲ್ಲಾ ಬಾಳ ಶಾಣ್ಯಾ ಅದಾನು. "

" ಅವ ಎಂಥಾ ಶ್ಯಾಣ್ಯಾ ಅನ್ನೂದು ಚಲೋ ಗೊತ್ತಾಗೈತಲ್ಲಾ ನಮಗ? ಹೊಲಾ ಕಳದು ಬಿಟ್ಟ. ಈಗ ಮತ್ತ ಅವನ ಹಂತೀಲಿ ಹೋಗೂಹಂತೀಯಾ ? "

" ಹೊಲಾ ಎಲ್ಲಿ ಕಳೀತಾನೋ ? ಅಪೀಲು ನಡದೈತಲ್ಲಾ ಇನ್ನs ? ಅದರಾಗ ನಿನ್ನಂಗs ಆಗದಿದ್ದರ ಆಮ್ಯಾಲ ಮಾತಾಡು ವಕೀಲಗ. "

" ಏನ ಅಪೀಲೋ. ಇನ್ನs ಚೌಕಸಿಗೆ ಕೂಡಾ ಬರಲಿಲ್ಲ. "

" ಸರಕಾರೀ ಕೆಲಸ ಅಂದರ ಹಂಗs ಅಪಾ. ತಡಾ ಆಗೂದs ಅಲ್ಲಾ ? ಆದರೂ ನಿನ್ನ ಅಪೀಲು ಲಗೂ ತಗೋಬೇಕಂತ ಕಾರಕೂನಗ ಹೇಳಿದಾನ ಮರಿಯಪ್ಪಣ್ಣ. ವಕೀಲನೂ ಹೇಳಿದಾನ. ಇಂದು ನಾಳೆ ಬಂದೀತು ಅನ್ನು. "

ಅದೇ ದಿನ ಸಂಜೆಯ ರೈಲಿಗೆ ಅವರಿಬ್ಬರೂ ನಗರಕ್ಕೆ ಹೊರಟರು.

ಅವರು ಬಂದಾಗ ಟೊಪಿಗೀ ವಕೀಲ ಮನೆಯಲ್ಲಿರಲಿಲ್ಲ. ಕ್ಲಬ್ಬಿಗೆ

ಹೋಗಿದ್ದವನು, ರಾತ್ರಿ ಎಂಟು ಗಂಟೆಯ ವೇಳೆಗೆ ಹಿಂದಿರುಗಿ ಬಂದು, ಅವರಿಬ್ಬರನ್ನೂ ಕಂಡು ದೇಶಾವರಿ ನಗೆ ನಗುತ್ತ--- "ಓಹ್ಹೋ....ಬಂದೇ ಬಿಟ್ಟಿರೇನು ? ಇವತ್ತು ಮುಂಜಾನೆಯೇ ಅನಿಸಿತ್ತು ನನಗೆ—ನೀವು ಬರುತೀರಿ ಅಂತ. ಬಂದೇ ಬಿಟ್ಟಿರಿ ! ನೀವು ಯಾತಕ್ಕಾಗಿ ಬಂದಿರುವಿರೆಂಬುದು ನನಗೆ ಗೊತ್ತೇ ಇದೆ. ಆ ನೋಟೀಸಿನ ಸಂಬಂಧದಲ್ಲಿ ಹೌದಲ್ಲೋ ? ನೋಟೀಸು ಕೊಡುವದಕ್ಕೆ ಮೊದಲು ಆ ಮಂದಿ ನನ್ನ ಹತ್ತಿರವೇ ಬಂದಿದ್ದರು, ಸೋಡಚೀಟಿ ದಾವೆ ಹಾಕಬೇಕು ಅಂತ. ಭೀಮು ಅಂದರೆ ನಮ್ಮ ಪಕ್ಷಕಾರ. ಅವನ ವಿರುದ್ಧ ದಾವೆ ನಾನು ಹ್ಯಾಗೆ ಹಿಡಿಯುವದು ? ಆಗುವದಿಲ್ಲಂತ ಹೇಳಿ ಕಳಿಸಿಬಿಟ್ಟೆ. ಅವರು ಹೋಗಿ ನೋಟೀಸು ಕೊಟ್ಟುಬಿಟ್ಟಿದಾರೆ. ಸರಿ. ಸರಿ. ಆ ನೋಟೀಸಿನಿಂದೆಲ್ಲ ಸೋಡಚೀಟಿಯಾಗುವ ಹಾಗಿದೆಯೆ? ಎಂಥ ಮೂರ್ಖ ಮಂದಿ ! ಆ ಹರಿಹರ ಇವರಿಗೆ ಏನೋ ಬುರುಡೆ ಹೊಡೆದು ನೋಟೀಸು ಬರೆಸಿಕೊಂಡಿದ್ದಾನು. ಅವನಿಗೊಂದು ಇಪ್ಪತ್ತು ರೂಪಾಯಿ ಲಾಭ ಅಷ್ಟೆ. ಇವರಿಗೇನೂ ಇಲ್ಲ. " ಎಂದು ಡಬಡಬನೆ ನುಡಿದು ಕೊಟಡಿಯನ್ನೆಲ್ಲ ನಡುಗಿಸುವ ಧ್ವನಿ ತೆಗೆದು ನಗತೊಡಗಿದ.

"ಅವೊತ್ತು ಯಾರ್ಯಾರು ಬಂದಿದ್ರು ವಕೀಲರs ?" ಎಂದು ಕೇಳಿದ ಭೀಮಪ್ಪ.

"ನಿನ್ನ ಸೊಸೆ, ಅವಳ ಜತೆಗೆ ಇನ್ನೊಬ್ಬಳು ನಡುವಯಸ್ಸಿನ ಹೆಂಗಸು, ಒಬ್ಬ ಪ್ರಾಯದವ ಬಂದಿದ್ದರು. "

"ಶಿದಗೌಡ ಬಂದಿರಾಕಿಲ್ಲ ?"

"ಇಲ್ಲ. ಅವನೇಕೆ ಬರುತಾನೆ ?"

"ಇಂಥಾ ಕೆಲಸ ಸಿಕ್ಕರ ಬಿಟ್ಟಾನೇನ್ರೀ ಅವಾ ? ಎಲ್ಲಿರೆ ಏನರೆ ನಾಕು ದುಡ್ಡು ಸಿಕ್ಕೀತೇನು ಅಂತ ಕಾದಿರುತಾನ ಹರಕೊಳ್ಳೊದಕ್ಕ. "

ನೋಟೀಸಿಗೆ ಉತ್ತರ ಬರೆದು ಮುಗಿಸಿ ಟೊಪಿಗೀ ವಕೀಲ ಹೇಳಿದ:

"ಇದನ್ನೋದಿದರೆ ಸಾಕು. ಅವರೆಲ್ಲಾ ಮಣ್ಣು ತಿಂದು ಹೋಗುತಾರೆ. ಇದೇ ವಾರ ಬರುವ ಹಾಗೆ ಮಾಡೋಣ. "

"ಯಾವ ಪೇಪರದಾಗ ಕೊಡೂದು ವಕೀಲರs ? ಆ ಜನಪತದಾಗs ಕೊಡೂದೇನ್ರಿ ?"

“ಆ ಹರಿಹರ್ಯಾನಿಗೇಕೆ ಮತ್ತೆ ಇಪ್ಪತ್ತು ರೂಪಾಯಿ ಲಾಭ? ಕೀರ್ತನ ಕಂಠೀರವ ಗಂಗಾಧರಶಾಸ್ತ್ರಿ ಅಂತ ಇದಾರೆ ನಮ್ಮ ಗೆಳೆಯರು. ಲಿಂಗವೀರ ಅಂತ ಉತ್ತಮ ಪತ್ರಿಕೆ ಹೊರಡಿಸುತ್ತಾರೆ. ಅವರಿಗೆ ಕಳಿಸಿ ಕೊಡುತ್ತೇನೆ. ನಾಳೆ ಬೆಳಿಗ್ಗೆ ನಮ್ಮ ಕಾರಕೂನ ಬಂದೊಡನೆ ಬೇರೆ ಕಾಗದದ ಮೇಲೆ ಬರೆಯಿಸಿಕೊಡುತ್ತೇನೆ. ಅದಕ್ಕೆ ಗಿಡ್ಡನ ಸಹಿ ಹಾಕಿಸಿಕೊಂಡು ಬಂದು ಬಿಟ್ಟರಾಯಿತು.”

“ಚಾರ್ಜು ಎಷ್ಟಾಗುತೈತಿ ವಕೀಲರs?”

“ಕಾರಕೂನನ ಫೀ ಒಂದೈದು ರೂಪಾಯಿ, ನಾನು ಸಲಹಾ ಕೊಟ್ಟದ್ದಕ್ಕೆ ಒಂದು ಹತ್ತು ರೂಪಾಯಿ, ನೋಟೀಸಿನ ಖರ್ಚು ಇಪ್ಪತ್ತು ರೂಪಾಯಿ” ಎಂದು ಹೇಳಿ, “ನೋಟೀಸಿಗೆ ಹತ್ತು ರೂಪಾಯಿಯಾದರೆ ಬಹಳವಾದೀತು. ಇನ್ನೂ ಹತ್ತು ನನಗೇ ಉಳಿಯುತ್ತದೆ,” ಎಂದು ಮನಸ್ಸಿನಲ್ಲೇ ಹೇಳಿಕೊಂಡ ವಕೀಲ.

“ಇಷ್ಟs ಹೌದಲ್ಲರಿ? ಏನ ದೊಡ್ಡದು ಬಿಡ್ರಿ. ಅಂತೂ ಆ ಹುಡುಗಿಗೆ ಸೋಡಚೀಟಿ ಸಿಗಧಾಂಗ ಆಗಬೇಕು ನೋಡಿರಿ,” ಎಂದ ಭೀಮಪ್ಪ.

“ನನ್ನಂಥ ವಕೀಲ ಇರುವಾಗ ನಿನ್ನ ಕೈ ಬಿಟ್ಟು ಹೋಗುವಳೇನೋ ನಿನ್ನ ಸೊಸೆ, ಭೀಮಾ?”

“ನಮ್ಮ ಕೈಬಿಟ್ಟು ಎಂದೋ ಹೋಗ್ಯಾಳ. ಅವಳನ್ನ ಮತ್ತ ಮನಿಯೊಳಗ ಕರಕೊಳ್ಳೂದಕ್ಕೂ ಮನಸಿಲ್ಲರೀ ನಮಗ. ಆದರೂ ಆ ಗಿರಿಯಾಗ ಮಾತ್ರ ಆಕಿ ದಕ್ಕಬಾರದು. ಒಳೇ ಫಜೀತಿ ಆಗಬೇಕು ನೋಡ್ರಿ ಅವರಮ.”

“ಫಜೀತಿ ಆಗುವ ಹಾಗೆ ನೋಟೀಸು ತಯಾರಿಸಿದ್ದೇನೆ. ಓದಿ ಹೇಳಲೇನು?” ಎಂದು ನುಡಿದು ವಕೀಲ ತಾನು ಬರೆದುದನ್ನು ಓದತೊಡಗಿದ:

ಶ್ರೀಮತಿ ಬಾಲವ್ವಾ ಕೋಂ ಗಿಡ್ಡಪ್ಪಾ ಕರೆಪ್ಪಗೋಳ
ಹಾಲಿವಸ್ತಿ ............ಇವಳಿಗೆ :—

ಗಿಡ್ಡಪ್ಪಾ ಭೀಮಪ್ಪಾ ಕರೆಪ್ಪಗೋಳ ಇವನು ಕೊಡುವ ಜಾಹೀರ ನೋಟೀಸು ಏನೆಂದರೆ :—

ಈ ಒಳಗಡೆ ನೀನು ಜನಪಥ ಪತ್ರಿಕೆಯಲ್ಲಿ ನನಗೊಂದು ನೋಟೀಸು ಕೊಟ್ಟಿದ್ದು ಮುಟ್ಟಿ ಮಜಕೂರ ತಿಳಿಯಿತು. ನನಗೆ ವಿನಾಕಾರಣ ತ್ರಾಸ

ಕೊಡುವ ಹೇತುವಿನಿಂದ ನೀನು ಕೆಲವು ಉಪದ್ವ್ಯಾಪಿ ಜನರ ಮಾತು ಕೇಳಿ ಕೊಂಡು ಸುಳ್ಳು ಸಂಗತಿಗಳನ್ನು ತುಂಬಿ ನೋಟೀಸು ಕೊಟ್ಟಿರುತ್ತೀ. ನಾನು ನಿನ್ನನ್ನೆಂದೂ ಹೊಡೆದು ಬಡಿದು ಮಾಡಿಲ್ಲ. ನಾನಾಗಿಯೆ ನಿನ್ನನ್ನು ಮನೆ ಯಿಂದ ಹೊರಗೆ ಹಾಕಿಯೂ ಇಲ್ಲ. ನೀನೇ ಕೆಟ್ಟ ನಡತೆಯುವಳಾಗಿ ಮೇಲಿಂದ ಮೇಲೆ ನಿನ್ನ ತವರುಮನೆಗೆ ಹೇಳದೆ ಕೇಳದೆ ಓಡಿಹೋಗುವದನ್ನು ಮಾಡುತ್ತ ಬಂದು ಈಗ ನಾಲ್ಕು ವರ್ಷಗಳ ಹಿಂದೆ ಎಂಟು ನೂರು ರೂಪಾಯಿ ಬೆಲೆಯ ಆಭರಣಗಳ ಸಮೇತ ಹೋದವಳು ಇದುವರೆಗೆ ಬಂದಿಲ್ಲ. ಎಷ್ಟೋ ಸಲ ನಾನು ಕರೆಯಲು ಬಂದರೂ ನೀನು ಬರಲಿಲ್ಲ. ಈಗಲಾದರೂ ನೀನು ನನ್ನ ಆಭರಣಗಳನ್ನು ತೆಗೆದುಕೊಂಡು ಬಂದು ನನ್ನ ಸಂಗಡ ಬಾಳ್ವೆ ಮಾಡಬೇಕು. ಇದಕ್ಕೆ ತಪ್ಪಿ ಬೇರೆಯುವನನ್ನು ನೀನು ಮಾಡಿಕೊಂಡದ್ದೇ ಆದರೆ ನಿನ್ನ ಮೇಲೂ ನಿನ್ನನ್ನು ಮಾಡಿಕೊಂಡವನ ಮೇಲೂ ಕಾಯದೆಯ ಪ್ರಕಾರ ಕ್ರಮ ತೆಗೆದುಕೊಳ್ಳುವದರಲ್ಲಿ ಬರುವದು. ಈ ನೋಟೀಸಿನ ಖರ್ಚು ನಿನ್ನ ತಲೆಯ ಮೇಲಿದೆ. ತಿಳಿಯುವದು. ಎಂದು ಕೊಟ್ಟ ಜಾಹೀರ ನೋಟೀಸು ... "

ಓದಿ ಮುಗಿಸಿ ವಕೀಲ ಖಹಖಹಾ ಎಂದು ನಗುತ್ತ— " ಹಾ ? ಕೇಳಿ ದಿರಾ ? ಹೇಗಿದೆ ನೋಟೀಸು ? " ಎಂದ.

" ಭೇಷ್ ಬರಿದೀರಿ ವಕೀಲರs " ಎಂದ ಕಾಮಣ್ಣ.

" ಇದನ್ನ ನೋಡಿ ಅವರು ತಣ್ಣಗ ಕುಂದ್ರುತಾರೇನ್ರಿ ? " ಎಂದ ಭೀಮಪ್ಪ.

" ಮಿಸುಕಾಡಿದರೆ ಹೇಳಿರಿ. ಇನ್ನು ಮುಂದೆ ನಿಮ್ಮ ತಂಟೆಗೇ ಬರುವ ದಿಲ್ಲ ಅವರು. "

ಒಂದು ಪ್ರಕರಣ ಮುಗಿಯಿತೆಂಬ ಸಮಾಧಾನ ಪಟ್ಟುಕೊಳ್ಳುತ್ತ ಕಾಮಣ್ಣ ಭೀಮಪ್ಪ ಊರಿಗೆ ಹಿಂದಿರುಗಿದರು. ಆದರೆ ಆ ಸಮಾಧಾನ ಬಹುದಿನ ಉಳಿಯಲಿಲ್ಲ. ' ಲಿಂಗವೀರ ' ಪತ್ರಿಕೆಯಲ್ಲಿ ಅವರ ನೋಟೀಸು ಪ್ರಕಟವಾದ ನಾಲ್ಕು ದಿನಗಳಲ್ಲಿಯೆ ' ಜನಪಥ ' ದಲ್ಲಿ ಬಾಲಿ ' ನೋಟೀಸಿಗೆ ಉತ್ತರ ' ಪ್ರಕಟಿಸಿದಳು. ಅವಳೂ ಹಟಕ್ಕೆ ಕಟ್ಟು ಬಿದ್ದಂತಿತ್ತು. " ಏನಾದ ದ್ದಾಗಲಿ. ಇವರನ್ನ ಹಿಂಗs ಬಿಡಬಾರದು. ಸೋಡಚೀಟಿ ತಗೊಂಡೇ ಬಿಡಬೇಕು, " ಎಂದು ನಿರ್ಧಾರ ಮಾಡಿದ್ದ ಹಾಗಿತ್ತು. ಅವಳು ಕೊಟ್ಟ

ಉತ್ತರವನ್ನೋದಿ ತಿಳಿದು ಕಾಮಣ್ಣ ಭೀಮಪ್ಪ ಇಬ್ಬರೂ ಕೆಲಹೊತ್ತು ದಂಗು ಬಡೆದವರಂತೆ ಕುಳಿತಿದ್ದರು. ಆ ಉತ್ತರವಿದ್ದುದು ಹೀಗೆ:

" ನೀನು ' ಲಿಂಗವೀರ ' ದಲ್ಲಿ ಕೊಟ್ಟ ನೋಟೀಸು ಮುಟ್ಟಿ ಮಜಕೂರ ತಿಳಿಯಿತು. ಅದರಲ್ಲಿ ನೀನು ಕಾಣಿಸಿದ ಸಂಗತಿಗಳೆಲ್ಲ ಪೂರಾ ಸುಳ್ಳು ಇರುತ್ತವೆ. ನೀನು ನನ್ನ ಮೈಮೇಲೆ ಒಂದೂ ಆಭರಣ ಇಟ್ಟಿರುವದಿಲ್ಲ. ಇಡುವ ಶಕ್ತಿಯೂ ನಿನ್ನ ತಂದೆಗಿರಲಿಲ್ಲ. ಈ ವಿಷಯವನ್ನು ನಿಮ್ಮೂರಿನ ನಾಲ್ಕುಜನ ಪಂಚರಿಂದಲೇ ಸಿದ್ಧಮಾಡಿ ಕೊಡಲು ಸಾಧ್ಯವಿದೆ. ನೀನು ಹೇಳುವಂತೆ ನಾನೆಂದೂ ಕೆಟ್ಟ ನಡತೆಗೆ ಬಿದ್ದಿಲ್ಲ, ತವರುಮನೆಗೆ ಓಡಿ ಹೋಗಿಯೂ ಇಲ್ಲ. ನನ್ನೊಡನೆ ಬಾಳುವೆ ಮಾಡಲು ಮನಸ್ಸಿಲ್ಲದಿದ್ದುದರಿಂದ ನೀನೇ ನನ್ನನ್ನು ಅಮಾನುಷ ರೀತಿಯಲ್ಲಿ ಬಡಿದು ಹೊರಗೆ ಹಾಕಿರುವಿ. ನಾನು ಮೊದಲಿನ ನೋಟೀಸಿನಲ್ಲಿ ತಿಳಿಸಿದ ಪ್ರಕಾರ ನನಗಾದ ಸಾಲ ತೀರಿಸಿ ಒಂದು ವಾರದಲ್ಲಿ ನನ್ನನ್ನು ಕರೆದೊಯ್ಯಬೇಕು. ಅದಕ್ಕೆ ತಪ್ಪಿದರೆ ನಾನು ನನ್ನ ಮರ್ಜಿಪ್ರಕಾರ ಬೇರೆಯವನನ್ನು ಉಡಿಕೆಯಾಗುವೆನು. ಇದೇ ಸೋಡಚೀಟಿಯೆಂದು ತಿಳಿಯಬಹುದು. ಎಂದು ಕೊಟ್ಟ ನೋಟೀಸು.... "

ಕಾಮಣ್ಣನನ್ನು ಕರೆದುಕೊಂಡು ಮತ್ತೆ ನಗರಕ್ಕೆ ಧಾವಿಸಿದ ಭೀಮಪ್ಪ. ಟೊಪಿಗಿ ವಕೀಲನ ಆನಂದ ಮುಖದಲ್ಲಿ ಹಿಡಿಸಲಾರದೆ ನಿಸ್ಸುಷಕ್ತೊವ್ಮ್ಮೆ ನಗೆಯ ರೂಪದಲ್ಲಿ ಹೊರಸೂಸುತ್ತಿತ್ತು.

" ಬರ್ರಿ, ಬರ್ರಿ. ಬಂದೇ ಬಿಟ್ಟಿರಲ್ಲ ? ಆ ಹುಡುಗಿಯಿಂದ ಅವರು ಉತ್ತರ ಕೊಡಿಸಬಹುದೆಂದೂ ನನಗೆ ಹೊಳೆದಿತ್ತು ಆಗಲೆ. ಎಲ್ಲಾ ಆ ತುಂಟ ಹರಿಪಂತನ ಉಪದ್ವ್ಯಾಪವೆಂದು ತೋರುತ್ತದೆ. ನನ್ನನ್ನು ಕಂಡರೆ ಅವನಿಗಾಗದು. ಅಂತೆಯೇ ಆ ಹುಡುಗಿಯ ಪಕ್ಷ ವಹಿಸಿ ಕಡೆಯವರೆಗೂ ಬಡಿದಾಡಬೇಕೆಂದು ಅವನು ಗಟ್ಟಿ ಮಾಡಿರಬೇಕು. "

" ನಮಗಾದರೂ ಏನ ಧಾಡಿ ವಕೀಲರs ? ನಾವೂ ಕಡೀತನಕ ಬಡಿದಾಡೂಣು. ಖರ್ಚಿಗೆ ಹಿಂದುಮುಂದ ನೋಡಬ್ಯಾಡ್ರಿ. ದೇವ್ರು ನನಗೇನೂ ಕಡಿಮಿ ಮಾಡಿಲ್ಲ. " ಎಂದು ಹೇಳಿ ಭೀಮಪ್ಪ ಮೀಸೆಯ ಮೇಲೆ ಕೈಯೆಳೆದ.

" ಹಂಗಾದರೇನೂ ಚಿಂತೆಯಿಲ್ಲ ಬಿಡೋ ಭೀಮಾ. ಅವರು ಉಡಿಕೆ

ಯಾದರೂ ಆಗಲೊಲ್ಲರೇಕೆ, ಸದ್ಯಕ್ಕೆ ಸುಮ್ಮನಿದ್ದು ಆ ಮೇಲೆ ಅವರ ಮೇಲೆ ಕ್ರಿಮಿನಲ್ ಖಟ್ಲೆ ಹಾಕಿದರಾಯ್ತು. ಏನಿಲ್ಲ ಅಂದರೂ ಮೂರು ವರ್ಷ ಕಠಿಣ ಶಿಕ್ಷೆ ಆಗುತ್ತದೆ."

"ಗಿರಿಯಾಗ ಮೂರು ವರ್ಷ ಶಿಕ್ಷಾ ಮಾಡಿಸುತೀನಿ. ಅವನ್ನ ಹಿಂಡಲಗಿಗೆ ಕಳಿಸದಿದ್ದರ ನನ್ನ ಹೆಸರು ಭೀಮ್ಯಾ ಅಲ್ಲ" ಎಂದು ಅವರಿವರನ್ನುಂದೆ ಹೇಳಿಕೊಳ್ಳುತ್ತ ಭೀಮಪ್ಪ ಊರಿಗೆ ಬಂದ. ತಾನು ಮರುದಿನ ಬರುವುದಾಗಿ ಹೇಳಿ ಕಾಮಣ್ಣಾ ವಕೀಲನ ಹತ್ತಿರವೇ ಉಳಿದುಕೊಂಡ.

"ಭೀಮ್ಯಾಗೆ ಭಾರೀ ಗಂಟು ಸಿಕ್ಕಿದೆಯೇನೋ ?" ಟೊಪಿಗಿ ವಕೀಲ ಪ್ರಶ್ನಿಸಿದ.

"ಮೂರು ಸಾವಿರ ಸಿಕ್ಕೈತಿ ವಕೀಲರs."

"ಬಹಳೇ ಒಳ್ಳೆಯದೇ ಆಯಿತಲ್ಲ ? ಅಪೀಲಿನ ಖಟ್ಲೆಯೊಳಗೆ ಒಂದು ಸಾವಿರವಾದರೂ ಕೊಡಿಸಪ್ಪಾ. ಈ ಸೋಡಚೀಟಿಯದೊಂದು ಖಟ್ಲೆ ಆಯಿತೆಂದರೆ ಇನ್ನೊಂದು ಸಾವಿರವಾದರೂ ಸಿಗಬಹುದು. ಅಂ? ಏನನ್ನುತ್ತೀ ?"

"ಹಾಂಗೆಲ್ಲಾ ಯಾಕ ಕೊಟ್ಟಾನು ವಕೀಲರs ?"

"ಅವನ ಮನಃಸ್ಥಿತಿಯನ್ನು ನಾನು ಚನ್ನಾಗಿ ಅರ್ಥ ಮಾಡಿಕೊಂಡಿದೇನೆ. ಮನುಷ್ಯ ಹಟಕ್ಕೆ ಬಿದ್ದಿದಾನೆ. ಕೈಯಲ್ಲಿರುವ ಕೊನೆಯ ಕಾಸು ಖರ್ಚಾಗಿ ಹೋಗುವ ತನಕ ಆತ ಹಟ ಬಿಡುವದಿಲ್ಲ. ಇವನ ಕೈತಪ್ಪಿದ ಹೊಲ, ಹೆಣ್ಣು ಎರಡನ್ನೂ ಆ ಗಿರಿಯನೇ ಹಿಡಿದದ್ದೂ ಇನ್ನೂ ಹಟಕ್ಕೆ ಕಾರಣವಾಗಿದೆ. ತಾನಾದರೂ ಹಾಳಾಗಬೇಕು, ಅನನಾದರೂ ಹಾಳಾಗಬೇಕು ಎಂಬ ಮನಃಸ್ಥಿತಿಯಲ್ಲಿ ಅವನಿದ್ದಾನೆ. ಸರಿ. ಯಾರು ಹಾಳಾದರೇನು ನಮಗೆ ? ನನಗೆ ಹಣ ಸಿಕ್ಕರಾಯಿತು. ಏನಗೆ ಕಮಿಶನ್ ಸಿಕ್ಕರಾಯಿತು. ಯಾಕೋ? ಏನನ್ನುತ್ತೀ ?"

ಕಾಮಣ್ಣಾ ಬಲು ಧೂರ್ತ ವ್ಯಕ್ತಿ. ಆತ ಬಾಯಿ ಬಿಚ್ಚಿ ತನ್ನ ಹೃದ್ಗತವನ್ನು ವ್ಯಕ್ತಗೊಳಿಸಲಿಲ್ಲ.

ಟೊಪಿಗಿ ವಕೀಲ ವಿಕಟವಾಗಿ ನಗುತ್ತ ಹೇಳಿದ:

"ಬಹಳ ದಿನಗಳಿಂದ ಕ್ರಿಮಿನಲ್ ಖಟ್ಲೆಗಳೇ ಇಲ್ಲ ನೋಡೋ ಕಾಮಣ್ಣಾ. ನಾವು ವಕೀಲರು ಸಂಪಾದಿಸುವದೆಂದರೆ ಕ್ರಿಮಿನಲ್‌ಗಳಲ್ಲೇ.

ಸಿವಿಲ್ ಖಟ್ಲೆಗಳನ್ನು ಸುಡು. ಇಪ್ಪತ್ತೋ ಮೂವತ್ತೋ ರೂಪಾಯಿ ಯಾತ ಕ್ಕಾದೀತೋ ನಮಗೆ ?"

" ಹೌದ್ರೀ. ನಿಮ್ಮ ಖರ್ಚು ಬಾಳ. "

" ಖರ್ಚು ಅಂದರೆ ಒಂದೇ ಎರಡೇ ಕಾಮಣ್ಣಾ ? ಮನೆಯ ಖರ್ಚಿಗೇ ನಾನೂರು ರೂಪಾಯಿ ಬೇಕು ಪ್ರತಿ ತಿಂಗಳೂ. ನನ್ನ ಹೊರಗಿನ ಖರ್ಚು ಬೇರೆ. ಆ ಸಂಘ ಈ ಸಂಸ್ಥೆಗಳಿಗೆ ವರ್ಗಣಿ ಬೇರೆ. ಕ್ಲಬ್ಬಿನ ಖರ್ಚು ಬೇರೆ. ಛೆ. ಛೆ. ಖರ್ಚು........ಭಯಂಕರ ಖರ್ಚು. ಎಷ್ಟು ಕೇಸು ಸಿಕ್ಕರೂ ಸಾಲ ದಪ್ಪಾ ಕಾಮಣ್ಣಾ. ನೀನಾದರೂ ನಾಲ್ಕೈದು ಕ್ರಿಮಿನಲ್ ಖಟ್ಲೆ ತಂದು ಕೊಡಬಾರದೇ ಮಹಾರಾಯ ? ಬಹಳ ಉಪಕಾರವಾದೀತು...."

" ಹಂಗ ಯಾವಾಗಲೂ ಕ್ರಿಮಿನಲ್ ಬಾ ಅಂದರ ಎಲ್ಲಿಂದ ಬರಬೇಕು ವಕೀಲರs ? "

" ಹ....ಹ.... ಬಾ ಅಂದರೆ ಬರುವದಿಲ್ಲ ಅಂದೆಯಾ ? ಯಾಕೆ ಬರುವ ದಿಲ್ಲ ಕಾಮಣ್ಣಾ, ಎಲ್ಲಾ ಬರುತ್ತವೆ. ಎಲ್ಲಾ ನಮ್ಮ ಕೈಯೊಳಗಿವೆ. ನಿನ್ನ ಕೈಯೊಳಗಿವೆ. ಈಗ ನೋಡು. ನೀನು ಮನಸು ಮಾಡಿದರೆ ಒಂದು ವಾರ ದೊಳಗಾಗಿ ನನಗೊಂದು ದೊಡ್ಡ ಕ್ರಿಮಿನಲ್ ಕೇಸು ಸಿಕ್ಕೀತು. "

" ಹಾ ? "

" ಹೌದು. ಅದು ತೀರಾ ಸುಲಭ. ಭೀಮಣ್ಣನ ಹೊಲವನ್ನು ಈ ಗಿರಿಯ ಹಿಡಿದಿರುವನಲ್ಲಾ–ಅದರಲ್ಲಿ ಬೆಳೆ ಬಂದಿದೆಯೋ ? "

" ಬಂದೈತಿ. "

" ಏನು ಬೆಳೆದಿದ್ದಾನೆ ? "

" ನವಣಿ, ಮೆಣಸಿನಕಾಯಿ, ಕಾಯಿಪಲ್ಯ.... "

" ನವಣೆ ತೆನೆ ಬಿಟ್ಟಿದೆಯೋ ? "

" ಇನ್ನೊಂದು ತಿಂಗಳೊಪ್ಪತ್ತಿನಲ್ಲಿ ರಾಶಿಯಾಗುತೈತಿ. "

" ಹೀಗೇನು ? ಸರಿ. ಸರಿ. ಹಾಗಾದರೆ ಒಂದು ಪ್ಲ್ಯಾನ್ ಹೇಳಿ ಕೊಡುತೇನೆ. ಆ ಪ್ರಕಾರ ಕೆಲಸವಾಗುವಂತೆ ಮಾಡುತ್ತೀಯಾ ? " ಎಂದು ವಕೀಲ ತನ್ನ ' ಯೋಜನೆ ' ಯ ಅಂಶಗಳನ್ನು ವಿವರಿಸತೊಡಗಿದ.

# ಹದಿನಾಲ್ಕು

ಆ ದಿನ ಸಿದ್ದಪ್ಪನಿಗೆ ಊಟವೇ ರುಚಿಸಲಿಲ್ಲ. ಬಾಲಿ, ಬಸವ್ವ ಇಬ್ಬರೂ ಒತ್ತಾಯ ಮಾಡಿ ಆತ ಊಟ ಮುಗಿಸುವಂತೆ ಮಾಡಿದರು.

"ಇಷ್ಟ್ಯಾಕ ಚಿಂತೀ ಮಾಡುತೀಯೇಳ. ಹುಟ್ಟಿಸಿದ ದೇವ್ರು ಹುಲ್ಲು ಮೇಯಿಸೂದಿಲ್ಲ. ಏನಾದ್ರೂ ಮಾಡಾಕ ಬಂದೀತು," ಎಂದು ಬಸವ್ವ ಅವನಿಗೆ ಧೈರ್ಯದ ಮಾತು ಹೇಳುತಿದ್ದಳು.

"ಏನೂ ಕೆಲಸ ಸಿಗದಿದ್ದರ ದಲಾಲಿ ಪ್ಯಾಟಿಯೊಳಗ ಕೂಲಿ ಆದ್ರೂ ಮಾಡಾಕ ಬಂದೀತಲ್ಲ? ಯಾಕ ಅಂಜುತೀ ಕಾಕಾ?" ಎಂದು ಬಾಲಿ ಹೇಳುತ್ತಿದ್ದಳು.

"ಏನೋ ಹೆಂಗೋ ನಡದಿತ್ತು ಬಾಳೇವು ಇಲ್ಲಿಯ ತನಕ. ಕಾರಖಾನೆ ಬಂದ್ ಆತು...." ಎಂದು ಕ್ಷೀಣ ಸ್ವರದಲ್ಲಿ ನುಡಿದ ಸಿದ್ದಪ್ಪ.

ಹೌದು. ಆತ ಕೆಲಸಕ್ಕಿದ್ದ ಅವಲಕ್ಕಿ ಕಾರಖಾನೆ ಅಂದಿನಿಂದ ಮುಚ್ಚಲ್ಪಟ್ಟಿತ್ತು. ಅದೊಂದೇ ಮಾತ್ರವಲ್ಲ, ನಗರದಲ್ಲಿನ ಅವಲಕ್ಕಿ ಕಾರಖಾನೆಗಳೆಲ್ಲವೂ ಮುಚ್ಚಲ್ಪಟ್ಟಿದ್ದುವು. ಬತ್ತದ ಕೊರತೆಯಾದುದರಿಂದ ಜಿಲ್ಲಾಧಿಕಾರಿಗಳು ಆಜ್ಞೆ ಹೊರಡಿಸಿ ಅವಲಕ್ಕಿ ಚುರಮುರಿಗಳ ತಯಾರಿಕೆಯನ್ನು ನಿರ್ಬಂಧಿಸಿದ್ದರು. ಆ ದಿನ ಮಧ್ಯಾಹ್ನ ಪೋಲೀಸರು ಕಾರಖಾನೆಗಳ ಮೇಲೆ ದಾಳಿ ಮಾಡಿ ಬತ್ತದ ಚೀಲಗಳನ್ನು ವಶಪಡಿಸಿಕೊಂಡಿದ್ದರು. ಸಿದ್ದಪ್ಪ, ಬಾಲಿ ಹಾಗೂ ಅವರಂಥ ಎಷ್ಟೋ ಜನ ದುಡಿಮೆಗಾರರು ಅಂದಿನಿಂದ ನಿರುದ್ಯೋಗಿಗಳಾಗಬೇಕಾದ ಪ್ರಸಂಗ ಬಂದಿತ್ತು. ದಿನಗೂಲಿಯಿಂದ ದೊರೆಯುವ ದುಡ್ಡಿನಲ್ಲೇ ಹೇಗೋ ಉಪಜೀವನ ಸಾಗಿಸುತ್ತಿದ್ದ ಜನ ಅದು. ಕೂಲಿಗೂ ಕಲ್ಲು ಬಿತ್ತು. ಸರಿ. ನಾಳೆಯ ಗತಿಯೇನು? ಈಗಿನ ಕಾಲದಲ್ಲಿ ಬೇರೆ ಕಡೆ ಬೇರೆ ಕೆಲಸ ಸಿಕ್ಕುವುದೂ ಕಷ್ಟವೇ.

"ದಲಾಲಿ ಪ್ಯಾಟಿಯೊಳಗಾದರೂ ಎಲ್ಲಾರಿಗೂ ಕೆಲಸ ಎಲ್ಲಿಂದಾ ಬಂದೀತು ಬಾಲೀ? ನಾಳೆ ಅವಲಕ್ಕಿಯವರೆಲ್ಲಾ ಅಲ್ಲಿಗೇ ನುಗ್ಗಿದೆವಂದರ ವ್ಯಾಪಾರಸ್ಥರು ಕೂಲಿಯ ದರ ಇಳಿಸಿಬಿಡುತಾರು. ಸಂಜೀತನಕ ದುಡಿದರೂ

ಎಂಟಾಣೆ ಸುದ್ಧಾ ಸಿಗಲಿಕ್ಕಿಲ್ಲ...." ಎಂದ ಸಿದ್ದಪ್ಪ.

ಆತನಾಡುತ್ತಿದ್ದುದು ನಿಜವೆಂಬುದನ್ನು ಬಾಲಿಯೂ ಬಲ್ಲಳು. ಸಿದ್ದಪ್ಪನ ಸಂಸಾರ ಎಂಥ ಕಷ್ಟಕ್ಕೆ ಸಿಲುಕಿಕೊಳ್ಳಲಿದೆಯೊ ಯಾರು ಬಲ್ಲರು. ಹೆಂಡತಿಗೆ ಕಣ್ಣು ಕಾಣಿಸದು. ಮಕ್ಕಳೆರಡೂ ಇನ್ನೂ ಚಿಕ್ಕವು. ಸಿದ್ದಪ್ಪನಿಗೆ ಎಲ್ಲೂ ಕೂಲಿ ದೊರೆಯದಿದ್ದರೆ ಅವರೆಲ್ಲರ ಗತಿಯೇನು? ಉಪವಾಸ ಬಿದ್ದು ಸಾಯುವ ಪ್ರಸಂಗವೇ ಸರಿ. ಸಾವು....! ಬಾಲಿಯ ಎದೆ ನಡುಗಿತು. ನಾಳೆಯಿಂದ ತಾನೂ ನಿರುದ್ಯೋಗಿ. ಸಿದ್ದಪ್ಪನಾದರೊ ಗಂಡುಸು. ಹಮಾಲಿ ಮಾಡಿಯಾದರೂ ಅಲ್ಪ ಸ್ವಲ್ಪ ಸಂಪಾದಿಸಿಯಾನು. ತಾನು ಹೆಂಗುಸು. ಹಮಾಲಿ ಮಾಡುವಂತಿಲ್ಲ. ಬೇರೆ ಕಾರಖಾನೆಗಳೋ ಗಿರಣಿಗಳೋ ಇದ್ದಿದ್ದರೆ ತನಗೂ ಒಂದು ಕೆಲಸ ಸಿಗಬಹುದಿತ್ತು. ಈ ಹಾಳು ನಗರದಲ್ಲಿ ಅಂಥವು ಯಾವುವೂ ಇಲ್ಲ. ಹೆಂಗುಸರು ದುಡಿದು ತಿನ್ನಲು ಯಾವ ಅವಕಾಶವೂ ಇಲ್ಲ. ಹಳ್ಳಿಯಲ್ಲಿ ಹಾಗೆ; ನಗರದಲ್ಲಿ ಹೀಗೆ. ಹೆಣ್ಣಾದವಳಿಗೆ ಎಂಥ ದುರ್ಗತಿ ಇದು. ಜೀವರಿಳಿಸಿ ದುಡಿದೇವು ಎಂದರೆ ಉದ್ಯೋಗ ದೊರೆಯುವಂತಿಲ್ಲ. ತಾವು ಜೀವರಿಳಿಸಬೇಕಾದುದು ದುಡ್ಡಿದ್ದ ದುಷ್ಟರ ತೋಳಸೆರೆಯಲ್ಲಿ ಮಾತ್ರವೆ ಏನೊ. ಸೂಳೆಗಾರಿಕೆಯೊಂದನ್ನು ಬಿಟ್ಟರೆ ಬೇರೆ ಉದ್ಯೋಗವೇ ಇಲ್ಲವಲ್ಲ ಹೆಣ್ಣಿಗೆ! ಥೂ....ಥೂ....

"ಏನು ಆದದ್ದಾಗಲಿ. ನಾ ಸೂಳೆಯಂತೂ ಆಗುವದಿಲ್ಲ," ಎಂದು ಬಾಲಿ ಮನಸ್ಸಿನಲ್ಲೇ ಮತ್ತೊಮ್ಮೆ ಗಟ್ಟಿ ಮಾಡಿಕೊಂಡಳು.

ಅವರು ಮಾತನಾಡುತ್ತ ಕುಳಿತಿರುವಾಗ ಮುರಿಗೆವ್ವ ಬಂದಳು. ಬುಟ್ಟಿಯನ್ನಿಳಿಸಿ ಮೂಲೆಯಲ್ಲಿಟ್ಟು, ಸೆರಗಿನಿಂದ ಗಾಳಿ ಹಾಕಿಕೊಳ್ಳುತ್ತ ಕೇಳಿದಳು:

"ಯಾಕೋ ಸಿದ್ದಣ್ಣಾ, ಇನ್ನs ಮಲಗಿಲ್ಲ ಇವತ್ತು? ಏನ ನಡದೈತಿ?"

ನಡೆದುದೆಲ್ಲವನ್ನೂ ಬಾಲಿ ವಿವರಿಸಿದ ತರುವಾಯ ಮುರಿಗೆವ್ವ ತನಗೆ ಸಹಜವಾದ ಉಲ್ಲಸದ ಧ್ವನಿಯಲ್ಲಿ ನುಡಿದಳು:

"ಇಷ್ಟಕ್ಕs ಹೀಂಗ ಚಿಂತೀ ಮಾಡುತಾ ಕುಂತೀರೇನ ನೀವೆಲ್ಲಾರೂ? ನಿಮ್ಮನ್ನ ನೋಡಿದರ ನಗಿ ಬರುತೈತಿ ನನಗ. ಅವಲಕ್ಕೀ ಕೆಲಸ ಬಿಟ್ಟರ ಬ್ಯಾರೆ ಕೆಲಸನs ಇಲ್ಲೇನ ಪರಪಂಚದಾಗ?"

"ನಿನ್ನಾಂಗ ಎಲ್ಲಾರೂ ಮೆಣಸಿನಕಾಯಿ ವ್ಯಾಪಾರನs ಮಾಡಲಿಕ್ಕಾಗ

ತೈತೇನs ಮುರಿಗೆವ್ವ ? ”

“ ಯಾಕಾಗುವದಿಲ್ಲ ಅಂತೀನಿ. ಹಳ್ಳಿ ಹಳ್ಳಿ ತಿರುಗಿ ಕಾಯಿ ಕೊಂಡು ಶಹರಕ್ಕ ಹೊತ್ತುತಂದು ಮಾರುವ ಕೆಲಸಕ್ಕೇನೂ ಬಾಳ ಮಂದಿ ಬರುವದಿಲ್ಲ. ನೀವಿಬ್ಬರೂ ಚಲೋದಾಗಿ ಈ ವ್ಯಾಪಾರ ಮಾಡಿಕೊಂಡಿರಬಹುದು. ಯಾಕs ಬಾಲೀ ಏನಂತೀ ? ”

ಆ ಯೋಚನೆ, ಒಡನೆಯೆ ಬಾಲಿಯ ಮನವನ್ನು ಮುಟ್ಟಿತು.

“ ನಾಳಿನಿಂದ ಏನ ಮಾಡೂದಂತ ಲೆಕ್ಕ ಹಾಕುತಿದ್ದಿನಿ. ಒಂದು ಚಿಂತಿ ದೂರ ಆತು. ನಿನ್ನ ಸಂಗಾತ ನಾನೂ ವ್ಯಾಪಾರಕ್ಕ ಬರುತೀನಿ ಮುರಿಗೆವ್ವಾ” ಎಂದು ಬಾಲಿ ಹೇಳಿದಳು.

“ ನನಗೂ ಅಂದಿನಿಂದ ಅದs ವಿಚಾರ ಇತ್ತು ಬಾಲೀ. ಈ ಅವಲಕ್ಕಿ ತಿರುವುತಾ ಕೂಡ್ರುವ ಕೆಲಸ ನನಗೇನ ಸರಿಬಂದಿರಲಿಲ್ಲ. ಊರೂರು ತಿರುಗಿ ಕಾಯಿ ಹೊತ್ತು ತಂದು ಮಾರುವದರಾಗ ಇರುವ ಮಜಾ ಅವಲಕ್ಕಿ ಕಾರ ಖಾನೆದಾಗ ಎಲ್ಲಿಂದ ಬಂದೀತs ? ನಾಳಿನಿಂದ ನಾನೂ ನೀನೂ ಕಾಯಿ ತರುವ ಕೆಲಸಾ ಮಾಡೂಣು. ಸಿದ್ದಪ್ಪ ಇಲ್ಲೇ ಪ್ಯಾಟ್ಯಾಗ ಕುಂತು ಮಾರಲಿ. ನನಗೂ ಹಗುರಾಗುತೈತಿ. ಅವಗೂ ಆಗುತೈತಿ. ಯಾಕ ಸಿದ್ದಪ್ಪಾ ? “

“ ಈ ವ್ಯಾಪಾರ ಗೀಪಾರ ಎಲ್ಲಾ ನಿನಗs ಸರಿ ಮುರಿಗೆವ್ವಾ. ಅವ ಲಕ್ಕಿ ಕುಟ್ಟುವದರಾಗs ಕೂದಲಾ ಬೆಳ್ಳಗಾದುವು. ನನ್ನಂಥಾವಗ ವ್ಯಾಪಾರ ಹೆಂಗ ಸಾಧಿಸೀತು ?

“ ಅದರಾಗೇನೈತ್ಯೋ ಅಂಥಾದ್ದು ಮಳ್ಳs ? ಒಂದ್ಯಾಡ್ಡ ದಿನದಾಗ ಎಲ್ಲಾ ಗೊತ್ತಾಗುತೈತೇಳ, ” ಎಂದು ನಗುತ್ತ ನುಡಿದಳು ಮುರಿಗೆವ್ವ.

“ ನೀ ಅಂತೂ ಏನೂ ಚಿಂತಿ ಮಾಡಬ್ಯಾಡ ಬಾಲೀ. ನನಗ ಹೆಣ್ಣು ಮಕ್ಕಳಾಗಲಿಲ್ಲ. ನೀನs ನನ್ನ ಮಗಳು ಅಂತ ತಿಳಕೊಂಡೀನಿ. ನಿನಗ ಮನಸ್ಸಿದ್ದರ ಈಗs ಉಡಿಕಿ ಮಾಡೂಣು ಗಿರಿಯನ ಸಂಗಾತ. ಅವನೂ ತಯಾರಾಗಿದಾನ. ಏನಂತೀ ? ”

“ ಅವ ಬಂದಾರೆ ಬರಲಿ. ಆ ಮ್ಯಾಲ ನೋಡೂಣು, ” ಎಂದಳು ಬಾಲಿ.

ಮರುದಿನದಿಂದ, ಸಿದ್ದಪ್ಪ ಬಾಲಿ ಇಬ್ಬರೂ ಮೆಣಸಿನಕಾಯಿಯ ವ್ಯಾಪಾರಕ್ಕಿಳಿದರು. ಮುರಿಗೆಪ್ಪನೊಂದಿಗೆ ಬಾಲಿಯೂ ಹಳ್ಳಿಗೆ ಹೋಗಿ ಬರತೊಡಗಿದಳು. ಸಿದ್ದಪ್ಪ ಪೇಟೆಯಲ್ಲಿ ಕುಳಿತು ವ್ಯಾಪಾರದ ಗುಟ್ಟುಗಳನ್ನು ತಿಳಿದುಕೊಳ್ಳಲು ಯತ್ನಿಸತೊಡಗಿದ.

## ಹದಿನೈದು

ಸಾಯಂಕಾಲದ ಸೂರ್ಯನ ಬಂಗಾರ ಬಣ್ಣದ ಕಿರಣಗಳು ಮರಡಿಯ ಕೆಳಗಿನ ಹೊಲದ ಮೇಲೆ ಚಿನ್ನಾಟವಾಡತೊಡಗಿದ್ದುವು. ಆಕಾಶದಲ್ಲಿ ಹೆಚ್ಚು ಮೋಡಗಳಿರಲಿಲ್ಲ. ಅಲ್ಲಲ್ಲಿ ಒಂದೆರಡು ಬೂದಿಯ ಬಣ್ಣದ ಮೋಡದ ಮರಿಗಳು ಸೋಮಾರಿಗಳ ಹಾಗೆ ತೇಲುತ್ತಿದ್ದುವು. ವಾಯುವ್ಯದಲ್ಲಿ ಪುಟ್ಟ ಮೋಡವೊಂದು ಮಾನವಾಕೃತಿ ತಳೆದು ನಿಂತಿತ್ತು. ಯಾರೋ ನಿಟ್ಟುಸಿರು ಬಿಟ್ಟ ಹಾಗೆ ಗಾಳಿ ಬೀಡುತ್ತಿತ್ತು. ಸ್ತಬ್ಧವಾಗಿ ಚಿತ್ರಸ್ಥವಾಗಿ ನಿಂತ ಗಿಡಗಳು. ಇದೇನು ಸೈಜವಾದ ಸೃಷ್ಟಿಯೋ, ಕಲಾವಿದನ ಕೃತ್ರಿಮ ಸೃಷ್ಟಿಯೊ ಎಂದು ಭ್ರಾಂತಿಯಾಗುವಂತಿತ್ತು.

ಹೊಲದ ನಡುವಿನ ಜಾಲಿಯ ಮರದ ಕೆಳಗೆ ಕಟ್ಟಿದ್ದ ಗುಡಿಸಲಿನ ಬಳಿ ಕಣವನ್ನು ಸಿದ್ಧಗೊಳಿಸಿ ನವಣೆಯನ್ನು ಒಕ್ಕಲಾಗಿದ್ದಿತು. ತೂರಿ, ಹಸನುಗೊಳಿಸಿದ ನವಣೆಯು ಚಿನ್ನದ ಮಣಿಗಳ ರಾಶಿಯಂತೆ ಕಂಗೊಳಿಸುತ್ತಿತ್ತು. ಕಣದ ಅಂಚಿನ ಮೇಲೆ ಹಾಸಿದ್ದ ಕಂಬಳಿಯ ಮೇಲೆ ಧರ್ಮಣ್ಣಾ ಸಿದಗೌಡ ಇಬ್ಬರೂ ಕುಳಿತುಕೊಂಡು ಬೆಳೆಯ ವಿಚಾರವಾಗಿಯೆ ಮಾತನಾಡುತ್ತಿದ್ದರು. ಕಣದಲ್ಲಿದ್ದ ನವಣೆಯನ್ನು ಗುಡಿಸಲಿನೊಳಗಡೆ ಸಾಗಿಸುವ ಕಾರ್ಯದಲ್ಲಿ ನಿರತನಾಗಿದ್ದ ಗಿರಿಯ.

“ ಈ ವರ್ಷ ಮಳೆ ಲಗೂ ಬಂದಿದ್ದರ ಇದರ ಎರಡರಷ್ಟು ಕಾಳು ಬರುತಿತ್ತು, ” ಎಂದ ಸಿದಗೌಡ.

"ಇಷ್ಟಾದರೂ ಬಂತಲ್ಲಾ? ಇದೇನ ಕಡಿಮಿಯೇನ? ಹೊಲದ ಮಾಲಕ ನಾನಾದರೂ ಇಷ್ಟ ದಿವಸ ಒಂದು ಕಡ್ಡಿ ಸುದ್ಧಾ ಸಿಕ್ಕಿರಲಿಲ್ಲ ನನಗ," ಎಂದು ಹೇಳುತ್ತ ಧರ್ಮಣ್ಣ ತೃಪ್ತಿಯ ನಗೆ ಬೀರಿದ.

"ಕಾಳನ್ನ ಈಗಿಂದೀಗs ಮನಿಗೊಯ್ಯೂದು ಚಲೋವಲ್ಲೇನ ಗೌಡಾ?"

"ಇಷ್ಟ್ಯಾಕ ಅವಸರ ಮಾಡುತೀ ಧರ್ಮಣ್ಣಾ? ನಾಳಿ ಒಯ್ಸು ರಾತು-ಚೀಲದಾಗ ತುಂಬಿಕೊಂಡು."

"ಸೂಳೀಮಕ್ಕಳು ಆ ಕಾವ್ಯಾನ ಗುಂಪಿನವರು ಮೊದಲs ಉರೀತಿ ದಾರ. ಅದಕ್ಕ...."

"ಅವರೇನ ಮಾಡತಾರ ಬಿಡು ಧರ್ಮಣ್ಣಾ. ನಿನಗ ಇಲ್ಲದ ಚಿಂತೆ ಯೆಲ್ಲಾ ಕಾಡಿಸುತಾವ. ಮುದುಕ ಬ್ಯಾರೆ ಇಲ್ಲೇ ಇರುತಾನಲ್ಲಾ ಕಾವಲು ಮಾಡೂದಕ್ಕ?"

"ಹೌದೌದು. ಏನ ಅಂಜಿಕಿಯಿಲ್ಲ," ಎಂದು ಧರ್ಮಣ್ಣಾ ನುಡಿದನಾ ದರೂ ಆವನ ಅಂತರಾಳದಲ್ಲಿ ಯಾವುದೋ ಆಶಂಕೆ ತುಡಿಯುತ್ತಲೇ ಇತ್ತು.

"ಗಿರಿಯಾ...." ಎಂದು ಯಾರೋ ಕೂಗಿದುದು ಕೇಳಿಸಲು ಎಲ್ಲರೂ ಕಾಲುದಾರಿಯ ಕಡೆ ತಿರುಗಿದರು. ಕೊಂಚ ದೂರದಲ್ಲಿ ಸೊಂಟದ ಮೇಲೆ ಎಡಗೈಯಿಟ್ಟುಕೊಂಡು ನಿಂತಿದ್ದ ಬಾಲಿ ಕಾಣಿಸಿದಳು.

"ಹೆ ಹೆ ಹೆ! ಬಾರಾಕs ಬಾಲೀ, ಅಲ್ಲ್ಯಾಕ ನಿಂತಿ?" ಎಂದು ನಗುತ್ತ ನುಡಿದ ಧರ್ಮಣ್ಣ.

"ನಾವೇನ ತಿಂತೇವೇನ ನಿನ್ನ? ಬಾರಲಾ," ಎಂದ ಸಿದಗೌಡ.

ಬಾಲಿ ಹುಸಿ ಮುನಿಸನ್ನು ನಟಿಸುತ್ತ ಸೊಂಟದ ಮೇಲಿನ ಎಡಗೈ ಯನ್ನು ತೆಗೆದು ಬೀಸಿ, ಬಲಗೈಯನ್ನಿಟ್ಟುಕೊಂಡು ಕೊಂಚ ಬಳುಕಿ ನಿಂತು ಒಯ್ಯಾರದಿಂದ ಮಾತನಾಡಿದಳು:

"ತಿನ್ನಾಕ ನಾಯೇನ ಹುಲೀನೋ ಕರಡೀನೋ?"

"ಹೆ....ಹೆ....ಹೆ....ಹೆ....ಹೆ....ಹೆ...." ಎಂದ ಧರ್ಮಣ್ಣಾ.

ಸಿದಗೌಡನೂ ನಗತೊಡಗಿದ.

ಬುಟ್ಟಿಯಲ್ಲಿ ನವಣೆಯನ್ನು ತುಂಬುತ್ತಲಿದ್ದ ಗಿರಿಯನೂ ತುಟಿಗಳಲ್ಲಿಯೆ ನಗುತ್ತ— "ಅಲ್ಲಿ ನಿಂತುಕೊಂಡ ಬಡಿವಾರ ಮಾಡೂದು ಸಾಕು. ಬಾರಿತ್ತ.

ಲಗೂ ಲಗೂ ಸವಣೀ ಸಾಗಿಸೂಣು ಗುಡಿಸಲದಾಗ," ಎಂದು ಹೇಳಿದ.

"ಹೂಂ. ನಿನ್ನ ಜೀತದಾಳು ನಾ! ನೀ ಹೇಳದಂಗ ಮಾಡಬೇಕು," ಎಂದು ಅಣಕದ ಧ್ವನಿಯಲ್ಲಿ ನುಡಿದು ಬಾಲಿ ನಗುನಗುತ್ತ ಅವನ ಬಳಿ ಬಂದಳು. ಸೆರಗನ್ನೆಳೆದುಕೊಂಡು ಸೊಂಟಕ್ಕೆ ಬಿಗಿದಳು. ಗಿರಿಯನೆತ್ತಿ ಕೊಟ್ಟ ಬುಟ್ಟಿಯನ್ನು ಎರಡೂ ಕೈಗಳಲ್ಲಿ ಹಿಡಿದುಕೊಂಡು, ಕೋಪದಿಂದ ಹೆಜ್ಜೆಹಾಕುವವರಂತೆ ಗುಡಿಸಲಿನೊಳಕ್ಕೆ ನಡೆದು ಹೋಗಿ ಸಾಕಷ್ಟು ಸದ್ದಾಗುವ ಹಾಗೆ ಕಾಳನ್ನು ಸುರುವಿದಳು.

ಒಳಗಡೆ ಕುಳಿತುಕೊಂಡು ಕಾಳನ್ನು ರಾಶಿಗೂಡಿಸುತ್ತಿದ್ದ ಅಜ್ಜನೂ ನಗುತ್ತ ನುಡಿದ:

"ಮೆಲ್ಲಕ....ಮೆಲ್ಲಕ ಬಾಲೀ. ಕಾಳು ಏನ ಮಾಡ್ಯಾವು ನಿನಗ. ಅದರ ಮ್ಯಾಲ್ಯಾಕ ಸಿಟ್ಟು?"

"ಅದರ ಮ್ಯಾಲ್ಯಾರು ಸಿಟ್ಟು ಮಾಡಿದ್ರು? ಸುಮ್ಮನ ಕುಂಡ್ರೋ ಮುಳಾ!" ಎಂದಳು ಬಾಲಿ. ಅಜ್ಜ ಗಟ್ಟಿಯಾಗಿ ನಗತೊಡಗಿದ.

ಬರಿಯ ಬುಟ್ಟಿಯೊಂದಿಗೆ ಬಾಲಿ ಮತ್ತೆ ಕಣಕ್ಕೆ ಬರುತ್ತಲೂ ಸಿದಗೌಡ ಚೇಷ್ಟೆಯ ಸ್ವರದಲ್ಲಿ ಕೇಳಿದ:

"ಇಬ್ಬರೂ ಕೂಡಿ ನಮಗೊಂದ ಸುದ್ದೀನೂ ತಿಳಿಸದೆ ಉಡಿಕಿ ಮಾಡಿಕೊಂಡು ಬಂದಿರಿ. ನಮಗ ಹೋಳಿಗೇ ಹಾಕೂದು ಯಾವಾಗ?"

"ಹೌದೌದು. ಹೋಳಿಗೆ ಯಾವಾಗೇ ಬಾಲೀ?" ಎಂದು ಧರ್ಮಣ್ಣನೂ ದನಿಗೂಡಿಸಿ ದ

"ಕಡ್ಲೀ ಬೆಳಿ ಬಂದಾಗ!" ಎಂದು ಉತ್ತರವಿತ್ತು ಬಾಲಿ ಕಿಸಕ್ಕನೆ ನಕ್ಕಳು.

"ಒಳ್ಳೇ ಜೋಡಿ ಕೂಡಿತೇಳ ನಿಮ್ಮಿಬ್ಬರದೂ. ಏನಡ್ಡಿಯಿಲ್ಲ....ಏನಡ್ಡಿಯಿಲ್ಲ. ನಮ್ಮ ಗಿರಿಯ ಒಬ್ಬನs ದುಡದು ದುಡದು ಹಣ್ಣಾಗಿದ್ದ. ಅವನ ಜೀವಕ್ಕೂ ಸಮಾಧಾನ ಇರಾಕಿಲ್ಲ. ನೀ ಬಂದಿ, ಬಾಳ ಚಲೋ ಆತು...."

"ದುಡಿಯಾಕ ಒಂದು ಪುಕಟದ ಆಳು ಸಿಕ್ಕಿತು. ಇದs ಹೌದಲ್ಲೋ ನೀ ಹೇಳೂದು?" ಎಂದು ಬಾಲಿ ಕೇಳಿದಳು.

"ಪುಕಟ ಯಾಕs? ಊಟಕ್ಕ ಹಾಕುತಾನಲ್ಲ ಗಿರಿಯಾ ನಿನಗ?"

" ಊಟಕ್ಕೇನಂತೋ ಸಾವುಕಾರಾ ? ಮೆಣಸಿನಕಾಯಿ ವ್ಯಾಪಾರ ಮಾಡುತಾ ಇದ್ದರ ನಿನಗಿಂತ ದೊಡ್ಡ ಸಾವುಕಾರ್ತಿಯಾದೇನು ನಾ ! "

" ನಿನ್ನಂಥವರೆಲ್ಲಾ ಸಾವುಕಾರ್ತಿಯರಾದರ ನಮ್ಮಂಥವರೆಲ್ಲಿ ಹೋಗ ಬೇಕs ? "

" ಹೋಗಬೇಕು ಹಳ್ಳಾ ಹಿಡಿದ ! "

ಧರ್ಮಣ್ಣ ನಗುತ್ತ ಮೇಲಕ್ಕೆದ್ದ. " ಒಳ್ಳೇ ಪುರಮಾಸಿ ಹೆಣ್ಣs ಗಂಟು ಬಿತ್ತೋ ಗಿರಿಯಾ ನಿನಗ. ಇವಳನ್ನ ಹೆಂಗಾದರೂ ಮಣಿಸುತಿಯೊ ಏನೊ. "

" ಮಣಿಸುತಾನ ಅವನ ತಲಿ ! " ಎಂದಳು ಬಾಲಿ.

" ನಿನ್ನಂಥಾಕಿಯ ಮುಂದ ಮಣಿಸಾಕs ಬೇಕಲ್ಲಾ ? ಹೂಂ. ನಾವು ನಡೀತೀವಿ. ವ್ಯಾಳ್ಯೆ ಆತು. ಏಳೋ ಸಿದಗೌಡಾ. ರಾತ್ರಿ ಹುಷಾರಿ ಹಂ ಮುದುಕಾ, " ಎಂದು ಹೇಳಿ ಧರ್ಮಣ್ಣ ಊರ ಕಡೆ ಹೊರಟ.

ನವಣೆಯನ್ನೆಲ್ಲ ಗುಡಿಸಲಿಗೆ ಸಾಗಿಸುವ ವೇಳೆಗೆ ಕತ್ತಲೆ ಪಸರಿಸುತ್ತಿತ್ತು. ಬೆಳಗಿನಿಂದ ಒಂದು ಕ್ಷಣದ ಬಿಡುವೂ ಇಲ್ಲದೆ ದುಡಿದಿದ್ದ ಗಿರಿಯನಿಗೆ ತುಂಬ ಬೇಸರಿಕ್ಕಿಟ್ಟುಕೊಂಡಿದ್ದಿತು. ಇನ್ನೂ ಮುಗಿದಿರಲಿಲ್ಲ ಅವನ ದಿನದ ದುಡಿತ. ಇನ್ನೂ ಅವನು ಮನೆಗೆ ಹೋಗಬೇಕು, ಅಡುಗೆ ಮಾಡಬೇಕು, ಅಜ್ಜನಿಗೆ ಊಟ ತಂದು ಕೊಡಬೇಕು, ಮತ್ತೆ ಮನೆಗೆ ಹಿಂದಿರುಗಿ ಹೋಗಬೇಕು. ಇದೊಂದು ದಿನವಾದರೂ ಬಾಲಿ ಮನೆಯಲ್ಲಿದ್ದು ಅಡುಗೆ ಮಾಡಬಾರದೇ ?— ಎಂದು ಯೋಚಿಸುತ್ತ ಆತ ಹೇಳಿದ:

" ಇವೊತ್ತು ಶಹರಕ್ಕ ಹೋಗೂದು ಬಿಟ್ಟರ ನಡಿಯೂದಿಲ್ಲೇನs ಬಾಲೀ ? "

" ನನ್ನ ಬದಲು ನೀ ಹೋಗಬೇಕಂತ ಮಾಡೀಯೇನ ? "

" ನಾ ಯಾಕ ಹೋಗಲಿ ? ಸಂದs ಸಾಕಾಗೈತಿ ನನಗ. ಇಂದಾ ದರೂ ಮನ್ಯಾಗ ಇದ್ದು ಅಡಿಗೀ ಮಾಡಿ ಹಾಕಬಾರದs ಬಾಲೀ ? "

" ಅಡಿಗಿ ಒಂದಾದರ ಸಾಕು ಹೌದಲ್ಲೋ ? " ನಗುತ್ತ ಕೇಳಿದಳು ಬಾಲಿ.

" ಅಷ್ಟs ಸಾಕಾದರ ನಿನ್ನ ಉಡಿಕೀ ಮಾಡಿಕೊಂಡದ್ಯಾಕ ಗಿರಿಯ ? "

ಎಂದು ಅಜ್ಜನೂ ನಗುತ್ತ ನುಡಿದ.

"ಮಾಡಿಕೋ ಅಂತ ಯಾರಂದರು ? ನಾಯೇನ ಮೈಮ್ಯಾಲ ಬಿದ್ದು ಬಂದಿರಲಿಲ್ಲ."

"ಅವೊತ್ತು ಒಬ್ಬಾಕಿ ಬಂದಿದ್ದಳಲ್ಲಾ ಗಿರಿಯನ್ನ ಮಾಡಿಕೋತೀನಂತ !" ಎಂದ ಅಜ್ಜ.

"ಘೂ ಬಿಡೋ ಅಜ್ಜಾ," ಎಂದಳು ಬಾಲಿ.

"ಇವೊತ್ತಂತೂ ಹೋಗಬ್ಯಾಡ ಬಾಲೀ," ಎಂದ ಗಿರಿಯ.

"ನನ್ನ ಮಾತು ಎಲ್ಲಿ ಕೇಳೀ ನೀ ? ನಾ ಮನಿಗೆ ಬಂದಷ್ಟು ಸೋಡಿದ ರಂದರ ಅವರು ಏನ ಮಾಡುತಾರೊ."

"ಅವರ ಚಿಂತಿಯೇನೂ ಬ್ಯಾಡ ನಿನಗ. ಎಷ್ಟ ದಿನಾ ಅಂತ ಅವರಿ ಗಂಜಿಕೊಂಡಿರೂದು ? ಒಮ್ಮೆ ಏನಾಗೂದು ಆಗಿ ಹೋಗಲಿ. ಒಂದು ಕೈ ನೋಡಿಬಿಡೂಣು."

"ಒಂದು ಕೈ ನೋಡಿ ಬಿಡೂಣು," ಎಂದು ಬಾಲಿಗೂ ಅನ್ನಿಸುತ್ತಿತ್ತು. ಉಡಿಕೆಯಾದಂದಿನಿಂದ ಮನಸ್ಸಿನಲ್ಲೇ ಆ ವಿಚಾರವನ್ನು ಮೆಲುಕು ಹಾಕುತ್ತ ಬಂದಿದ್ದಳು. ಹಳ್ಳಿಯವರಾರಿಗೂ ಗೊತ್ತಾಗದಂತೆ, ನಗರದಲ್ಲಿ, ಸಿದ್ದಪ್ಪನ ಮನೆಯಲ್ಲಿ ಅವರ ಉಡಿಕೆಯ ಕಾರ್ಯವನ್ನು ಜರುಗಿಸಿದ್ದಳು ಮುರಿಗೆವ್ವ. ಭೀಮಪ್ಪನ ಕೈಯಲ್ಲೀಗ ಹಣವಿದೆ, ಕಾಮಣ್ಣನಂಥ ಪುಂಡರ ಬೆಂಬಲವೂ ಅವನಿಗಿದೆ, ಹಟಕ್ಕೊಳಗಾಗಿ ಆತ ಏನನ್ನಾದರೂ ಮಾಡಬಲ್ಲ, ಈಗಲೇ ಆ ಗೊಂದಲಕ್ಕೆ ಸಿಲುಕಿಕೊಳ್ಳುವುದು ಸರಿಯಲ್ಲ—ಎಂದು ಮುರಿಗೆವ್ವನ ವಿಚಾರ. ಪುಂಡರ ಭಯವೇನೂ ಬಾಲಿಗಿರಲಿಲ್ಲ. ಅವರನ್ನೊಮ್ಮೆ ಎದುರಿಸಬೇಕೆಂಬ ಹಟವೂ ಅವಳಲ್ಲಿ ಕೆರಳುತ್ತಿತ್ತು. ಆ ಹಟದಿಂದಾಗಿಯೆ ಅವಳು ಗಿರಿಯನ ಕಡೆ ಆಕರ್ಷಿತಳಾಗಿ, ದಿನಗಳುರುಳಿದಂತೆಲ್ಲಾ ಅವನ ಹತ್ತಿರ ಹತ್ತಿರ ಬಂದು ಕೊನೆಗೆ ಅವನ ಮಡದಿಯಾಗಿದ್ದಳು. ತನ್ನನ್ನು ಬಾಳಿಸದೆ ಮನೆಯಿಂದ ದೂಡಿದ ಜನರಿರುವ ಊರಲ್ಲೇ, ಅವರ ಮನೆಯ ಸಮೀಪದಲ್ಲೇ, ಇನ್ನೊಬ್ಬನ ಮಡದಿಯಾಗಿ ತಾನು ಬಾಳುವುದನ್ನು ಅವರು ನೋಡಬೇಕು, ನೋಡಿ ತಳಮಳಿಸಬೇಕು.... ಹೆಂಡತಿಗಿಂತ ತನ್ನ ಮೈಯ ಬೊಜ್ಜೇ ಹೆಚ್ಚೆಂದು ನಂಬಿದ್ದ ಆ ಬುದ್ಧಿಗೇಡಿ ಗಿಡ್ಡ, ತನ್ನನ್ನು ಕಸಕ್ಕಿಂತ ಕಡೆಯಾಗಿ ಕಾಣುತ್ತಿದ್ದ ಅವನ ತಾಯಿ....ಅವರೆ

ಲ್ಲರಿಗೂ ಚೆನ್ನಾಗಿ ಬುದ್ಧಿ ಕಲಿಸಬೇಕು....ಅವರ ಮಹಾ ಶತ್ರುವಾಗಿರುವ ಗಿರಿಯನನ್ನೇ ಬೇಕೆಂತಲೇ ಉಡಿಕೆಯಾಗಿ ಅವರ ಮೇಲೆ ಸೇಡು ತೀರಿಸಿಕೊಳ್ಳಬೇಕು....ಅವರೆಲ್ಲರೂ ನೋಡುತ್ತಿದ್ದ ಹಾಗೇ ತಾನು ಅವನ ಹಿಂದೆ ಹಿಂದೆ ಹಳ್ಳಿಯ ಓಣಿಯಲ್ಲಿ ಹೋಗುತ್ತಿರಬೇಕು....ತನ್ನ ಹೊಟ್ಟೆಯನ್ನುರಿಸಿದುದರ ಪ್ರತಿಫಲ ಆಗ ಸಿಕ್ಕುವುದು ಅವರಿಗೆ....

ಹಾಗೆ ಯೋಚಿಸಿ, ಗಿರಿಯನ ಕೈ ಹಿಡಿದಿದ್ದ ಬಾಲಿಗೆ ಪುಂಡರ ಭಯವೆಲ್ಲಿ ಬರಬೇಕು? ಉಡಿಕೆಯಾದ ಕೆಲ ದಿನಗಳಲ್ಲಿಯೆ ಗಿರಿಯನ ಮನೆಗೆ ಹೋಗಿ, ಅವನ ಹೆಂಡತಿಯಾಗಿ ನೆಲಸಬೇಕೆಂದು ಅವಳು ಎಣಿಸಿಕೊಂಡಿದ್ದಳಾದರೂ ಅದಕ್ಕೆ ಮುರಿಗೆವ್ವನ ಒಪ್ಪಿಗೆ ದೊರೆತಿರಲಿಲ್ಲ. "ಇನ್ನೊಂದು ಆರು ತಿಂಗಳು ಮೆಣಸಿನಕಾಯಿ ವ್ಯಾಪಾರ ಮಾಡುತಾ ಇರು ಬಾಲೀ. ಅಷ್ಟರಾಗ ಕೈಯಾಗ ರೊಕ್ಕ ಮಾಡಿಕೋ. ಈಗಿನ ಕಾಲದಾಗ ರೊಕ್ಕ ಇದ್ದರs ಶಕ್ತಿ ಇರೂದು. ರೊಕ್ಕ ಇದ್ದವರಿಗೇ ಎಲ್ಲಾರೂ ಅಂಜುತಾರ," ಎಂದು ಆಕೆ ಹೇಳಿದ್ದಳು. ಆ ಮಾತು ಸತ್ಯವೆಂಬುದು ಬಾಲಿಗೂ ಅನುಭವದಿಂದ ಮನದಟ್ಟಾಗಿತ್ತು. ಧರ್ಮಣ್ಣನ ಹತ್ತಿರ ಗಿರಿಯ ಸಾಲ ಬೇರೆ ಮಾಡಿ ಕುಳಿತಿದ್ದಾನೆ. ಹೊತ್ತಿಗೊದಲು ಅದನ್ನು ಹಿಂದಿರುಗಿಸುವುದೊಳ್ಳೆಯದೆಂದು ಬಾಲಿಗೆನ್ನಿಸಿತ್ತು. ಅದನ್ನಷ್ಟು ತೀರಿಸಿಬಿಟ್ಟರೆ ಮುಂದೆ ತಾವಿಬ್ಬರೂ ಸಾಧ್ಯವಿದ್ದಮಟ್ಟಿಗೂ ಹಾಯಾಗಿ ಕಾಲ ಕಳೆಯಬಹುದು, ಮುರಿಗೆವ್ವ ಹೇಳುವಂತೆ ಆರೇಳು ತಿಂಗಳುಗಳ ವರೆಗೆ ವ್ಯಾಪಾರ ಮಾಡುತ್ತಲೇ ಇರಬೇಕು, ಎಂದುಕೊಂಡು ಬಾಲಿ, ತನ್ನ ಹಟಕ್ಕೆ ತಾತ್ಪೂರ್ತಿಕವಾಗಿ ಲಗಾಮು ಹಾಕಿ, ಗಿರಿಯನ ಮನೆಗೆ ಮಡದಿಯಾಗಿ ಬರುವ ದಿನವನ್ನು ಮುಂದೆ ಹಾಕಿದ್ದಳು. ಕಾಯಿಪಲ್ಯ ಒಯ್ಯುವುದಿದ್ದಾಗ ಗಿರಿಯನೂ ಅವಳೊಡನೆ ನಗರಕ್ಕೆ ಹೋಗುತ್ತಿದ್ದ. ಆಗಾಗ ಬಾಲಿಯೂ ಮರಡಿಯ ಕೆಳಗಿನ ಹೊಲಕ್ಕೆ ಬಂದು, ಅಲ್ಲಿದ್ದ ಗುಡಿಸಲಿನಲ್ಲಿ ಗಿರಿಯನೊಡನೆ ಒಂದೆರಡು ಗಂಟೆಗಳನ್ನು ಕಳೆದು ಹೋಗುತ್ತಿದ್ದಳು. ಇದಾವುದರಿಂದಲೂ ತೃಪ್ತಿಯಿರಲಿಲ್ಲ ಗಿರಿಯನಿಗೆ. ವ್ಯಾಪಾರದ ಹುಚ್ಚನ್ನು ತಲೆಯಿಂದ ತೆಗೆದು ಹಾಕಿ, ಹಣಗಳಿಸುವ ಹವ್ಯಾಸವನ್ನು ತೊರೆದು ಅವಳು ತನ್ನ ಮನೆಗೆ ಬಂದು ಸಂಸಾರ ಸಾಗಿಸಬೇಕೆಂಬುದೇ ಅವನ ಬಯಕೆಯಾಗಿತ್ತು. ಈ ವಿಚಾರವಾಗಿ ಬಾಲಿಗೂ ಅವನಿಗೂ ಎಷ್ಟೋ ಸಲ ವಾದ ವಿವಾದ ನಡೆದು ಮಾತು ಮಿತಿಮೀರಿ ಕಲಹ

ವಾಗುವ ವರೆಗೂ ಬೆಳೆದಿತ್ತು. ಆದರೂ ಅದರಿಂದಾಗಿ ಅವರಲ್ಲಿ ವಿರಸವೇನೂ ಉಂಟಾಗಿರಲಿಲ್ಲ. ಬಾಲಿ ಒಂದೆರಡು ದಿನ ಅವನಿಗೆ ಮುಖವನ್ನೇ ತೋರಿಸದೆ ಇದ್ದುಬಿಡುತ್ತಿದ್ದಳು. ನಾಲ್ಕು ದಿನ ಕಳೆದ ಬಳಿಕ ಮತ್ತೆ ತಾನಾಗಿಯೆ ಹೊಲಕ್ಕೆ ಬಂದು ನಗುನಗುತ್ತ ಮಾತನಾಡಿ ಒಪ್ಪಂದ ಮಾಡಿಕೊಳ್ಳುತ್ತಿದ್ದಳು. ಒಂದೂವರೆ ತಿಂಗಳಿನ ವರೆಗೆ ಹಾಗೆಯೇ ನಡೆದು ಬಂದಿತ್ತು. ಗಿರಿಯನಿಗೆ ಬೇಸರು, ಸಹಿಸಲಾಗದಂಥ ಬೇಸರು. ಈ ದಿನವಂತೂ ಅವನ ಬೇಸರು ಪರಮಾವಧಿಯನ್ನು ಮುಟ್ಟಿತ್ತು.

ಅವನ ಒತ್ತಾಯಕ್ಕೋಸ್ಕರವಾಗಿ ಬಾಲಿ ಆ ಸಂಜೆ ಅವನೊಂದಿಗೆ ಮನೆಗೆ ಹೋದಳು. ಬಸವಾಣಿಯ ಚಹದಂಗಡಿಯೆದುರಿನಲ್ಲಿ ಅವರಿಬ್ಬರೂ ಹಾಯ್ದು ಹೊರಟಾಗ, ಅಲ್ಲಿ ಉಂಡಿ ತಿನ್ನುತ್ತ ಕುಳಿತಿದ್ದ ಗಿಡ್ಡ ಅವರನ್ನು ಕಂಡು, ಕಣ್ಣು ಗಳನ್ನರಳಿಸಿ, ರೆಪ್ಪೆ ಹೊಡೆಯದೆ, ಹಾಗೆಯೆ ಎರಡು ಮೂರು ಕ್ಷಣ ಅವಳನ್ನೇ ದಿಟ್ಟಿಸಿದ. ಆತ ಬಾಲಿಯನ್ನು ಕಂಡು ಎಷ್ಟೋ ತಿಂಗಳುಗಳು ಕಳೆದುಹೋಗಿ ದ್ದುವು. ಅವಳ ಬಗೆಗೆ ವಿಧವಿಧದ ವಾರ್ತೆಗಳನ್ನಾತ ಕೇಳಿದ್ದ. ಗಿರಿಯನೊ ಡನೆ ಅವಳಿಗೆ ಸಂಬಂಧ ಬೆಳೆದಿದೆಯೆಂಬ ವಿಚಾರವೂ ಅವನ ಕಿವಿಗೆ ಬಿದ್ದಿತ್ತು. ಹೆಚ್ಚು ಯೋಚಿಸುವುದು ಅವನ ಸ್ವಭಾವದಲ್ಲೇ ಬಂದಿರಲಿಲ್ಲವಾದುದರಿಂದ ಅಂಥ ಸುದ್ದಿಗಳನ್ನು ಕೇಳಿದಾಗಲೆಲ್ಲ ಸುಮ್ಮನೆ ತಲೆ ಕೊಡವಿ, "ಏನಾರೆ ಮಾಡಿಕೊಳ್ಳಲಿ ಬಿಡು. ಅವಳನ್ನು ಬಿಟ್ಟಿದ್ದಂತೂ ಆತಲ್ಲ? ಈಗವಳು ಏನ ಮಾಡಿದರ ನನಗೇನು?" ಎಂದುಕೊಂಡು ಆ ವಿಚಾರವನ್ನೆ ಮರೆತು ಬಿಡುತ್ತಿದ್ದ. ಆದರೆ, ಈಗ, ಊರಿನ ಬೀದಿಯಲ್ಲಿ, ಊರವರೆಲ್ಲರ ಕಣ್ಣೆದು ರಿಗೇ ಅವಳು ಗಿರಿಯನ ಬೆಂಬೆ ಹಿಂದೆ, ಅವನ ಹೆಂಡತಿಯಂತೆಯೊ ಸೂಳೆ ಯಂತೆಯೊ ಹೆಜ್ಜೆ ಹಾಕುತ್ತ ಹೊರಟುದನ್ನು ಕಂಡಾಗ ಮಾತ್ರ ಗಿಡ್ಡನ ಮೆದು ಳಿನಲ್ಲಿ ಚಿಕ್ಕ ಬಿರುಗಾಳಿಯೊಂದು ಬೀಸಿದಂತಾಯಿತು. ಗಿರಿಯನ ಮನೆಗೇ ಹೊರಟಿರಬೇಕು ಬಾಲಿ. ಈ ರಾತ್ರಿಯನ್ನು ಅವನೊಡನೆ ಅಲ್ಲಿಯೆ ಕಳೆಯ ಲೆಂದೇ ಹೊರಟಿರಬೇಕು. ಹಳ್ಳಿಯವರೆಲ್ಲರ ಎದುರಿನಲ್ಲೇ ಇಷ್ಟೊಂದು ಧೈರ್ಯ ದಿಂದ ಅವನ ಮನೆಗೆ ಹೊರಟಿರುವಳಲ್ಲ! ಇಷ್ಟು ದಿನ ಅವಳು ಎಲ್ಲೆಲ್ಲೋ ಏನೇನೋ ಮಾಡಿಕೊಂಡಿದ್ದಳು. ಅದಾವುದಕ್ಕೂ ತಾನು ಲಕ್ಷ್ಯ ಕೊಟ್ಟಿರ ಲಿಲ್ಲ. ಏನಾದರೂ ಹಾಳಾಗಿಕೊಳ್ಳಲಿ ಎಂಬ ತಾತ್ಸಾರದಿಂದ ಸುಮ್ಮನಿದ್ದು

ದಾಗಿತ್ತು. ಆದರೆ—ಇಂದು ತನ್ನ ಕಣ್ಣೆದುರಿನಲ್ಲಿಯೇ....ತನಗೆ, ಹಳ್ಳಿಯುವರಿಗೆ, ಎಲ್ಲರಿಗೂ ತಿಳಿಯುವಂತೆಯೇ ಅವಳು ಹೊರಟಿದ್ದಾಳೆ, ಗೆಣೆಯನ ಹಿಂದೆ ಹಿಂದೆ........ "ಎಲಾ ರಂಡಿ! ಏನ ಮಾಡೂದು ಇವಳನ್ನ!" ಎಂದು ತನ್ನಷ್ಟಕ್ಕೆ ತಾನೇ ಕೇಳಿಕೊಂಡ ಗಿಡ್ಡ. "ಏನ ಮಾಡೂದು? ಏನ ಮಾಡೂದು? ಏನು ಮಾಡಬೇಕೋ ತಿಳಿಯದು. ಈಗಲೇ ಎದ್ದು ಹೋಗಿ ಅವಳನ್ನು ಥಳಿಸುವುದೇ? ಅವಳೇನು ಸುಮ್ಮನೆ ಏಟು ತಿನ್ನುವ ಜಾತಿಯ ಹೆಣ್ಣಲ್ಲ. ಕಾಲುಗಳಲ್ಲಿನ ಚಪ್ಪಲಿಗಳಿಂದ ಬಿಗಿಯಲೂ ಹಿಂದಾಗುವವಳಲ್ಲ. ಅವಳ ಜೊತೆಗೆ ಗಿರಿಯ ಬೇರೆ ಇದ್ದಾನೆ. ಅವನ ಪಕ್ಷದ ಪೈಲವಾನರೂ ಇಲ್ಲೇ ಎಲ್ಲಾದರೂ ಇದ್ದಾರು. ತಮ್ಮ ಪಕ್ಷದ ಜನರು ಮಾತ್ರ ಸನಿಯದಲ್ಲಿಲ್ಲ. ಎಲ್ಲರೂ ಕಾಮಣ್ಣನ ಮನೆಯಲ್ಲಿ ಸೇರಿ ಏನೋ ಚರ್ಚೆಯಲ್ಲಿ ತೊಡಗಿದ್ದಾರೆ. ಇಂಥ ವೇಳೆಯಲ್ಲಿ ತಾನು ಬಾಲಿಯನ್ನು ತಡೆಯುವುದು ಸರಿಯಲ್ಲವೋ ಏನೊ.....

ಉಂಡಿಯನ್ನು ಕೈಯಲ್ಲಿ ಹಿಡಿದುಕೊಂಡು, ಆ ಎಂದು ಬಾಯಿ ತೆರೆದು ಯೋಚಿಸುತ್ತ ನಿಂತಿದ್ದ ಗಿಡ್ಡ. ಅಷ್ಟರಲ್ಲಿ ಗಿರಿಯ ಬಾಲಿ ಇಬ್ಬರೂ ಆ ಓಣಿಯನ್ನು ದಾಟಿ ಹೊರಟು ಹೋಗಿದ್ದರು.

"ಹಂಗ್ಯಾಕ ನಿಂತೀಯೋ ಗಿಡ್ಡಾ?" ಎಂದು ನಗುತ್ತ ಕೇಳಿದಳು ನಾಗಿ. "ನಿನ್ನ ಹೇಣತಿಯ ಮ್ಯಾಲ ಮತ್ತ ಮನಸ್ಸಾಗೈತೇನ?"

"ಗಿಡ್ಡಗ ಹೆಂಗಸರ ಮ್ಯಾಲ ಮನಸ್ಸು ಹೋಗೂದೂ ಗಣಪ್ಪಗ ಮದವಿ ಆಗೂದೂ ಒಂದಽ ಕಾಲಕ್ಕ," ಎಂದ ಬಸವಾಣಿ.

ಗಿಡ್ಡನಿಗೆ ಅಲ್ಲಿ ನಿಲ್ಲಲಾಗಲಿಲ್ಲ. ಏನೊ ಒಂದು ಬಗೆಯ ಜಡತೆ ಅವನ ಮೆದುಳನ್ನೆಲ್ಲ ಆಕ್ರಮಿಸಿತು. ಉಂಡಿಯನ್ನು ಬಾಯಿಗಿಟ್ಟುಕೊಳ್ಳುತ್ತ ಅಂಗಡಿಯನ್ನು ತ್ಯಜಿಸಿ ಕಾಮಣ್ಣನ ಮನೆಯ ಕಡೆ ಸಾಗಿದ.

ಆ ವೇಳೆಗೆ ಬಾಲಿಯೊಂದಿಗೆ ಗಿರಿಯು ಮನೆಗೆ ಬಂದು, ಬಾಗಿಲಿಗಿದ್ದ ಬೀಗ ತೆಗೆದು, ಕಡ್ಡಿ ಕೊರೆದು ಚಿಮಣಿ ದೀಪ ಹೊತ್ತಿಸಿ, ಕಣಿಕೆ ಕೊರೆಯತೊಡಗಿದ್ದ. ಬಾಲಿ ಒಲೆಗೆ ಉರಿಯಿಡತೊಡಗಿದ್ದಳು.

ಕಣಿಕೆ ಕೊರೆದು, ಎತ್ತುಗಳ ಮುಂದೆ ಹಾಕಿ ಗಿರಿಯ ಕೈಕಾಲು ಮುಖ ತೊಳೆದುಕೊಂಡು ಬಂದು ಬಾಲಿಯ ಎದುರಿಗೆ ಗೋಡೆಗೊರಗಿ ಕುಳಿತುಕೊಂಡ.

ಜ್ವಾಲೆಗಳ ಕೆಂಬೆಳಕಿನಲ್ಲಿ ತುಂಬ ಚೆಲುವಾಗಿ ಕಾಣುತ್ತಿದ್ದ ಬಾಲಿಯ ಮುಖ ವನ್ನು ಆನಂದದಿಂದಲೂ ಸಮಾಧಾನದಿಂದಲೂ ದೃಷ್ಟಿಸುತ್ತ ಬೀಡಿಯೊಂದನ್ನು ತೆಗೆದು ಹೊತ್ತಿಸತೊಡಗಿದ.

ಗಿರಿಯನ ಮನೆಯಲ್ಲಿ ಬಾಲಿ ಅಡಿಯಿರಿಸಿದುದು ಅದೇ ಮೊದಲ ಬಾರಿ. ಅನೇಕ ದಿನಗಳಿಂದ ಅವಳು ಎದುರು ನೋಡುತ್ತಿದ್ದ ಸನ್ನಿವೇಶ. ಸಹಜ ವಾಗಿಯೆ ಅವಳಿಗೂ ಅತ್ಯಂತ ಆನಂದವಾಗಿತ್ತು. ಗಿರಿಯ ತನ್ನನ್ನೇ ದಿಟ್ಟಿ ಸುತ್ತಿದ್ದುದರ ಅರಿವಾಗಿ ಅವಳ ಎದೆ ಪುಲಕಿತವಾಗತೊಡಗಿತ್ತು. ತಾವಿಬ್ಬರೂ ಬರುತ್ತಿದ್ದಾಗ ಅಂಗಡಿಯಲ್ಲಿದ್ದ ಗಿಡ್ಡ ತಮ್ಮನ್ನು ನೋಡಿದ್ದ. ಆಗ ಅವನ ಮನಸ್ಸಿಗೆ ಹೇಗಾಗಿರಬಹುದು ?

"ಹಿಂಗ್ಯಾಕ ಕುಂತುಬಿಟ್ಟೆ ಕಲ್ಲ ದೇವರಂಗ ? ಅಕ್ಕೀ ಎಲ್ಲಿಟ್ಟಿದ್ದೀ, ತಗದು ಕೊಡಲ್ಲಾ ?" ಎಂದಳು ಬಾಲಿ.

"ಅಲ್ಲಿ ಮ್ಯಾಲ ಗಡಿಗ್ಯಾಗ ಐತಿ ನೋಡs" ಎಂದ ಗಿರಿಯ.

"ಎದ್ದು ತಗೀಯಲ್ಲಾ ? ಏನ ನಡಸಿದ್ದೀ ಕುಂತು ?"

ಗಿರಿಯ, ಮಾತು ಬಲ್ಲ ಚತುರನಾಗಿದ್ದಲ್ಲಿ, "ಮತ್ತೇನ ನಡಸೂದು ? ನೋಡುತಾ ಕುಂತೀನಿ ನಿನ್ನ ಮುದ್ದು ಮಾರೀನ್ನ," ಎನ್ನಬಹುದಾಗಿತ್ತು. ಆದರೆ ಅಂಥ ಚಾತುರ್ಯ ಅವನಲ್ಲಿರಲಿಲ್ಲ. ಅಂತೆಯೆ, ಇಷ್ಟವಿರದಿದ್ದರೂ ಆತ ಎದ್ದು ಅಕ್ಕಿಯ ಗಡಿಗೆಯನ್ನು ತೆಗೆದುಕೊಟ್ಟ.

"ಎಷ್ಟು ಹಾಕಲಿ ಅಕ್ಕೀ ?"

"ಹಾಕಲಾ ಒಂದರ್ಧ ಸೇರು. ಮೂವರಿಗೆಷ್ಟು ಬೇಕು ಅನ್ನೂದೂ ತಿಳಿಯೂದಿಲ್ಲೇನ ನಿನಗ ? ?

"ಮೂವರಿಗೆ ಸಾಕಾಗುವಷ್ಟು ನೀನs ಉಣ್ಣುತೀಯೋ ಏನೊ ಯಾಂ ಬಲ್ಲ ! ನನಗೇನ ತಿಳೀಬೇಕು ನಿನ್ನ ಊಟವ ಸಂಗತಿ ?"

"ಹೊಸಮನಿಗಿತ್ತಿಯ ಹಂಗ ಮುರುಕಾ ಮಾಡಾಕ ಹತ್ತಿಯಲ್ಲ ?" ಎಂದು ನಗುತ್ತ ನುಡಿದು ಗಿರಿಯ ಅಕ್ಕಿಯನ್ನಳೆದು ಕೊಟ್ಟ.

ಹಾಗೆ, ನಗೆಯ ನಡುವೆ ಅಡುಗೆ ಸಿದ್ಧವಾಯಿತು. ಅಜ್ಜನಿಗಾಗಿ ಊಟ ಕಟ್ಟಿಕೊಂಡು ಗಿರಿಯ ಹೊರಟು ನಿಂತ.

"ಗಡಾನs ಕೊಟ್ಟು ಬರ್ತೀನಿ ಬಾಲೀ. ನಿನಗ ಹಸಿವಾಗಿದ್ದರ ಉಂಡು

ಮಲಕೊಂಡ ಬಿಡು. ”

“ ಹೂಂ. ನನಗೊಬ್ಬಾಕಿಗೇ ಆಗೈತಿ ಹಸಿವು....” ಬಾಲಿ ಹುಸಿಮುನಿಸಿನಿಂದ ಹೇಳಿದಳು. ಆ ಮಾತು ಗಿರಿಯನಿಗೆ ಪೂರ್ತಿಯಾಗಿ ಅರ್ಥವಾಯಿತೇನೊ. ಅವನ ಕೈಗೆ ಸ್ವರ್ಗವೇ ಸಿಕ್ಕಿದಂತಾಯಿತು. “ ದೌಡ ಬಂದುಬಿಡ್ತೇನಿ ಬಾಲೀ. ಆಮ್ಯಾಲ ಉಂಡು ಮಲಗೂಣು, ” ಎಂದು ಹೇಳಿ ಬಾಗಿಲನ್ನೆಳೆದುಕೊಂಡು ಓಡಿಗಿಳಿದ.

## ಹದಿನಾರು

ಇರುಳಿನ ಅರ್ಧ ಭಾಗ ಕಳೆದು ಹೋಗಿದ್ದರೂ ಬಾಲಿ ಗಿರಿಯ ಇಬ್ಬರಿಗೂ ನಿದ್ದೆ ಬಂದಿರಲಿಲ್ಲ. ಕಾಲ ಸ್ತಬ್ಧವಾಗಿ ನಿಂತ ಹಾಗಿತ್ತು ಅವರ ದೃಷ್ಟಿಯಲ್ಲಿ. ಪರಸ್ಪರರ ಸಂಯೋಗದಲ್ಲಿ ಬಾಹ್ಯ ಜಗವನ್ನೇ ಮರೆತುಬಿಟ್ಟಿದ್ದರು. ನಡುನಡುವೆ ಮಾತು. ಅದೂ ಅವರಿಬ್ಬರಿಗೇ ಸಂಬಂಧಪಟ್ಟುದು.

“ ಅವೊತ್ತು ಸಂತ್ಯಾಗ ಹಂಗ್ಯಾಕ ಮಾಡಿದ್ಯೋ ಗಿರಿಯಾ ? ”

“ ಅಂದು ನನ್ನ ತಲಿಯೊಳಗ ದೆವ್ವ ಹೊಕ್ಕಿತ್ತು ಬಾಲೀ. ”

“ ಕೋಗಿಹಳ್ಳಿಗೆ ಬರೂದನ್ನ ಒಮ್ಮೆಲೆ ಯಾಕ ಬಿಟ್ಟುಬಿಟ್ಟಿದ್ದಿ ? ’

“ ಕರಿಯ ಅಂತ ಅದಾನಲ್ಲಾ--ಅವ ಏನೇನೊ ಹೇಳಿ ನನ್ನ ಮನಸ್ಸು ಕೆಡಿಸಿ ಬಿಟ್ಟಿದ್ದ. ”

“ ನನಗೂ ಹಂಗs ಅನಿಸಿತ್ತು ಗಿರಿಯಾ. ಆ ಬದ್ಮಾಷ ಕರ್‍ಯಾ ಬಾಳ ದಿನದಿಂದ ಕಣ್ಣಿಟ್ಟಿದ್ದ ನನ್ನ ಮ್ಯಾಲ. ಅವನ ಮುಸಡಿ ಕಂಡಗs ಹೇಸಿಕೆಯಾಗುತಿತ್ತು ನನಗ.. ನಾ ಅವನ್ನ ಕೂಡಲಿಲ್ಲಾ ಅಂತ ವೈರ ಸಾಧಿಸತಿದ್ದ. ”

“ ಹಿಂಗೇನ ? ನನಗ ಆವಾಗ ಅದೇನೂ ಹೊಳೀಲಿಲ್ಲ ಬಿಡು. ಅದೂ ಅಲ್ಲದs ನಿಮ್ಮ ಅಪ್ಪ ಆ ಕುಲಕರಣೀನ ಇಟ್ಟುಕೊಂಡದ್ದು ನೋಡಿ ನನಗ ಥೂ ಅನ್ನಿಸಿತ್ತು. ”

“ ನನಗೂ ಅನ್ನಿಸಿತ್ತು ಗಿರಿಯಾ. ಆದರೇನ ಮಾಡೂದು ? ನನ್ನ

ಮಾತು ಆಕಿ ಕೇಳಿದರ ಹೌದಲ್ಲೋ ? "

"ಅದೆಲ್ಲಾ ಆವ್ಯಾಲ ತಿಳೀತು ನನಗ, ಮುರಿಗೆವ್ವ ಹೇಳಿದಾಗ. ಅಲ್ಲೀ ತನಕ ನಿನ್ನ ಮ್ಯಾಲ ಬಾಳ ಸಿಟ್ಟಿತ್ತು ನೋಡು."

ಬಾಲಿ ನಗುತ್ತ ಕೇಳಿದಳು: "ಬಾಳ ಬಾಳ ಇತ್ತೇನ ? ಬಾಳ ಅಂದರ ಎಷ್ಟಿತ್ತು ?"

"ಹ....ಹ....ಹ....ಹ....ಹ"

"ಹ ಹ ಹ ಹ...."

ಹಠಾತ್ತಾಗಿ ಹೊರಗಡೆ ಯಾರೋ ಧ್ವನಿಯೆತ್ತರಿಸಿ 'ಗಿರಿಯಾ' ಎಂದು ಕೂಗುತ್ತಿದ್ದುದು ಕೇಳಿಸಿತು.

ಬಾಲಿಯನ್ನು ಬಳಸಿಕೊಂಡಿದ್ದ ಕೈಗಳನ್ನೆಳೆದುಕೊಂಡು ಗಿರಿಯ ಕೊಂಚ ಗಾಬರಿಯಿಂದಲೆ ಎದ್ದು ಕುಳಿತ. ಬಾಲಿಗೂ ದಿಗಿಲಾಗದಿರಲಿಲ್ಲ.

"ವೀರ್‍ಯಾನ ಧ್ವನಿ ಅದು ಬಾಲೀ. ಇಂಥಾ ರಾತ್ರ್ಯಾಗ ಯಾಕ ಒದರುತಾನೊ," ಎನ್ನುತ್ತ ಗಿರಿಯ ಎದ್ದು ಹೋಗಿ ಬಾಗಿಲು ತೆಗೆದು ಹೊರಗಡೆ ಮುಖ ಹಾಕಿ, "ಯಾಕೋ, ಯಾಕ ಒದರುತೀಯೋ ?" ಎಂದು ಕೇಳುತ್ತಿದ್ದಂತೆಯೆ, ದೂರದಲ್ಲಿ, ಮರಡಿಯ ಕೆಳಭಾಗದಲ್ಲಿ ಧಗಧಗಿಸಿ ಉರಿದು ಮೇಲಕ್ಕೇಳುತಿದ್ದ ಬೆಂಕಿಯ ಜ್ವಾಲೆಗಳು ಅವನ ದೃಷ್ಟಿಯನ್ನು ಸೆಳೆದುವು. ಮರಡಿಯ ಕೆಳಗೆ ಬೆಂಕಿ....ಅದೇ ಅವನ ಹೊಲವಿದ್ದ ಸ್ಥಳ....ಅವನ ಗುಡಿಸಲು, ಅದರಲ್ಲಿ ಅಜ್ಜ, ಅಂದೇ ಒಕ್ಕಲು ಮಾಡಿ ಒಟ್ಟಿದ ನವಣಿ....

"ನಮ್ಮ ಗುಡಿಸಲಕ್ಕs ಬೆಂಕಿ ಬಿದ್ದೈತೇನೋ ವೀರ್‍ಯಾ ?"

"ಆವಾಗಿಂದ ಒದರುತಾ ಇದೀನಿ. ಒಳಗ ಮಲಗಿ ಚಕ್ಕಂದಹೊಡೀತಾ ಬಿದ್ದೀಯೇನ ? ಓಡು....ಓಡು ಗಡಾನs. ಇಲ್ಲಾಂದರ ಮುದುಕ ಸತ್ತು ಹೋದಾನ ಅಲ್ಲೇ ಬೆಂಕ್ಯಾಗ ಸಿಕ್ಕು...."

"ನೀ ಇಲ್ಲೇ ಇರು ಬಾಲೀ. ಮನ್ಯಾಗ ಎತ್ತು ಅದಾವು. ಎಲ್ಲ್ಯೂ ಹೋಗಬ್ಯಾಡ," ಎಂದಿಷ್ಟೇ ಹೇಳಿ ಗಿರಿಯ ಧೋತರವನ್ನು ಮೇಲಕ್ಕೆತ್ತಿ ಕಟ್ಟಿಕೊಳ್ಳುತ್ತ ಓಡತೊಡಗಿದ.

ಆತ ಹೊಲದ ಹತ್ತಿರ ಬರುವುದರೊಳಗಾಗಿ ಬೆಂಕಿ ಭೀಕರ ರೂಪು ತಳೆದು ಗುಡಿಸಲಿನ ಅರ್ಧ ಭಾಗವನ್ನೆಲ್ಲ ದಹಿಸಿ ಬಿಟ್ಟಿತ್ತು. ಭೀಮಾಕಾರದ

ಜ್ವಾಲೆಗಳು ಜಾಲಿಯ ಗಿಡವನ್ನು ಭೇದಿಸಿಕೊಂಡು ಮೇಲಕ್ಕೆ ನೆಗೆದು ಸುತ್ತು ಮುತ್ತಲೂ ಸುಳಿದು ಮೃತ್ಯುವಿನ ಕೆನ್ನಾಲಗೆಗಳಂತೆ ಕಂಗೊಳಿಸುತ್ತಿದ್ದುವು. ಬೆಂಕಿಯ ಕೆಂಪು ಬೆಳಕು ಹೊಲದ ಅರ್ಧ ಭಾಗವನ್ನೆಲ್ಲ ಬೆಳಗಿಸುತ್ತಿತ್ತು. ಉರಿಗೆ ಸಿಕ್ಕಿ ಸಿಡಿಯುತ್ತಿದ್ದ ಗಳಗಳು, ಕೋಲುಗಳು, ಕಟ್ಟಿಗೆಗಳು, ಹಾರುತ್ತಿದ್ದ ರವದಿ, ಸುಡುತ್ತಿದ್ದ ನವಣೆಯ ವಾಸನೆ ಎಲ್ಲೆಡೆಗೂ ಪಸರಿಸಿತ್ತು. ಅಗ್ನಿಗಾಹುತಿಯಾಗುತ್ತಿದ್ದ ಗುಡಿಸಲಿನ ಎದುರಿಗೆ ಕೊಂಚ ದೂರದಲ್ಲಿ ಕುಳಿತುಕೊಂಡು ಅಜ್ಜ ಎದೆ ಬಡಿದುಕೊಳ್ಳುತ್ತ ಆಕ್ರೋಶ ಮಾಡುತಿದ್ದ. ಅವನ ಹತ್ತಿರವೇ ನಾಲ್ಕು ಜನರು ಅಸಹಾಯ ಮುದ್ರೆಯಿಂದ ನಿಂತು ಬೆಂಕಿಯ ತಾಂಡವವನ್ನೇ ದಿಟ್ಟಿಸುತ್ತಲಿದ್ದರು. ಸಮೀಪದಲ್ಲೆಲ್ಲೂ ಭಾವಿಗಳಿರಲಿಲ್ಲ. ಹೊಳೆಯಿದ್ದುದು ಒಂದು ಮೈಲಿನ ಮೇಲೆ. ಬೆಂಕಿಯನ್ನಾರಿಸುವುದು ಸಾಧ್ಯವಿರಲಿಲ್ಲ.

ಗಿರಿಯನನ್ನು ನೋಡುತ್ತಲೂ ಅಜ್ಜನ ಆಕ್ರೋಶ ಮುಗಿಲಿಗೆ ಮುಟ್ಟುವಂತಾಯಿತು. " ಅಯ್ಯೋ....ಅಯ್ಯಯ್ಯೋ....ಗಿರಿಯಾ....ಹಾಳಾಯಿತೋ ಮಗನೇ....ಎಲ್ಲಾ ಹಾಳಾಯಿತೋ.... "

ಸ್ವಲ್ಪ ನವಣೆಯನ್ನಾದರೂ ಬೆಂಕಿಯಿಂದ ಪಾರು ಮಾಡಲು ಸಾಧ್ಯವಾಗುವುದೇನೋ ಎಂದು ಗಿರಿಯ ಉರಿಯ ಬಳಿ ಹೋಗಿ ನೋಡಿದ.

" ಆಗೂದಿಲ್ಲ ಬಾರೋ ಗಿರಿಯಾ. ಅದೆಲ್ಲಾ ಹೋದಂಗs ಆತು. ನೀನೂ ಎಲ್ಲೆರೆ ಮೈ ಸುಟ್ಟುಕೊಂಡೀ ಮತ್ತ ! " ಎಂದ ವೀರಪ್ಪ.

ಅವರಿಗಿಂತ ಮೊದಲೇ ಅಲ್ಲಿಗೆ ಬಂದಿದ್ದ ನಾಲ್ಕುಜನರಲ್ಲೊಬ್ಬ ಹೇಳಿದ:

" ನಾವು ಲಗೂ ಬಂದಿವಂತ ಮುದುಕನ ಜೀವ ಉಳೀತೋ ವೀರೂ. ಸ್ವಲ್ಪ ತಡಾ ಆಗಿದ್ದರ ಅವನೂ ಸುಟ್ಟು ಬೂದಿಯಾಗುತಿದ್ದ. "

" ನೀವು ಬಂದಾಗ ಅವನೂ ಒಳಗs ಇದ್ದನೇನೋ ? "

" ಪಾಪ....ಹೊಯ್ಕೊಳ್ಳಾಕ ಹತ್ತಿದನಪಾ ಒಂದsಸವನs. ಗುಡಿಸಲ ಬಾಗಿಲಿಗೇ ಬೆಂಕಿ ಹಚ್ಚಿದ್ದರಂತ ರಾಕ್ಷಸ ಸೂಳೀಮಕ್ಕಳು. ಹೊರಗ ಬಂದೇನಂದರ ಹಾದಿ ಇರಲಿಲ್ಲ ಮುದುಕಗ. ಬೆಂಕಿ ಅಂತೂ ಧಗಧಗಿಸುತ್ತಾ ಇತ್ತು. ಆ ಕಡೆ ಹಿಂದಿನ ಭಾಗಕ್ಕ ದೇವರ ದಯದಿಂದ ಇನ್ನs ಬೆಂಕಿ ಹತ್ತಿರಲಿಲ್ಲಂತ ನೆಟ್ಟಗಾತು. ಕೈಯಾಗಿನ ಕುಡಗೋಲಿನಿಂದ ಆ ಕಡೆಯ ಗಳಾ ಕಡದು

ತಗದು ಮುಪಕನ್ನ ಎಳಕೊಂಡಿವಿ ಹೊರಗ.... ”

“ ನಾನೂ ಸುಟ್ಟು ಹೋಗಿದ್ದರ ಚಲೋ ಆಗುತಿತ್ತಪಾ. ವರಸೆಲ್ಲಾ ದುಡದು ತೆಗೆದಿದ್ದ ಸವಣೀಯೆಲ್ಲಾ ಹಾಳಾತು....” ಎಂದ ಮುದುಕ.

ಆ ವೇಳೆಗೆ ಊರ ಕಡೆಯಿಂದ ಮತ್ತೆ ಹತ್ತಿಪ್ಪತ್ತು ಜನ ಬಂದು ನೆರೆದರು. ಸಿದಗೌಡ, ಧರ್ಮಣ್ಣ ಅವರ ಪಕ್ಷದ ಗರಡಿಯಾಳುಗಳು. ಎಲ್ಲರೂ ಬಂದರು. ನಿಮಿಷಗಳುರುಳಿದಂತೆ ಜನರ ಗದ್ದಲ ಅತಿಯಾಗತೊಡಗಿತು. ಆ ದೃಶ್ಯವನ್ನು ಕಂಡು ಮರುಗುವವರು ಕೆಲವರಾದರೆ ಮೋಜು ಸವಿಯುತ್ತ, ಮನಸ್ಸಿನಲ್ಲೇ ನಗುವವರು ಕೆಲವರು. ಗೌಡನ ಪಕ್ಷದ ಗರಡಿಯಾಳುಗಳು ರೋಷದಿಂದ ಕನಲಿದ ಹೆಬ್ಬುಲಿಗಳಂತೆ ಕ್ರೂರ ಮುಖಮುದ್ರೆಯಿಂದ ನಿಂತುಕೊಂಡಿದ್ದರು. ಈ ದುಷ್ಕೃತ್ಯವನ್ನು ಮಾಡಿದವರಾರೆಂದು ಯಾರೂ ಯಾರನ್ನೂ ವಿಚಾರಿಸಲಿಲ್ಲ. ಅದು ಎಲ್ಲರಿಗೂ ತಿಳಿದಿದ್ದ ವಿಷಯವೇ ಆಗಿತ್ತು.

“ ನನಗ ನಿನ್ನೇನs ಅನ್ನಿಸಿತ್ತು—ಹೀಂಗೇನಾದ್ರೂ ಆದೀತಂತ. ರಾತ್ರಿಯೊಳಗ ಇಲ್ಲಿ ಒಬ್ಬಿಬ್ಬರು ಆಳುಗಳನ್ನಾದ್ರೂ ಇಡಬೇಕಾಗಿತ್ತು, ” ಎಂದ ಧರ್ಮಣ್ಣ.

“ ಇಡಬೇಕಾಗಿತ್ತು ? ಯಾವ ಬ್ಯಾಡಂದ ನಿನಗ ? ” ಎಂದ ಸಿದಗೌಡ.

“ ಏನಾತೋ ಮುದುಕಾ ? ಬೆಂಕಿ ಹೆಂಗ ಹಚ್ಚಿದರು ? ನೀ ಎಚ್ಚರಿದ್ದಿಯೋ ಇಲ್ಲೋ ? ” ಎಂದು ಧರ್ಮಣ್ಣ ಕೇಳಿದ.

ಮುದುಕ ಹೇಳತೊಡಗಿದ:

“ ನಡುರಾತ್ರಿಯೊಳಗ ಅವರು ನಡೀತಾ ಬಂದ ಕಾಲಸಪ್ಪಳಕ್ಕ ಎಚ್ಚರಾತು. ಕಣ್ಣು ತಗದು ನೋಡೂವರಾಗ ಬೆಳದಿಂಗಳಿನಾಗ ನಾಕು ಮಂದಿ ಬಾಗಿಲದಾಗ ಬಂದು ನಿಂತದ್ದು ಕಾಣಿಸಿತು. ಗಿಡ್ಡ, ಪುಂಡ, ರಾಯಾ, ಲಕ್ಕ ಕೈಯಾಗ ರವದೀ ಹಿಡುಕೊಂಡಿದ್ದರು. ಅವರು ಬೆಂಕಿ ಹಚ್ಚೂದಕ್ಕ ಬಂದಾರನ್ನೂದು ಗೊತ್ತಾದ್ದ ಕೂಡಲೆ ನಾ ಹೊಯ್ಕೊಳ್ಳಾಕ ಸುರು ಮಾಡಿದಿನಿ. ಕೈಯಾಗಿನ ಕುಡಗೋಲು ತೋರಿಸಿ, ಕಡೀತೀವಿ ಸುಮ್ಮನಿರಂತ ಬೆದರಿಸಿದರು. ಬಾಗಿಲಿಗೆ ರವದಿ ಒಗದು ಕಡ್ಡಿ ಕೊರೆದರು. ಬೆಂಕಿ ಹತ್ತುವ ತನಕ ಇದ್ದು ಆ ಮ್ಯಾಲ ಓಡಿಹೋದರು.... ”

"ಯಾವ ಕಡೆಯಿಂದ ಹೋದರೋ ?"

"ಹೀಂಗ. ಆ ಕಡೆಯಿಂದ ಹೋದರು ನೋಡ್ರಿ."

ಧರ್ಮಣ್ಣ ಸಿದಗೌಡ ಇಬ್ಬರೂ ಎದ್ದು ಹೋಗಿ ನೋಡಿದರು. ನಾಲ್ಕೂ ಜನರ ಹೆಜ್ಜೆಗಳ ಗುರುತುಗಳು ಮಣ್ಣಿನಲ್ಲಿ ಸ್ಪಷ್ಟವಾಗಿ ಮೂಡಿದ್ದುವು.

ಬೆಳಗಿನಲ್ಲಿ ಪಂಚನಾಮೆ ನಡೆಯಿತು. ಪೋಲೀಸ್ ಸ್ಟೇಶನ್ನಿನ ಅಮಲ್ದಾರ ಫಿರ್ಯಾದನ್ನು ತಾಲೂಕಿನ ಅಧಿಕಾರಿಯ ಕಡೆ ಕಳಿಸಿದ. ವಿಚಾರಣೆಗಾಗಿ ತಾಲೂಕಿನ ಅಧಿಕಾರಿ ಬರುವುದನ್ನೇ ಎಲ್ಲರೂ ಕಾಯುತ್ತ ಕುಳಿತರು.

ಮುದುಕನನ್ನು ಹೊಲದಲ್ಲಿಯೆ ಬಿಟ್ಟು ಗಿರಿಯ ಮನೆಗೆ ಬಂದ. ಬಾಗಿಲಿಗೆ ಹೊರಗಿನಿಂದ ಚಿಲಕ ಹಾಕಿತ್ತು. ಬಾಲಿ ಎದ್ದು ಹೊರಗಡೆ ಹೋಗಿರುವಳೇನೊ ಎಂದುಕೊಳ್ಳುತ್ತ ಬಾಗಿಲು ತೆಗೆದು ಒಳಗಡೆ ಬಂದ. ಕೊಟ್ಟಿಗೆಯಲ್ಲಿ ಎತ್ತುಗಳು ಎಂದಿನಂತೆ ಮೆಲುಕಾಡಿಸುತ್ತ ನಿಂತಿದ್ದುವು. ಮನೆ ಇದ್ದುದಿದ್ದ ಹಾಗೇ ಇತ್ತು. ಹಾಸುಗೆ ಮಾತ್ರ ಏಕೋ ಅಸ್ತವ್ಯಸ್ತವಾಗಿದ್ದುದು ಕಾಣಿಸಿತು. ಹಾಸುಗೆಯನ್ನೂ ತೆಗೆದಿಡದೆ ಬಾಲಿ ಹೋದುದೆಲ್ಲಿಗೆ ಎಂದು ಯೋಚಿಸುತ್ತ ಆತ ಕೌದಿಯನ್ನೆತ್ತಿದ. ಒಡನೆಯೆ, ಬಳೆಯ ಚೂರುಗಳು ಹಲವು ಸಿಡಿದು ಬಿದ್ದುವು. ಕೌದಿಯ ಮೇಲೆ ರಕ್ತದ ಕಲೆಗಳೂ ಕಾಣಿಸಿದುವು. ಮೊದಲೇ ಗಾಬರಿಗೊಂಡಿದ್ದ ಗಿರಿಯ ಮತ್ತಿಷ್ಟು ಗಾಬರಿಗೊಂಡ. ಗುಡಿಸಲಿಗೆ ಬೆಂಕಿ ಹಚ್ಚಿದ ಪುಂಡರು ಇಲ್ಲಿಗೆ ಬಂದು ಬಾಲಿಯನ್ನು ಬಡಿದು ಎಲ್ಲಿಗಾದರೂ ಎಳೆದೊಯ್ದು ಏನಾದರೂ ಮಾಡಿರಬಹುದೇ—ಎಂಬ ಯೋಚನೆ ಬರುತ್ತಲೂ ಆತ ನೆಲಕ್ಕೆ ಕುಸಿದು ಕುಳಿತು, ಹಣೆಗೆ ಕೈಯಿಟ್ಟುಕೊಂಡು ಮುಂದೇನು ಮಾಡುವುದೆಂದು ವಿಚಾರ ಮಾಡತೊಡಗಿದ.

## ಹದಿನೇಳು

ಗಿರಿಯ ಊಹಿಸಿದಂತೆಯೆ ನಡೆದಿತ್ತು.

ಗುಡಿಸಲಿಗೆ ಬೆಂಕಿಯಿಟ್ಟ ಬಳಿಕ ಆ ನಾಲ್ವರು ಪುಂಡರು ಮೊದಲೇ

ಗೊತ್ತುಪಡಿಸಿದ್ದ ಯೋಜನೆಯ ಮೇರೆಗೆ ಹಳ್ಳಿಗೆ ಬಂದು, ಗಿರಿಯ ಸಿದಗೌಡ ಹಾಗು ಅವರ ಕಡೆಯ ಜನರು ಹೊಲಕ್ಕೆ ಓಡಿಹೋಗುವ್ರದನ್ನೆ ಕಾಯುತ್ತಿದ್ದು ಅನಂತರ ಗಿರಿಯುನ ಮನೆಗೆ ಬಂದು ಬಾಲಿಯನ್ನು ಕಟ್ಟಿ ಹೊತ್ತುಕೊಂಡು ಗುಡ್ಡದ ಕಡೆ ಹೋಗಿದ್ದರು. ಅವರ ಕೈಗೆ ಸಿಗದಂತೆ ಬಾಲಿ ಸಾಕಷ್ಟು ಯತ್ನಿಸಿದ್ದಳು, ಪ್ರತಿಭಟಿಸಿದ್ದಳು, ಹೊಡೆದಾಡಿದ್ದಳು. ಆದರೆ, ನಾಲ್ಕು ಜನ ಪುಂಡರೆದುರಿಗೆ ಅವಳೊಬ್ಬಳ ಆಟ ನಡೆಯುವಂತಿರಲಿಲ್ಲ. ಅಕ್ಕಪಕ್ಕದ ಮನೆಗಳವರು ಭೀತರಾಗಿ ಬಾಗಿಲು ಮುಚ್ಚಿಕೊಂಡು ಸುಮ್ಮನಿದ್ದು ಬಿಟ್ಟಿದ್ದರು.

ಭಟ್ಟಿಯ ಕೊಳ್ಳದ ಬಳಿ ಬಾಲಿಯನ್ನು ಹೊತ್ತುಕೊಂಡು ತಂದ ಬಳಿಕ ಅವರು ನಾಲ್ವರೂ ಮುಂದೇನು ಮಾಡುವುದೆಂದು ಚರ್ಚಿಸಿದ್ದರು. ಏನನ್ನೇ ಮಾಡಿದರೂ ಸರಿಯೆ, ಖೂನಿ ಮಾತ್ರ ಮಾಡಕೂಡದೆಂದು ಮೊದಲೇ ಆಜ್ಞೆ ವಿಧಿಸಿದ್ದ ಕಾಮಣ್ಣ. ಅವಳನ್ನು ತೀರಿಸಿಯೇ ಬಿಡಬೇಕೆಂದು ಪುಂಡನ ಯೋಚನೆ. ಗಿಡ್ಡನಿಗೆ ಮಾತ್ರ ಖೂನಿಯ ವಿಚಾರ ಒಪ್ಪಿಗೆಯಾಗಿರಲಿಲ್ಲ. ರಾಯಾ ಲಕ್ಕ ಇಬ್ಬರೂ ಅವನ ಅಭಿಪ್ರಾಯದವರೇ ಆಗಿದ್ದರು. ಅಂಥ ದೀರ್ಘಕ್ಕೆ ಹೋಗಕೂಡದೆಂದೇ ಅವರು ವಾದಿಸಿದ್ದರು.

"ಈ ಹೊಯ್ಯಾಲಿಯನ್ನ ಹಿಂಗs ಬಿಡಬಾರದು. ಕಡಿದು ಚೆಲ್ಲಿದರ ಯಾರಿಗೇನ ತಿಳೀತೈತಿ? ನಮ್ಮ ವಿರುದ್ಧ ಸಾಕ್ಷಿ ಆದರೂ ಹೇಳಾಕ ಬರುವವರು ಯಾರಿದಾರ?" ಎಂದು ಪುಂಡ ವಾದಿಸಿದ್ದ.

"ಇವಳನ್ನ ಹೊತ್ತು ತರುವಾಗ ಊರಲ್ಲಿ ಯಾರಾದರೂ ನೋಡಿದ್ದಾರು ಪುಂಡಾ. ಇವತ್ತು ಸಾಕ್ಷಿ ಸಿಗಲಿಲ್ಲಾಂತ ಕಡೀತನಕ ಸಿಗಲಿಕ್ಕಿಲ್ಲಂತ ಹೆಂಗ ಹೇಳಾಕ ಬಂದಿತೋ? ಫಾಸೀ ಹಾಕಿಸಿಟ್ಟೇ ನಮುಗೆಲ್ಲಾ...." ಎಂದ ಲಕ್ಕ.

"ಯಾವಲೇ ಅವ ನಮುಗ ಫಾಸೀ ಹಾಕಾವ? ಪೋಲೀಸ್‌ಸಾಬನs ನಮ್ಮ ಮಾಮಾ ಅದಾನ...."

"ನೀ ಒಬ್ಬನs ಏನಾರೆ ಮಾಡಿಕೋ ಹಂಗಾದರ. ನಾವು ಹೋಗುತೀವಿ," ಎಂದು ರಾಯಾ ಲಕ್ಕ ಇಬ್ಬರೂ ಎದ್ದು ಹೊರಟಿದ್ದರು. ಏನು ಮಾಡುವುದೆಂಬುದು ಹೊಳೆಯದೆ ದಿಙ್ಮೂಢನಂತಾಗಿದ್ದ ಗಿಡ್ಡನೂ ಎದ್ದು ಅವರನ್ನು ಹಿಂಬಾಲಿಸತೊಡಗಿದ್ದ. ಆಗ ಮಾತ್ರ ಪುಂಡ ಕೊಲೆಯ ಯೋಚನೆ

ಯನ್ನು ತ್ಯಜಿಸಲೇ ಬೇಕಾಗಿದ್ದಿತು. ನಾಲ್ವರೂ ಸೇರಿ ಬಾಲಿಯ ಮೂಳೆ ಮುರಿಯುವಂತೆ ಥಳಿಸಿ, ಕುಡಗೋಲಿನಿಂದ ತಲೆಗೂದಲನ್ನು ಕೊಯ್ದು, " ಆ ಗಿರ್ಯಾನ ನಾದ ಬಿಟ್ಟು ಸುಮ್ಮನಿದ್ದೀ, ಚಲೋ ಆತು. ಇಲ್ಲದಿದ್ದರ ನಿನ್ನ ಇಂದಿಲ್ಲ ನಾಳೆ ಕಡೀದsa ಬಿಡೂದಿಲ್ಲ, " ಎಂದು ಗದರಿಸಿದ್ದರು. ಬಾಯಿಗೆ ಬಟ್ಟೆ ತುರುಕಿದ್ದರಾದುದರಿಂದ ಬಾಲಿ ಏನನ್ನೂ ಮಾತಾಡುವಂತಿರಲಿಲ್ಲ.

" ಹೋಗಲಿ ಪಾಪ ಅಂತ ನಿನ್ನ ಪ್ರಾಣಾ ಉಳಿಸೀವಿ. ಇದನ್ನೆಲ್ಲಾ ನಾವು ಮಾಡಿದಿವಿ ಅಂತ ಯಾರ ಮುಂದಾದರೂ ಹೇಳಿದಿ ಅಂದರ ಪ್ರಾಣಾನsa ಕಳಕೊಳ್ಳುತೀ. ಹುಷಾರಿ ! " ಎಂದು ಮತ್ತೊಮ್ಮೆ ಎಚ್ಚರಿಕೆ ಕೊಟ್ಟು ಅವರು ಹೊರಟು ಹೋಗಿದ್ದರು.

ಮಧ್ಯಾಹ್ನದ ವೇಳೆಗೆ ದನ ಕಾಯಲು ಬಂದ ಹುಡುಗರು ಅವಳನ್ನು ಕಂಡು, ಹಗ್ಗ ಬಿಚ್ಚಿ ಮುಕ್ತಗೊಳಿಸಿ ಊರಿಗೆ ಸುದ್ದಿ ತಿಳಿಸಿದರು. ಗಿರಿಯನೂ ಮತ್ತೆ ನಾಲ್ಕು ಜನರೂ ಓಡುತ್ತ ಬಂದು ಅವಳನ್ನು ಹೊತ್ತುಕೊಂಡು ಊರಿಗೆ ಸಾಗಿಸಿದರು. ಚಾವಡಿಯಲ್ಲಿ ಅವಳನ್ನು ಮಲಗಿಸಲಾಯಿತು. ಊರೆಲ್ಲವೂ ಅವಳನ್ನು ನೋಡಲು ನೆರೆಯಿತು. ಒಂದರ್ಧ ಗಂಟೆಯೊಳಗಾಗಿ ಆ ವಾರ್ತೆ ಕೋಗಿಹಳ್ಳಿಗೂ ಮುಟ್ಟಿತು. ಸಣ್ಣವ್ವನೂ ಆಕ್ರೋಶ ಮಾಡುತ್ತ ಧಾವಿಸಿ ಬಂದಳು.

ಇನ್ನೊಂದು ಫಿರ್ಯಾದು. ಇನ್ನೊಂದು ಪಂಚನಾಮೆ........

ಅಪರಾಧಿಗಳಾಗಿದ್ದ ಪುಂಡ, ಗಿಡ್ಡ, ರಾಯಾ, ಲಕ್ಕ ನಾಲ್ವರೂ ನಿರ್ಭಯರಾಗಿ ಹಳ್ಳಿಯಲ್ಲಿ ಅಲೆಯುತ್ತಿದ್ದರು.

ಬಸವಾಣಿಯ ಚಹದಂಗಡಿಯಲ್ಲಿ ಕುಳಿತು ಭೀಮಪ್ಪ ಊರಿಗೆಲ್ಲ ಕೇಳಿಸುವಂತೆ ಕೂಗುತ್ತಿದ್ದ: " ನಮ್ಮ ವಿರುದ್ಧ ಸಾಕ್ಷಿ ಹೇಳಿದವರ ಮನಿ ಸುಡಿಸುತೀನಿ, ರುಂಡಾ ಕಡಿಸುತೀನಿ. ನಮ್ಮ ತಂಟೇಕ್ಕ ಯಾರೂ ಬರಬ್ಯಾಡಿರಿ. ಹುಷಾssರಿ ! "

ಕಾಮಣ್ಣ ? ಆತ ಆಗ ಊರಲ್ಲಿರಲೇ ಇಲ್ಲ. ಭೀಮಪ್ಪನಿಂದ ಒಂದು ಸಾವಿರ ರೂಪಾಯಿ ತೆಗೆದುಕೊಂಡು, ಪೋಲೀಸು ಅಧಿಕಾರಿಗಳಿಗೆ ಲಂಚ ಕೊಟ್ಟು ಫಿರ್ಯಾದಿಗಳ ಆಟ ನಡೆಯದಂತೆ ನೋಡಿಕೊಳ್ಳುವುದಕ್ಕಾಗಿ ತಾಲೂಕಿನ ಸ್ಥಳಕ್ಕೆ ಧಾವಿಸಿ ಹೋಗಿದ್ದ. ಮರಿಯಪ್ಪನನ್ನು ಕರೆದುಕೊಂಡು

ಪೋಲೀಸು ಕಚೇರಿಗೆ ಹೋಗಿ. ಅಧಿಕಾರಿಗಳನ್ನು ಕಂಡು ನೂರು ರೂಪಾಯಿಯ ನೋಟೊಂದನ್ನು ಮುಂದೆ ಮಾಡಿದ್ದಾಗಿದ್ದಿತು. ಲಂಚದ ಹಣ ಬಹಳ ಕಡಮೆಯಾಯಿತೆಂದೋ ಇನ್ನಾವ ಕಾರಣದಿಂದಲೋ, ಅಧಿಕಾರಿಗಳು ಅದನ್ನು ಸ್ವೀಕರಿಸಲು ಒಪ್ಪಿರಲಿಲ್ಲ.

ಸಾಯಂಕಾಲದ ಹೈಲಿಗೆ ವಿಚಾರಣಾಧಿಕಾರಿ ಹಳ್ಳಿಗೆ ಬಂದರು. ಅಜ್ಜ, ಗಿರಿಯ, ಬಾಲಿ, ಧರ್ಮಣ್ಣ ಮತ್ತು ನಾಲ್ವರು ಸಾಕ್ಷಿಗಳ ಹೇಳಿಕೆಯಂತೆ ಬರೆದುಕೊಂಡರು. ಗಿಡ್ಡ ಪುಂಡ ರಾಯಾ ಲಕ್ಕ ಈ ನಾಲ್ಕು ಜನರು ಅಪರಾಧಿಗಳೆಂಬುದು ಮನವರಿಕೆಯಾಗುತ್ತಲೂ ಅವರನ್ನು ತಾಲೂಕಿನ ಸ್ಥಳಕ್ಕೆ ಸಾಗಿಸುವ ಎತ್ತುಗಡೆಗೆ ತೊಡಗಿದರು. ಜೊತೆಗೆ ಬೇರೆ ಪೋಲೀಸರಿರಲಿಲ್ಲವಾದುದರಿಂದ ಪುಂಡರನ್ನು ಬಂಧಿಸಿ ಸಾಗಿಸಿಯೇನೆಂಬ ಧೈರ್ಯವಿರಲಿಲ್ಲ. ಅಂತೆಯೆ, ಸಾಮೋಪಚಾರದಿಂದ ಕಾರ್ಯ ಸಾಧಿಸಬೇಕೆಂದು ಯೋಚಿಸಿ ನಾಲ್ವರನ್ನೂ ಕರೆಯಿಸಿ, “ತಾಲೂಕಿನ ಸ್ಥಳಕ್ಕೆ ಬಂದು ಫೌಜದಾರರಿಗೆ ಭೆಟ್ಟಿಯಾಗಿ ಬಂದೀರಂತೆ, ಬರ್ರಿ ನನ್ನ ಸಂಗಡ,” ಎಂದು ಹೇಳಿದರು. “ನಾವ್ಯಾಕ ಬರಬೇಕು? ನಮಗೇನು ಸಂಬಂಧ?” ಎಂದು ಕೋಪದಿಂದಲೇ ಉತ್ತರವಿತ್ತ, ಪುಂಡ. ಅಧಿಕಾರಿ ಮತ್ತೊಂದು ಮಾತನಾಡದೆ, “ಆರೋಪಿಗಳು ಫರಾರಿಯಾಗಿದ್ದಾರೆ,” ಎಂದು ಷರಾ ಬರೆದುಕೊಂಡು ಹೊರಟುಬಿಟ್ಟರು. ಬಾಲಿಯನ್ನು ಜಿಲ್ಲಾ ಸ್ಥಳದ ಆಸ್ಪತ್ರೆಗೆ ಸಾಗಿಸುವ ವ್ಯವಸ್ಥೆಯಾಯಿತು.

ಕಾಮಣ್ಣ? ಅವನ ಪತ್ತೆಯೇ ಇರಲಿಲ್ಲ. ಭೀಮಪ್ಪನಿಂದ ಎತ್ತಿದ ಸಾವಿರ ರೂಪಾಯಿಗಳನ್ನು ಸರಿಯಾಗಿ ಅರ್ಧಪಾಲು ಹಂಚಿಕೊಂಡು, ಅವನೂ ಮರಿಯಪ್ಪನೂ ಮೋಜು ಮಾಡುತ್ತ ತಾಲೂಕಿನ ಸ್ಥಳದಲ್ಲಿಯೇ ಕುಳಿತುಬಿಟ್ಟಿದ್ದರು.

ಅಪರಾಧಿಗಳನ್ನು ಬಂಧಿಸಿಕೊಂಡೊಯ್ಯಲು ಮರುದಿನ ನಾಲ್ಕು ಜನ ಸಶಸ್ತ್ರ ಪೋಲೀಸರು ಹಳ್ಳಿಗೆ ಬಂದರು. ಅಷ್ಟರಲ್ಲಿ ಭೀಮಪ್ಪ ಆ ನಾಲ್ವರನ್ನೂ ಕರೆದುಕೊಂಡು ಮರಿಯಪ್ಪನನ್ನು ಹುಡುಕಿಕೊಂಡು ಹೋಗಿದ್ದ.

“ಖಟ್ಲೆ ರದ್ದು ಮಾಡುತೀನಂತ ಸಾವಿರ ರುಪಾಯಿ ತಗೊಂಡು ಬಂದಿದ್ದಿಯಲ್ಲ? ಏನ ಮಾಡಿದಿ?” ಎಂದು ಕಾಮಣ್ಣನನ್ನು ಕೇಳಿದ ಭೀಮಪ್ಪ.

“ಮರಿಯಣ್ಣ ನಾನು ಇಬ್ಬರೂ ಕೂಡಿ ಹಗಲು ರಾತ್ರಿ ಅದನ್ನss ಸಾಧಿ

ಸುತಾ ಇದೀವಿ. ರಾತ್ರಿ ಊಟಾ ಸುದ್ಧಾ ಮಾಡಿಲ್ಲ," ಎಂದ ಕಾಮಣ್ಣಾ.

"ನೀಯೇನೂ ಕಾಳಜೀ ಮಾಡಬ್ಯಾಡ ಭೀಮಾ. ನಾಯೆಲ್ಲಾ ಮಾಡಿಸಿ ಕೊಡತೀನಿ ಸುಮ್ಮನಿರು," ಎಂದು ಮರಿಯಪ್ಪ ಸಮಾಧಾನ ಹೇಳಿದ. ಅವನೂ ಕಾಮಣ್ಣನೂ ಸೇರಿ ಮತ್ತೊಮ್ಮೆ ಫೌಜದಾರರನ್ನು ಕಾಣಲು ಹೋದರು.

"ಹೆಂಗೆರೆ ಮಾಡಿ ಖಟ್ಲೀ ಆಗದಂಗ ಮಾಡಿರಿ ರಾವಸಾಬರೇ," ಎಂದು ಕೇಳಿಕೊಂಡದ್ದಾಯಿತು.

"ಆರೋಪಿಗಳೆಲ್ಲದಾರ?" ಎಂದು 'ರಾವಸಾಬ'ರು ಕೇಳಿದರು.

"ಇದಾರ," ಎಂದ ಮರಿಯಪ್ಪ.

"ಅವರನ್ನ ಮೊದಲ ಹಾಜರ್ಮಾಡಿರಿ. ಆ ಮ್ಯಾಲ ವಿಚಾರ ಮಾಡೂಣು," ಎಂದು ಉತ್ತರ ಬಂದಿತು. ಇನ್ನು ಅಪರಾಧಿಗಳನ್ನು ಅಡಗಿಸಿಟ್ಟುಕೊಳ್ಳುವಂತಿರಲಿಲ್ಲ. ಅವರನ್ನು ಹಾಜರು ಮಾಡಬೇಕಾಗಿ ಬಂತು. ಫೌಜದಾರರು ಮತ್ತೊಂದು ಮಾತನಾಡದೆ ಅವರನ್ನು ಲಾಕಪ್ಪಿಗೆ ದೂಡಿದರು. ಕಾಮಣ್ಣ ಮರಿಯಪ್ಪ ಇಬ್ಬರೂ ಕೈಜಾಡಿಸುತ್ತ ಹಿಂದಿರುಗಬೇಕಾಯಿತು.

"ಖಟ್ಲೀನs ರದ್ದು ಮಾಡಿಸುತೀನಿ ಅಂತಿದ್ದಿರಲ್ಲೋ. ನಮ್ಮ ಹುಡುಗರನ್ನ ಹಿಡಕೊಟ್ಟು ಬಂದಿರಾ?" ಭೀಮಪ್ಪ ಎದೆ ಬಡಿದುಕೊಳ್ಳುತ್ತ ಕೇಳಿದ.

"ಒಂದು ಸಾವಿರದಿಂದ ಕೆಲಸ ಹೆಂಗಾಗಬೇಕೋ? ಫೌಜದಾರರು ಎರಡು ಸಾವಿರ ರೂಪಾಯಿ ಕೇಳುತಾರ," ಎಂದು ಸುಳ್ಳು ಹೇಳಿ ಮರಿಯಪ್ಪ ಅವನ ಬಾಯಿ ಮುಚ್ಚಿಸಿದ.

"ಮುಂದ ಹೆಂಗ ಮಾಡೂದೋ ಕಾಮಣ್ಣಾ? ದೊಡ್ಡ ಸಾಬ ನಿಮ್ಮ ಮಾಮಾ ಅಂತಿದ್ದಿಯಲ್ಲಾ, ಅವಗಾದರೂ ಹೇಳಿ ನೋಡಲ್ಲಾ?"

"ಫಿರ್ಯಾದು ದಾಖಲ್ ಆದಮ್ಯಾಲ ಯಾರೂ ಏನ ಮಾಡೂದಕ್ಕೂ ಬರೂದಿಲ್ಲ ಭೀಮಾ."

"ದೊಡ್ಡ ಸಾಬ ಕೂಡಾ?"

"ದೊಡ್ಡ ಸಾಬ ಯಾಕ, ಮಂತ್ರಿ ಕೂಡಾ ಏನೂ ಮಾಡೂ ಹಂಗಿಲ್ಲ ಈಗ."

" ಸುಮ್ಮನಿರೋ ಭೀಮಾ. ಸರಕಾರೀ ವಕೀಲಗ ಏನಾರೆ ಕೊಟ್ಟು ಜಾಮೀನ ಮ್ಯಾಲ ಬಿಡಿಸುತೀವಿ ಹುಡುಗರನ್ನ. ಇನ್ನೊಂದು ಸಾವಿರ ರೂಪಾಯಿ ತಗೊಂಡು ಬಾ ಹೋಗು," ಎಂದ ಮರಿಯಪ್ಪ.

ಭೀಮಪ್ಪ ಊರಿಗೆ ಹೋಗಿ ಮತ್ತೊಂದು ಸಾವಿರ ತಂದು ಕೊಟ್ಟದ್ದಾಯಿತು. ಮರಿಯಪ್ಪ ಕಾಮಣ್ಣಾ ಇಬ್ಬರೂ ಒಳಗೊಳಗೇ ನಗುತ್ತ ಆ ಹಣವನ್ನೂ ಹಂಚಿಕೊಂಡರು. ಜಾಮೀನು ಅರ್ಜಿ ತಿರಸ್ಕೃತವಾಯಿತು.

" ಏನ್ಮಾಡೂದೋ ಭೀಮಾ. ನಾವು ಪ್ರಯತ್ನ ಮಾಡಿದಷ್ಟು ಮಾಡಿದಿವಿ. ವಕೀಲ ಸೂಳೀಮಗಾ ಮೋಸ ಮಾಡಿದ," ಎಂದು ಹೇಳಿ ಮರಿಯಪ್ಪ ಮನೆಯ ಹಾದಿ ಹಿಡಿದ. ಭೀಮಪ್ಪ ಅರ್ಧಕ್ಕರ್ಧ ಹುಚ್ಚನಂತಾಗಿದ್ದ. ಮರಿಯಪ್ಪ, ಕಾಮಣ್ಣಾ, ಸರಕಾರಿ ವಕೀಲ, ಮ್ಯಾಜಿಸ್ಟ್ರೇಟ, ಫೌಜದಾರ, ಸಿದಗೌಡ ಗಿರಿಯ ಎಲ್ಲರನ್ನೂ ಶಪಿಸುತ್ತ ರೈಲು ಹತ್ತಿ ಊರಿಗೆ ಬಂದು, ಹೆಂಡತಿಯನ್ನು ಮನಸ್ವಿಯಾಗಿ ಬೈದು ಬಾರುಕೋಲಿನಿಂದ ಥಳಿಸಿ ಹಾಸಿಗೆಯಲ್ಲಿ ಬಿದ್ದುಕೊಂಡ.

ಎರಡು ದಿನಗಳ ವರೆಗೆ ಆತ ಹಗಲು ಹೊತ್ತು ಮನೆ ಬಿಟ್ಟು ಹೊರಗೆ ಬರಲಿಲ್ಲ. ಕತ್ತಲೆ ಪಸರಿಸಿದ ಬಳಿಕ ಒಬ್ಬನೇ ಹೊರಟು, ಭಟ್ಟಿಯ ಕೊಳ್ಳಕ್ಕೆ ಹೋಗಿ, ರಾತ್ರಿಯನ್ನೆಲ್ಲ ಅಲ್ಲಿಯೆ ಕಳೆದು ಬೆಳಗಾಗುವುದರೊಳಗಾಗಿ ಮನೆಗೆ ಬಂದು ಬೀಳುತ್ತಿದ್ದ. ಕುಡಿತವೂ ಮಿತಿಮೀರಿ ಬೆಳೆದಿತ್ತು. ಆತ ಕುಡಿಯುವುದನ್ನು ಕಂಡು ಯಸನೋವಪ್ಪ ಗಾಬರಿಗೊಂಡು, " ಇಷ್ಟು ಕುಡೀಬಾರದು ಭೀಮಾ. ಚಲೋದಲ್ಲ," ಎಂದು ಹೇಳುತ್ತಿದ್ದ. ಭೀಮಪ್ಪ ಶುಷ್ಕ ನಗೆ ಬೀರಿ ಮತ್ತೆ ಕುಡಿಯುತ್ತಿದ್ದ. ಭೀಮಪ್ಪ ಹುಚ್ಚು ಹುಚ್ಚಾಗಿ ಆಚರಿಸುತ್ತಿರುವನೆಂದು ಕೇಳಿ ಕಾಮಣ್ಣಾ ಕುತೂಹಲದಿಂದ ಅವನನ್ನು ಕಾಣಲು ಬಂದು, " ಯಾಕ ಭೀಮಾ, ಯಾಡ್ಡ ಮೂರು ದಿನಾ ಬರಲೇ ಇಲ್ಲಲ್ಲ ಮನೀಕಡೆ ? " ಎಂದು ಮಾತಿಗಾರಂಭಿಸಿದ.

" ಮುಂದಿಗೆ ಮಾರೀ ಆದರೂ ಹೆಂಗ ತೋರಿಸಲೋ ಕಾಮಣ್ಣಾ ? "

" ಹೆಂಗ ಅಂದರ ಹೀಂಗ ! "

" ಈ ಮಾರಿಗೆ ಮಸೀ ಅಂತೂ ಬಳಿದು ಕುಂತಿ ಕಾಮಣ್ಣಾ. ನನ್ನ ಮಕ್ಕಳಿಬ್ಬರನ್ನೂ ಜೇಲಿನಾಗ ಹಾಕಿಸಿದಿ. ಇಷ್ಟs ಸಾಕಾಗಲಿಲ್ಲೇನ ನಿನಗ ?

ಈಗ ನನ್ನ ಕಂಡು ಮಂದಿ ನಗೂದು ನೋಡಿ ನೀನೂ ನಗಬೇಕಂತ ಮಾಡಿಯೋ ಏನ ? " ಎಂದ ಭೀಮಪ್ಪ.

ಕಾಮಣ್ಣ ಬುದ್ಧಿವಂತ, ಮುಂದೆ ಮಾತು ಬೆಳಸದೆ ಎದ್ದು ಹೊರಟು ಹೋದ.

ಅಂದಿನಿಂದ ಭೀಮಪ್ಪನ ಮನೆಗೆ ಬರುವುದನ್ನೇ ನಿಲ್ಲಿಸಿಬಿಟ್ಟ ಕಾಮಣ್ಣ.

ಭೀಮಪ್ಪನೂ ಕಾಮಣ್ಣನ ಮನೆಯ ಕಡೆ ಸುಳಿಯಲಿಲ್ಲ.

ಭೀಮಪ್ಪನ ಹಣವನ್ನೆಲ್ಲ ಕಾಮಣ್ಣ ಎತ್ತಿ ಹಾಕಿರುವನೆಂದೂ ಅವರಿಬ್ಬರಿಗೂ ಭಾರಿ ಕಲಹವಾಗಿದೆಯೆಂದೂ ಹಳ್ಳಿಯಲ್ಲೆಲ್ಲ ಸುದ್ದಿ ಹರಡಿತು.

ಸಹಜವಾಗಿಯೆ, ಗೌಡನ ಪಕ್ಷದ ಜನರಿಗೆಲ್ಲ ಸಂತೋಷವಾಯಿತು. ಕಾಮಣ್ಣನ ಪುಂಡರ ತಂಡಕ್ಕೆ ಅಂಜಿಕೊಂಡಿರುತ್ತಿದ್ದವರೆಲ್ಲ ಧೈರ್ಯದಿಂದಲೂ ಸಮಾಧಾನದಿಂದಲೂ ತಲೆಯೆತ್ತಿ ತಿರುಗಾಡತೊಡಗಿದರು. ಕಾಮಣ್ಣನ ಬಲವನ್ನು ಮುರಿಯಲು ಇದೇ ಸರಿಯಾದ ಸಮಯವೆಂದು ಯೋಚಿಸಿ, ಸಿವಗೌಡ ನಗರಕ್ಕೆ ಹೋಗಿ ಹರಿಹರನನ್ನು ಕಂಡು ಕಾಮಣ್ಣನ ಭಟ್ಟಿ ಸೆರೆ ಕಾಯಕದ ಬಗೆಗೆ ವಿವರವಾಗಿ ತಿಳಿಸಿದ. ಹರಿಹರ ಅವನನ್ನು ನೇರವಾಗಿ ಡಿ. ಎಸ್. ಪಿ. ಯವರ ಬಳಿ ಕರೆದುಕೊಂಡು ಹೋದ.

" ಹಿಂದೊಮ್ಮೆ ಆ ಸ್ಥಳದ ಮೇಲೆ ರೇಡ್ ಮಾಡಿದ್ದರು ಪೋಲೀಸರು. ಆಗ ಏನೂ ಸಿಕ್ಕಲಿಲ್ಲವಲ್ಲಾ ? " ಎಂದರು ಡಿ. ಎಸ್. ಪಿ.

ಇಲಿಗಳನ್ನು ಹಿಡಿಯಬೇಕಾದಾಗ ಬೆಕ್ಕು ಗಂಟೆ ಬಾರಿಸುತ್ತ ಬರುವುದುಂಟೇ ? ಕಳ್ಳರನ್ನು ಹಿಡಿಯಬೇಕಾದರೆ ಒಮ್ಮಿಂದೊಮ್ಮೆಲೆ ರೇಡ್ ಮಾಡಬೇಕು. ಪೋಲೀಸರು ಬರುವರೆಂದು ಅವರಿಗೆ ಸ್ವಲ್ಪವೂ ಸಂಶಯ ಬಂದಿರಬಾರದು. ಅಲ್ಲವೇ ? " ಎಂದ ಹರಿಹರ.

" ಆಗಲಿ. ನಾನು ವ್ಯವಸ್ಥೆ ಮಾಡುತ್ತೇನೆ. ನೀವು ಮಾತ್ರ ಈ ಸುದ್ದಿಯನ್ನು ಪೂರಾ ಗುಟ್ಟಾಗಿಡಬೇಕು, " ಎಂದು ಹೇಳಿ ಡಿ. ಎಸ್. ಪಿ. ಯವರು ಅವರನ್ನು ಕಳಿಸಿ ಕೊಟ್ಟರು.

# ಹದಿನೆಂಟು

ಕೆಲವು ದಿನಗಳ ತರುವಾಯ, ಒಂದು ರಾತ್ರಿ ಒಂಬತ್ತು ಗಂಟೆಯ ವೇಳೆಗೆ ಪೋಲೀಸು ಪಡೆ ಹಠಾತ್ತನೆ ಭಟ್ಟಿಯ ಕೊಳ್ಳದ ಮೇಲೆ ದಾಳಿಯಿಟ್ಟು ಯಂಕನೋವಪ್ಪ, ಕಲ್ಯಾ, ತಿಪ್ಪ ಮೂವರನ್ನೂ ಬಂಧಿಸಿತು. ಸಿದ್ಧವಾಗು ತ್ತಿದ್ದ ರಸಾಯನ, ಹರಿವೆಗಳು, ಇತರ ಸಾಮಗ್ರಿಗಳು ಎಲ್ಲವನ್ನೂ ವಶಪಡಿಸಿ ಕೊಂಡು ಪೋಲೀಸರು ಹಳ್ಳಿಯ ಕಡೆ ಬರುತ್ತಿದ್ದಾಗ, ಮಾರಾಟಕ್ಕಾಗಿ ಸೆರೆಯ ನ್ನೊಯ್ಯಲು ಕೊಳ್ಳದ ಕಡೆ ಬರುತ್ತಿದ್ದ ಹರಿಜನರ ತಿಮ್ಮ, ವಿರುಪಾಕ್ಷಿ ಇಬ್ಬರೂ ಸುಲಭವಾಗಿಯೆ ಅವರ ಕೈಗೆ ಸಿಕ್ಕುಬಿದ್ದರು. ಯಾವ ವಿಘ್ನವೂ ಒದಗದೆ ದಾಳಿ ಯಶಸ್ವಿಯಾದುದಕ್ಕೆ ಹರ್ಷಿಸುತ್ತ ಪೋಲೀಸರು ಅಪರಾಧಿಗಳನ್ನೆಲ್ಲ ಒಡಿ ದುಕೊಂಡು ಹಳ್ಳಿಗೆ ಬಂದು ಚಾವಡಿಯಲ್ಲಿ ಬಿಡಾರ ಹೂಡಿದರು. ಆ ರಾತ್ರೆ ಭೀಮಪ್ಪ ಮನೆಯಲ್ಲೇ ಇದ್ದನಾದುದರಿಂದ ಆತ ಸಿಕ್ಕಿ ಬೀಳದೆ ಉಳಿದು ಕೊಂಡ.

ಭಟ್ಟಿ ಸೆರೆಯವರನ್ನು ಪೋಲೀಸರು ಹಿಡಿದು ತಂದಿರುವರೆಂಬ ವಾರ್ತೆ ಹಳ್ಳಿಯಲ್ಲೆಲ್ಲ ಹರಡುತ್ತಲೂ ಜನರು ಗುಂಪುಗುಂಪಾಗಿ ಚಾವಡಿಯೆದುರಿಗೆ ನೆರೆದು ಆ ತಮಾಷೆಯನ್ನು ನೋಡುತ್ತ ನಿಂತರು. ಶಿವಗೌಡ ಧರ್ಮಣ್ಣ ಇಬ್ಬರೂ ಧಾವಿಸಿ ಬಂದು ಪೋಲೀಸರಿಗೆ ಸರಬರಾಯಿ ಮಾಡುವುದರಲ್ಲಿ ತೊಡ ಗಿದರು.

ಪೋಲೀಸ್‌ಪಡೆಯ ನೇತೃತ್ವ ವಹಿಸಿದ್ದ ಫೌಜದಾರರು ತುಂಬ ಗಂಭೀರ ಸ್ವಭಾವದವರಾಗಿದ್ದಂತೆ ಕಂಡುಬಂದಿತು. ಸರಬರಾಯಿಗಾಗಿ ಗೌಡ ಓಡಾಡು ವುದು ಅವರಿಗೆ ಸರಿಬರಲಿಲ್ಲ.

" ನೀವು ಸುಮ್ಮನೆ ತ್ರಾಸ ಮಾಡಿಕೊಳ್ಳಬ್ಯಾಡ್ರಿ ಗೌಡರs. ನಮ್ಮದು ನಾವು ನೋಡಿಕೋತೀವಿ, " ಎಂದು ಅವರು ಹೇಳಿದರು.

" ಹಂಗ ಹೆಂಗಾದೀತ್ರೀ ರಾವ್‌ಸಾಬರs ? ನಮ್ಮೂರಿಗೆ ನೀವು ಅತಿಥಿ ಗಳಂತೆ ಬಂದೀರಿ. ನಾವು ಮಾಡೂದು ಮಾಡಾಕ ಬೇಕು. "

" ನಾವೀಗ ಅತಿಥಿಗಳಾಗಿ ಬಂದಿಲ್ಲ. ನಮ್ಮ ಡ್ಯೂಟಿಗಾಗಿ ಬಂದಿದ್ದೇವೆ.

ವ್ಯರ್ಥವಾಗಿ ವೇಳೆಗಳೆಯುವಂತಿಲ್ಲ, " ಎಂದು ನುಡಿದು ಗೌಡನ ಬಾಯಿ ಮುಚ್ಚಿಸಿ ಫೌಜದಾರರೆಂದರು: " ಈ ಆರೋಪಿಗಳ ಪುಢಾರಿ ಯಾರು ಕರೆಸ ಬೇಕಲ್ಲಾ ? "

ಗೌಡ ಸುಮ್ಮನೆ ನಿಂತುಕೊಂಡಿದ್ದ. ಫೌಜದಾರರು ಯಸನೋವಪ್ಪ ನನ್ನುದ್ದೇಶಿಸಿ ಕೇಳಿದರು:

" ಏನೋ ನಿಮ್ಮ ಪುಢಾರಿ ಯಾರು ? "

" ಹಾಂ ? ಯಸ್....ನೋ.... " ಎಂದ ಯಸನೋವಪ್ಪ.

ಬಂದೂಕುಗಳನ್ನು ಹಿಡಿದುಕೊಂಡು ಕುಳಿತಿದ್ದ ಪೋಲೀಸರೆಲ್ಲ ನಕ್ಕರು. ಫೌಜದಾರರಿಗೆ ಮಾತ್ರ ನಗೆ ಬರಲಿಲ್ಲ. ಅವರು ಮತ್ತೆ ಕೇಳಿದರು:

" ಭಟ್ಟಿಯ ಮಾಲಕ ಯಾರು ಹೇಳೋ ? "

" ನೋ.... " ಎಂದ ಯಸನೋವಪ್ಪ.

" ಇವನಿಗೂ ಇಂಗ್ಲಿಷು ತಿಳಿಯುವದೇನು ? " ಎಂದು ಫೌಜದಾರರು ಗೌಡನನ್ನು ಕೇಳಿದರು.

" ಇವಗ ತಿಳಿಯೂ ಇಂಗ್ಲಿಷಂದರ ಇಷ್ಟs. ಯಸ್, ನೋ.... ಹಿಂದಕ್ಕ ಇವ ಮಿಲಿಟರಿಯೊಳಗಿದ್ದ.... "

" ಓಹ್ಹೊ. ಹೀಗೇನು ? ಮಿಲಿಟರಿಯಲ್ಲಿದ್ದವ ನೀನೂ ಇಂಥಾ ಕೆಲಸಕ್ಕ ಬೀಳಬೇಕೇನೋ ? " ಎಂದರು ಫೌಜದಾರರು.

" ಯಸ್. ಮತ್ತೇನ ಮಾಡಬೇಕಂತೀರಿ ನಾ ? "

" ಪೆನ್ಶನ್ ಬರತಿರಬೇಕಲ್ಲಾ ? "

" ಹತ್ತು ರೂಪಾಯಿಯ ಪೆನ್ಶೇನ ತಗೊಂಡೇನ ಬಾಯಿ ಬಾಯಿ ಬಡ ಕೋಬೇಕೇನ ? ನನ್ನ ಬೀಡಿಯ ಖರ್ಚಿಗೆ ಆಗಾಕಿಲ್ಲ ಹತ್ತು ರೂಪಾಯಿ. "

" ಬೇರೇನಾದರೂ ಉದ್ಯೋಗ ಮಾಡಬೇಕು ? "

" ಎಲ್ಲ್ಯಾದಾವ ಉದ್ಯೋಗ ? ಏನ ಮಾಡೂದು ? ಮಿಲಿಟರಿಯೊಳಗ ದುಡದು ದುಡದು ಏನೋ ಹೆಂಗೋ ಬದುಕಿ ಬಂದೀವಿ ನಾವು. ನಮಗಾಗಿ ಏನ ಮಾಡೀರಿ ನೀವು ? "

" ಹೊಲದಲ್ಲಿ ದುಡಿಯಲಿಕ್ಕಾಗುವದಿಲ್ಲೇನು ನಿನಗೆ ? "

" ಹೊಲ ? " ಎಂದು ನುಡಿದು ಯಸನೋವಪ್ಪ ಗಟ್ಟಿಯಾಗಿ ನಗ

ತೊಡಗಿದ. "ಹೊಲ ಅಂತ....ಹೊಲದಾಗ ದುಡೀಬೇಕಂತ! ಹ ಹ ಹ ಹಾ ಹಾ! ದುಡಿಯಾಕ ಹೊಲಾ ಎಲ್ಲೈತಿ? ಈ ಊರಾಗ ಇದ್ದೂ ಮಂದಿಗೇ ಕೂಲಿ ಸಿಗೂದಿಲ್ಲ. ಇನ್ನು ನಮುಗ ಎಲ್ಲಿಂದ ಸಿಗಬೇಕು? ಹಳ್ಳಿಯೊಳಗ ಎಂಥಾ ಪರಸಂಗ ಐತಿ ಅನ್ನೂದು ಪಟ್ಟಣದಾಗ ಇರುವ ನಿಮುಗ ಹೆಂಗ ತಿಳಿ ದೀತು ಸಾಹೇಬರs!"

ಫೌಜದಾರರು ಒಂದು ಕ್ಷಣ ಮೌನವಾಗಿದ್ದು ಅನಂತರ ಮಾತನಾಡಿ ದರು:

"ಹೋಗಲಿ ಅದೆಲ್ಲಾ. ಅದಾವುದೂ ನಮುಗೆ ಸಂಬಂಧವಿಲ್ಲ...."

ಅವರನ್ನು ಮಧ್ಯದಲ್ಲಿಯೆ ತಡೆದು ಯಸನೋವಪ್ಪ ಕಟುನಗೆಯೊಂದಿಗೆ ನುಡಿದ:

"ಹೂಂ....ಇದೆಲ್ಲಾ ಸಂಬಂಧ ಇಲ್ಲ ನಿಮುಗ! ನಿಮುಗ ಸಂಬಂಧ ಇರೂದಂದರ ಬರೀ ನಮ್ಮನ್ನ ಹಿಡಿಯೂದು...."

ಅವನ ಮಾತಿಗೆ ಗಮನವೀಯದೆ ಫೌಜದಾರರು ತಿಮ್ಮನ ಕಡೆ ತಿರುಗಿ ಕೇಳಿದರು:

"ಏನೋ, ಯಾರ ಮಾತಿನ ಮ್ಯಾಲಿಂದ ಈ ಕೆಲಸ ಮಾಡುತೀ ನೀನು?"

ಆತ ತಲೆ ಬಾಗಿಸಿಕೊಂಡು ಕುಳಿತಿದ್ದವನು ಹಾಗೇ ಕುಳಿತಿದ್ದ. ಫೌಜ ದಾರರ ಪ್ರಶ್ನೆಗೆ ಉತ್ತರ ದೊರೆಯಲಿಲ್ಲ.

"ನಿಮ್ಮ ಪುಢಾರಿ ಯಾರೆಂಬೂದು ನಮುಗೆ ಗೊತ್ತದೆ. ಆದರೂ ನಿಮ್ಮ ಬಾಯಿಂದಲೇ ಅದು ಹೊರಟರೆ ಉತ್ತಮ. ಒಳ್ಳೆಯ ಮಾತಿಗೆ ಹೇಳುತ್ತೀರೋ ಅಥವಾ ದೇವರ ಪ್ರಸಾದ ಬೇಕೋ?" ಎಂದು ಗದರಿಸುತ್ತ ಫೌಜದಾರರು ತಿಪ್ಪುವಿನ ಬಳಿ ಹೋಗಿ ಅವನ ಕೆನ್ನೆಗೆ ಒಂದೇಟು ಬಿಗಿದರು. ಹೊಡೆತ ತಿಂದರೂ ಮಿಸುಕಾಡದೆ ಆತ ಕಲ್ಲಿನಂತೆ ಕುಳಿತುಕೊಂಡಿದ್ದ. ಅವನಾಗಲಿ, ಇತರರಾಗಲಿ ತುಟಿ ಬಿಚ್ಚಲಿಲ್ಲ.

ತನ್ನ ಗುಂಪಿನವರನ್ನು ಪೋಲೀಸರು ಹಿಡಿದು ತಂದು ಬಡಿಯುತ್ತಿರುವ ರೆಂಬ ಸಮಾಚಾರ ಕಿವಿಗೆ ಬೀಳುತ್ತಲೂ ಕಾಮಣ್ಣ ಐದಾರು ನಿಮಿಷ ಶಾಂತ ವಾಗಿ ಕುಳಿತುಕೊಂಡು ಮುಂದೇನನ್ನು ಮಾಡುವುದೆಂದು ಯೋಚಿಸುತ್ತಿದ್ದ.

ಅನಂತರ ಒಂದು ಯೋಜನೆಯನ್ನು ಸಿದ್ಧಗೊಳಿಸಿಕೊಂಡು, ಕೋಟಿನ ಜೇಬಿನಲ್ಲಿ ಎರಡು ನೂರು ರುಪಾಯಿಯ ನೋಟುಗಳನ್ನು ತುಂಬಿಕೊಂಡು ಚಾವಡಿಗೆ ಬಂದ.

"ನಮಸ್ಕಾರರೀ ರಾವಸಾಬರs."

"ಯಾರೋ ನೀನು?" ಎಂದರು ಫೌಜದಾರರು. ತನ್ನ ವಿರೋಧಿಗಳಾದ ಗೌಡ ಧರ್ಮಣ್ಣರ ಎದುರಿನಲ್ಲಿ ಫೌಜದಾರರು ತನ್ನನ್ನು ಹಾಗೆ ಸಂಬೋಧಿಸಿದರಲ್ಲಾ ಎಂದು ಅವನಿಗೆ ಒಳಗೊಳಗೇ ಸಂಕಟವಾಗದಿರಲಿಲ್ಲ. ಆದರೂ ಅದನ್ನು ಮುಖದಲ್ಲಿ ತೋರಿಸದೆ, ಕೃತ್ರಿಮ ವಿನಯವನ್ನು ನಟಿಸುತ್ತ–"ನಾನ್ರೀ? ನಂದು ಗೊತ್ತಿಲ್ಲೇನ್ರೀ ನಿಮಗ? ನಾ ಕಾಮಣ್ಣರೀ........" ಎಂದ.

ಬಂದೂಕಧಾರಿಗಳಾದ ಪೋಲೀಸರು ಮತ್ತೆ ನಕ್ಕರು. ಫೌಜದಾರರು ಹುಬ್ಬುಗಂಟು ಹಾಕಿ ಗಡಸು ಧ್ವನಿಯಲ್ಲಿ ಕೇಳಿದರು:

"ಕಾಮಣ್ಣಾ? ಏನು ಉದ್ಯೋಗ ಮಾಡುತೀ?"

"ಉದ್ಯೋಗ? ಹ....ಹ....ಉದ್ಯೋಗ ಅಂದಿರಾ? ನನ್ನಂಥಾವ ಉದ್ಯೋಗ ಮಾಡೂದಂದರ ಹೆಂಗರಿ? ಮನಿಯ ಹೊಲಾ ಐತಿ....ದೇವ್ರು ಏನೂ ಕಡಮಿ ಮಾಡಿಲ್ಲರೀ ನನಗ. ನಮ್ಮ ಮನೆತನಾ ಬಾಳ ದೊಡ್ಡದು. ದೊಡ್ಡ ಪೋಲೀಸ್ ಸಾಬರು.............. ಅಂತ ಅದಾರಲ್ಲಾ....ಅವರು ನನಗ ಮಾಮಾ ಆಗಬೇಕ್ರೀ...."

ಫೌಜದಾರರ ಮುಖ ಒಮ್ಮೆಲೆ ಕ್ರುದ್ಧವಾಯಿತು. ಕೈಯಲ್ಲಿದ್ದ ದಂಡದಿಂದ ಕಾಮಣ್ಣನಿಗೆ ಎರಡೇಟು ಬಿಗಿದು ಅವರೆಂದರು: "ನಾ ನಿನಗ ಕೇಳುತಾ ಇರೂದೇನು? ನೀ ಹೇಳುತಾ ಇರೂದೇನು? ದೊಡ್ಡ ಮನೆತನ ಅಂತೆ ಮಗನದು....ಇವನಂಥವ ಉದ್ಯೋಗವೇ ಮಾಡಬಾರದಂತೆ....ದೇವ್ರು ಕಡಮೆ ಮಾಡಿಲ್ಲಂತೆ! ಸೂಳೀಮಗ! ದೊಡ್ಡ ಸಾಹೇಬರ ಹೆಸರು ಬ್ಯಾರೆ ಹೇಳುತಾನೆ....ಇವನ ಮಾಮಾ ಅಂತೆ ಅವರು....ತಾನೊಬ್ಬ ಬದ್ಮಾಷ........ಅವರ ಹೆಸರೂ ಕೆಡಿಸಲಿಕ್ಕೆ ಹೊಂಟಾನ. ಇನ್ನೊಮ್ಮೆ ಅವರ ಹೆಸರಿನ ದುರುಪಯೋಗ ನಿಮ್ಮಲ್ಲಿ ಯಾರಾದರೂ ಮಾಡಿದಿರೆಂದರೆ ನಿಮ್ಮನ್ನೆಲ್ಲಾ ಸೀಳಿಬಿಡ್ತೀನಿ...."

ಕಾಮಣ್ಣಾ ನೆಲಕ್ಕೆ ಕುಸಿದು ಕುಳಿತ.

ಅವನನ್ನೂ ಅವನ ಸಹಕಾರಿಗಳನ್ನೂ ಹಿಡಿದುಕೊಂಡು, ರಾತ್ರಿಯ ಟ್ರೈಲಿಗೆ ಪೋಲೀಸ್‌ಪಡೆ ಹೊರಟು ಹೋಯಿತು.

" ಸರಬರಾಯಿ ಸುದ್ದಾ ಮಾಡಗೊಡಲಿಲ್ಲಲ್ಲಾ....ಇಂಥವರೂ ಇರುತಾರೇನಪಾ ಪೋಲೀಸ್ ಖಾತೇದಾಗ ? " ಎಂದು ಆಶ್ಚರ್ಯದಿಂದ ನುಡಿದ ಸಿದಗೌಡ.

" ಎಲ್ಲಾರೂ ಹೊಡೆಯಪ್ಪಗಳೇ ಇರುತಾರೇನೋ ನಿನ್ನ ಹಂಗ ? ಚಲೋ ಜನರೂ ಇರುತಾರ, " ಎಂದ ಧರ್ಮಣ್ಣಾ.

" ಇವ ಯಾರೋ ಹೊಸದಾಗಿ ಬಂದಿರಬೇಕು. ಇನ್ನs ಏನೂ ಕಲಿತಿಲ್ಲ ಪೋಲೀಸ್ ಖಾತೆಯ ವಿದ್ಯಾ ! " ಎಂದು ಸಿದಗೌಡ ನಗುತ್ತ ನುಡಿದ.

" ಇವ ಪ್ರಾಮಾಣಿಕನಿದ್ದದ್ದರಿಂದs ಕಾಮಣ್ಣಾನನ್ನು ಹಿಡಕೊಂಡು ಹೋದ. ಲಂಚಬಡಕ ಆಗಿದ್ದರ ಹಿಂಗಾಗತಿತ್ತೇನೋ ? ನೂರಾರು ರೂಪಾಯಿ ಕೊಟ್ಟು ತಾನೂ ಪಾರಾಗಿ ಆ ಪುಂಡರನ್ನೂ ಬಿಡಿಸಿಕೊಂಡು ಹೋಗುತಿದ್ದ ಕಾಮ್ಯಾ.... "

" ಹೂಂ. ಆದದ್ದೆಲ್ಲಾ ನೆಟ್ಟಗs ಆತು.... " ಎಂದ ಸಿದಗೌಡ.

ಕಾಮಣ್ಣಾನನ್ನೂ ಅವನ ಗುಂಪಿನವರನ್ನೂ ಪೋಲೀಸರು ಬಂಧಿಸಿದ ವಾರ್ತೆ ತಿಳಿಯುತ್ತಲೂ ಮರಿಯಪ್ಪನಿಗೆ ಬಲವಾದ ಆಘಾತವಾದಂತಾಯಿತು. ಆತ ' ದೊಡ್ಡ ಸಾಹೇಬ ' ರ ಹತ್ತಿರ ಧಾವಿಸಿ ಹೋಗಿ ಅವರನ್ನೆಲ್ಲ ಉಳಿಸಲು ಯತ್ನಿಸಬೇಕೆಂದು ಕೇಳಿಕೊಂಡ. ' ದೊಡ್ಡ ಸಾಹೇಬ ' ರು ಅವನಿಗೆ ಒಳಿತಾಗಿ ಛೀ ಥೂ ಎಂದು, ಮತ್ತೊಮ್ಮೆ ತಮ್ಮನ್ನು ನೋಡಲು ಬರಬಾರದೆಂದು ಎಚ್ಚರ ಕೊಟ್ಟು ಅಟ್ಟಿಬಿಟ್ಟರು.

ಮಾರನೆಯ ದಿನ ಕಾಮಣ್ಣಾ ಮೊದಲಾದವರು ಜಾಮೀನುಗಳ ಮೇಲೆ ಬಿಡುಗಡೆ ಹೊಂದಿ ಹಳ್ಳಿಗೆ ಬಂದರು.

ಅಂದಿನಿಂದ ಕಾಮಣ್ಣಾನೂ ಭೀಮಪ್ಪನಂತೆ ಮನೆ ಹಿಡಿದು ಕುಳಿತುಕೊಳ್ಳಬೇಕಾಯಿತು. ಭಟ್ಟಿ ಸೆರೆಯ ಕಾಯಕವನ್ನು ತಾತ್ಪೂರ್ತಿಕವಾಗಿಯಾದರೂ ನಿಲ್ಲಿಸಲೇಬೇಕಾಗಿ ಬಂದಿತು. ಎರಡು ದಿನ ಕಳೆದ ಬಳಿಕ ರಿಜರ್ವ್ ಪೋಲೀಸ್ ಪಡೆಯೊಂದು ಬಂದು ಹಳ್ಳಿಯ ಹತ್ತಿರದ ಹೊಲವೊಂದರಲ್ಲಿ ಡೇರಾ

ಹೊಡೆದು ತಳವೂರಿತು. ಅಕ್ರಮ ಮದ್ಯ ತಯಾರಿಕೆಯನ್ನು ಪೂರ್ಣವಾಗಿ ನಿಲ್ಲಿಸಲೆಂದೇ ಆ ಪಡೆಯ ವ್ಯವಸ್ಥೆಯಾಗಿತ್ತು. ಪೋಲೀಸರನ್ನೂ ಕಾಂಗ್ರೆಸ್ಸಿಗರನ್ನೂ ಸರಕಾರವನ್ನೂ ಶಪಿಸುತ್ತ ಕಾಮಣ್ಣ ಮನೆಯಲ್ಲಿಯೇ ಚಡಪಡಿಸುತ್ತ ಕುಳಿತುಕೊಂಡ. ಕುಡಿತದ ದುರಭ್ಯಾಸದ ದಾಸಾನುದಾಸರಂತಾಗಿದ್ದ ಯಸನೋವಪ್ಪ ಭೀಮಪ್ಪ ಮೊದಲಾದವರೆಲ್ಲ ಬೆಂಕಿಯಲ್ಲಿ ಬಿದ್ದವರಂತೆ ತಳಮಳಿಸತೊಡಗಿದರು. ಸೆರೆಗೆ ಬದಲಾಗಿ ಸ್ಪಿರಿಟಿನ ಸೇವನೆಗಾರಂಭವಾಯಿತು. ಆದರೆ, ಸ್ಪಿರಿಟು ದೊರಕಿಸುವುದು ಅಷ್ಟೇನೂ ಸುಲಭವಾಗಿರಲಿಲ್ಲ. ಅದರಿಂದ ಅಂಥ ಅಮಲೂ ಆಗುತ್ತಿರಲಿಲ್ಲ. ಕುಡುಕರೆಲ್ಲ ಸಾಯಲಾದವರಂತೆ ನರಳಲಾರಂಭಿಸಿದರು.

## ಹತ್ತೊಂಬತ್ತು

ಐದು ತಿಂಗಳುಗಳು ಕಳೆದು ಹೋದ ಬಳಿಕ, ಒಂದು ದಿನ ಬೆಳಗ್ಗೆ ಭೀಮಪ್ಪ ಹಾಸಿಗೆಯಿಂದೆದ್ದು ಬಂದು ಪಡಸಾಲೆಯಲ್ಲಿ ಕುಳಿತಿದ್ದ ಹಾಗೆ ಕಾಮಣ್ಣ ಅವನನ್ನು ಕಾಣಲು ಬಂದ. ಐದು ತಿಂಗಳುಗಳ ಅವಧಿಯಲ್ಲಿ ಅವರಿಬ್ಬರೂ ಪರಸ್ಪರರನ್ನು ಭೆಟ್ಟಿಯಾದುದು ಒಂದೆರಡು ಬಾರಿ ಅಷ್ಟೆ. ಗುಡಿಸಲಿಗೆ ಬೆಂಕಿ ಹಚ್ಚಿದ ಮೊಕದ್ದಮೆ ಸೆಶನ್ಸ್‌ಗೆ ಹೋದ ಬಳಿಕ ವಕೀಲರನ್ನು ನಿಯಮಿಸಿ ರಕ್ಷಣೆಯ ವ್ಯವಸ್ಥೆ ಮಾಡಲೆಂದು ಕಾಮಣ್ಣ ಭೀಮಪ್ಪನನ್ನು ಕಂಡಿದ್ದ. ವಕೀಲರ ಫೀಜಿಗೆ ಮುನ್ನೂರು ರೂಪಾಯಿ ಬೇಕೆಂದು ಕಾಮಣ್ಣ ಕೇಳುತ್ತಲೂ ಭೀಮಪ್ಪ ಮರುಮಾತನಾಡದೆ ನೂರು ರೂಪಾಯಿಗಳ ಮೂರು ನೋಟುಗಳನ್ನು ಅವನ ಕೈಗಿತ್ತು ಕಳಿಸಿದ್ದ. ಅನಂತರ ಆತ ಕಾಮಣ್ಣನನ್ನು ಕಂಡಿರಲಿಲ್ಲ.

" ಎದ್ದೇನ ಭೀಮಾ ? " ಎನ್ನುತ್ತ ಕಾಮಣ್ಣ ಬಂದು ಕಂಬಳಿಯನ್ನೆಳೆದು ಅದರ ಮೇಲೆ ಕುಳಿತುಕೊಂಡ.

ಭೀಮಪ್ಪ ಬಾಯಿ ತೆರೆಯಲಿಲ್ಲ.

" ಇವತ್ತು ಖಟ್ಲೆಯ ಚೌಕಸಿ ಸುರುವಾಗುತ್ತೈತಲ್ಲಾ ಭೀಮಾ ? "

" ಹುಂ, " ಎಂದ ಭೀಮಪ್ಪ.

" ಲಗೂ ಎದ್ದು ಉಂಡು ತಯಾರಾಗು. ಈಗ ಹೋಗಬೇಕಲ್ಲ ಗಾಡಿಗೆ. "

" ಹುಂ, " ಎಂದ ಭೀಮಪ್ಪ.

" ನಾ ಮಾಡೂದೆಲ್ಲಾ ಮಾಡೀನಪಾ. ಏನೂ ಅಂಜಬೇಕಾಗಿಲ್ಲ. ಎಲ್ಲಾರನ್ನೂ ನಿರ್ದೋಷಿಗಳಂತ ಬಿಡಿಸುತೀನಂತ ಟೊಪಿಗೀ ವಕೀಲರೂ ಭರೋಸೆ ಕೊಟ್ಟಿದಾರ. "

" ಹುಂ, " ಎಂದ ಭೀಮಪ್ಪ.

" ಅವರೇನು ಮಾಡೂ ಪ್ರಯತ್ನ ಮಾಡುತಾರಪಾ. ನಾವೂ ಅಲ್ಪ ಸ್ವಲ್ಪ ಮಾಡಾಕ ಬೇಕು. ಸರಕಾರಿ ವಕೀಲನ್ನ ಕಿಸೇಕ್ಕ ಹಾಕಿಕೊಂಡರ ಕೆಲಸ ಸಾಧಿಸುತ್ತೈತಿ. "

" ಹುಂ, " ಎಂದ ಭೀಮಪ್ಪ.

" ಹಂಗs ಜ್ಯೂರಿಗಳಿಗೂ ಅಷ್ಟಿಷ್ಟು ಕೊಟ್ಟಿವಂದರ ಹುಡುಗರು ಬಿಡುಗಡೆಯಾಗವರs ಅಂತ ತಿಳಕೋ ... "

" ಹುಂ, " ಎಂದ ಭೀಮಪ್ಪ.

" ಯಾಕೋ, ಬರೀ ಹುಂ ಅಂತೀ ಮೂಕನಂಗ ? "

ಭೀಮಪ್ಪ ತಲೆಯೆತ್ತಿ ಕಾಮಣ್ಣನನ್ನು ವಿಲಕ್ಷಣವಾಗಿ ದಿಟ್ಟಿಸುತ್ತ ಹೇಳಿದ:

" ಮೂಕ ? ಹುಂ. ಮೂಕನs ಆಗೀನಿ ನಾ. "

" ಹಾಂ ? "

" ನಾ ಏನಂತ ಮಾತಾಡಲಿ ನಿನ್ನ ಸಂಗಾತ? ಮಾತಾಡೂದೆಲ್ಲಾ ಎಂದೋ ಮುಗಿದೈತಿ.... "

" ಹಾಂ ? " ಎಂದು ಬೆಚ್ಚಿಬಿದ್ದು ಕೇಳಿದ ಕಾಮಣ್ಣ.

" ಹುಂ. ಎಲ್ಲಾ ಎಂದೋ ಮುಗಿದೈತಿ. ಮರಡೀ ಕೆಳಗಿನ ಹೊಲಾ ಉಳಿಸಿಕೊಡುತೀನಂತ ಹೇಳಿ ನನ್ನ ಈ ಖಟ್ಲೆಗಳ ಪಂಜರದಾಗ ಸಿಗಿಸಿದಿ. ಆ ವಕೀಲ, ಈ ವಕೀಲ, ಅವಗ ಇವಗ ಅಂತ ಹೇಳಿ ನನ್ನ ರುಪಾಯಿ ಎಲ್ಲಾ

ಎಬ್ಬಿಸಿದಿ. ಆ ಸಾಬ ಈ ಸಾಬ ಅಂತ ಹೇಳಿ ನನ್ನ ಹಳ್ಳಕ್ಕ ಕೆಡವಿದಿ. ನನ್ನ ಹುಡುಗರನ್ನ ಜೇಲಿಗೆ ಕಳಿಸಿ ಕುಂತಿ. ಈಗ ಮತ್ತ ಜ್ಯೂರಿ ಜಜ್ಜಿ ಅಂತ ಸುಳ್ಳು ಹೇಳಿ ರೊಕ್ಕಾ ಕೇಳಾಕ ಬಂದೀದಿ. ನನ್ನ ಹಂತೀಲಿ ಈಗ ವಿಷಾ ಕುಡಿಯಾಕ ಸುದ್ಧಾ ಒಂದು ದಮಡಿ ಇಲ್ಲ. ತಿಳೀತೇನ ?"

"ಖಟ್ಲೀ ಮುಗೀಬೇಕಾದರ ಒಂದು ವಾರ ಆದರೂ ಬೇಕಾಗುತ್ತೈತಿ. ಅಲ್ಲೀತನಕ ಖರ್ಚಿಗಾದರೂ ಬೇಕಲ್ಲ ಮಾರಾಯಾ ?"

"ಖಟ್ಲೀದ ಮ್ಯಾಲ ನನಗೇನ ಭರೋಸೆ ಇಲ್ಲ. ಹುಡುಗರಿಗೆ ಶಿಕ್ಷಾ ಆಗುತ್ತೈತನ್ನೂದು ನನಗ ಗೊತ್ತs ಐತಿ. ಅದನ್ನು ನೋಡೂದಕ್ಕ ಬರೂ ಮನಸೂ ನನಗಿಲ್ಲ."

"ಏ, ಹೀಂಗ ಮಾಡಿದರ ಹ್ಯಾಂಗ ? ಕಡೀತನಕ ಬಡಿದಾಡಬೇಕಪಾ. ಆಶಾ ಬಿಡಬಾರದು...."

"ನಿನ್ನಂಥಾವ್ರು, ಆ ಸಿಂದೀ ಅಂಗಡಿಯ ಮರ್‍ಯಾನಂಥಾವ್ರು ಇದೀರಲ್ಲಾ ನಮ್ಮನ್ನ ಉಳಿಸೂದಕ್ಕ ! ನಿಮ್ಮಂಥವರನ್ನ ನಂಬೂದಂದರ ಹುಲೀ ತೋಳಾ ನಂಬಿದಂಗ.... "

ಕಾಮಣ್ಣಾ ಎದ್ದು ಹೊರಡುತ್ತ ಕೇಳಿದ:

"ನೀ ಇವತ್ತು ಬರ್‍ತೀಯೋ ಇಲ್ಲೋ ಹೇಳಿಬಿಡು. ನಾನಂತೂ ಹೊಂಟಿದ್ದೀನಿ. ಒಂದು ಕೆಲಸ ಹಿಡಿದ ಮ್ಯಾಲ ಕಡೀತನಕಾ ಬಿಡಾಂವನಲ್ಲ ನಾ.... "

"ಹೂಂ. ಬರೋಬರಿ ಹೇಳಿದ್ಯೋ ಕಾಮ್ಯಾ. ಕಡೀತನಕಾ.... ಸಾಯೂತನಕಾ ಬಿಡಾಂವಲ್ಲ ನೀ. ಕೇಳಿದೇನs ಸಿದ್ದೀ ? ನಾ ಸತ್ತಮ್ಯಾಲs ನನ್ನ ಸುಲಿಯೂದನ್ನ ಬಿಡಾಂವ ನೋಡು ಈ ಕಾಮ್ಯಾ...."

ಕಾಮಣ್ಣಾ ಅವಸರದಿಂದ ಹೊರಟುಹೋದ.

ಸಿದ್ದವ್ವ ಬಾಗಿಲಲ್ಲಿ ಬಂದು ನಿಂತು ಕಳವಳ ತುಂಬಿದ ಧ್ವನಿಯಲ್ಲಿ ನುಡಿದಳು:

"ಹಿಂಗ್ಯಾಕ ಮಾತಾಡಾಕ ಹತ್ತೀದೀ ಹುಚ್ಚನಂಗ ? ಏಳಲಾ ಖಟ್ಲೀಕ ಹೋಗೂದಿಲ್ಲೇನ ?"

"ಗಾಡಿಗೆ ರೊಕ್ಕ ಎಲ್ಲ್ಯದಾವ ?"

"ನಾ ಎಲ್ಲಾದ್ರೂ ಇಸಗೊಂಡು ಬಂದು ಕೊಡ್ತೀನಿ ಏಳ. ಉಣ್ಣೋಳ."

"ಗಂಟಲದಾಗ ರೊಟ್ಟಿ ಆದರೂ ಹೆಂಗ ಇಳೀಬೇಕs ಸಿದ್ದೀ ?"

ಸಿದ್ದವ್ವನ ಕಣ್ಣುಗಳಲ್ಲಿ ಕಂಬನಿಗಳು ಚಿಮ್ಮಿ ಬಂದುವು.

"ಏಳ, ಇವತ್ತ ನಾನೂ ಬರ್ತೀನಿ. ನನ್ನ ಮಕ್ಕಳನ್ನ ನೋಡಿ ಎಷ್ಟ ದಿನಾ ಆತು....ಪಾಪ....ಎಷ್ಟು ಸೊರಗ್ಯಾರೋ ಏನೋ...."

"ಅವರಿಗೇನ ಧಾಡಿಯೇಳ ಸೊರಗಾಕ. ಜೇಲಿನಾಗೇನ ಅವರನ್ನ ಉಪಾಸ ಇಡೂದಿಲ್ಲ...."

"ಆದರೂ ಜೇಲಂದರ ಜೇಲs. ಮನಿಯ ಹಂಗ ಹೆಂಗಾದೀತು?"

"ನೀ ಅನ್ನೂದು ಖರೇ ಸಿದ್ದೀ. ಇನ್ನೇನ ಈ ಖಟ್ಲೀದಾಗ ಅವರಿಗೆ ಬಿಡುಗಡೆಯಾದೀತಂತ ಅನಿಸೂದಿಲ್ಲ ನನಗ. ಆ ಗಿರ್ಯಾನ ಕಡೆ ಸಾಕ್ಷೀ ಅದಾರ, ಎಲ್ಲಾ ಅದಾರ. ನಮ್ಮ ಕಡೆ ಏನೈತಿ? ರೊಕ್ಕ ಕೂಡಾ ಇಲ್ಲ. ಇನ್ನ ಅವರು ಉಳಿಯೂದು ಹೆಂಗ?"

"ಹೋಗಿ ಭೆಟ್ಟಿಯಾಗೆರೆ ಬರೂಣು."

"ಭೆಟ್ಟಿಯಾದರ ಮತ್ತ ಕಿಚ್ಚು ಹೆಚ್ಚಾಗುತ್ತೈತಿ ಸಿದ್ದೀ. ಇಲ್ಲಿಯ ತನಕ ಆದದ್ದೆಲ್ಲಾ ನೋಡಿದ್ದು ಸಾಕಾಗಲಿಲ್ಲೇನ? ಆ ಭೋಸಡಿ ಬಾಲೀನ ಇಲ್ಲಿ ಬರಗೊಡಬಾರದಂತ ಮಾಡಿದ್ದಿನಲ್ಲಾ....ನಮ್ಮ ಕಣ್ಣೆದುರೇ ಆಕಿ ಆ ಗಿರ್ಯಾನ ಸಂಗಾತ ಸಂಸಾರ ಮಾಡಾಕ ಹತ್ತಿದಾಳ. ಹೊಲದ ಖಟ್ಲೀನೂ ನಮ್ಮ ವಿರುದ್ಧ ಆತು. ಇನ್ನs ಈ ಮೂರು ಖಟ್ಲೆ ಉಳದಾವು. ಇವೆಲ್ಲಾದರಾಗೂ ಹುಡುಗರಿಗೆ ಎಷ್ಟೆಷ್ಟು ವರಸ ಶಿಕ್ಷಾ ಆಗುತ್ತೈತ್ಯೋ ಶಿವನs ಬಲ್ಲ. ಅವರ ಸಂಗಾತ ನನ್ನ ಸುದ್ಧಾ ಪೋಲೀಸರು ಹಿಡಕೊಂಡು ಹೋಗಿದ್ದರ ಎಷ್ಟು ಚಲೋ ಆಗುತಿತ್ತು....ಅಪಮಾನ ಎಲ್ಲಾ ಸಹಿಸುತಾ ಇದs ಊರಾಗ ಈ ಮಂದಿಯ ಮುಂದs ಇರುವ ಸಂಕಟಾದರೂ ತಪ್ಪುತಿತ್ತು. ಸಿದ್ದೀ........ ಸಿದ್ದೀ...."

"ಏಳು ಹೋಗೂಣು," ಎಂದಳು ಸಿದ್ದವ್ವ.

ಭೀಮಪ್ಪ ಎದ್ದು ಮುಖ ತೊಳೆದುಕೊಳ್ಳತೊಡಗಿದ.

ಅದೇ ಸಮಯದಲ್ಲಿ—

ಗಿರಿಯನ ಮನೆಯಲ್ಲಿ, ಬಾಲಿಯೂ ಮುಖ ತೊಳೆದುಕೊಳ್ಳುತ್ತ ಬಚ್ಚ

ಲಿನ ಕಟ್ಟೆಯ ಮೇಲೆ ಕುಳಿತಿದ್ದಳು.

ಎತ್ತುಗಳ ಮೈ ತಿಕ್ಕುತ್ತಲಿದ್ದ ಗಿರಿಯ ಅವಳನ್ನು ನಗುವ ಕಂಗಳಿಂದ ದಿಟ್ಟಿಸುತ್ತ ಅಣಕದ ಸ್ವರದಲ್ಲಿ ನುಡಿದ:

" ಎಷ್ಟದು ಮಾರೀ ತೋರಿಯೂದು ! ಸಾಕೇಳ. ಯಾರರೆ ನಕ್ಕಾರು ನೋಡಿದವರು. "

" ಯಾಂವ್ರೋ ಅಂವಾ ನನ್ನ ನೋಡಿ ನಗುವ ಗಂಡಸು ? " ಎಂದಳು ಬಾಲಿ.

ಒಲೆಯೆಮುರಿಗೆ ಕುಳಿತು ಜೆಂಕಿ ಕಾಯಿಸುತ್ತಿದ್ದ ಮುದುಕ ನಸುನಗೆಯೊಂದಿಗೆ ನುಡಿದ:

" ಇನ್ನ್ಯಾವ ಗಂಡಸು ಬರ್ತಾನs ನಿನ್ನ ನೋಡಾಕ ? ಇಲ್ಲೇ ಅದಾನಲ್ಲಾ ನಿನ್ನ ಗಂಡ ! "

ಸೆರಗಿನಿಂದ ಮುಖವನ್ನೊರೆಸಿಕೊಳ್ಳುತ್ತ ಬಾಲಿ ಬಚ್ಚಲಿನಿಂದ ಈಚೆಗೆ ಬಂದು— " ಐ ನನ್ನ ಗಂಡs ! " ಎಂದು ಒಯ್ಯಾರದಿಂದ ನುಡಿದು ಕಿಲಕಿಲನೆ ನಕ್ಕಳು.

" ಕಿಸ್ ಕಿಸ್ ಅಂತ ನಕ್ಕೊಂತ ಕುಂದ್ರಬ್ಯಾಡ ಬಾಲೀ. ಗಾಡಿಗೆ ಹೊತ್ತಾತು. ರೊಟ್ಟೀ ಗಂಟು ಕಟ್ಟು, " ಎಂದ ಗಿರಿಯ.

" ಯಾಕೋ ಬಾಳ ಜೋರು ನಡಿಸೀದೀ ? ಹೊತ್ತಾದರ ನಿನ್ನಷ್ಟಕ್ಕ ನೀ ಹೊಂಟು ಹೋಗು. "

" ನೀ ಬರೂದಿಲ್ಲಾ ? "

" ನಾ ಬರ್ತೀನಿ ಸಂಜೀ ಗಾಡಿಗೆ, ಮೆಣಸಿನಕಾಯಿ ತಗೊಂಡು. "

" ಇವೊತ್ತಾದರೂ ಆ ಸುಡುಗಾಡ ಯಾಪಾರಾ ಬಿಡಬಾರದ ಬಾಲೀ ?"

" ಸುಡಗಾಡ ಯಾಕಾದೀತೋ ಅದು, ನನ್ನ ಸರದಾರಾ ? ಇನ್ನೊಂದ್ಯಾಡ್ಡ ವರಸ ಯಾಪಾರ ಮಾಡಿದಿನಂದರ ಮುಂದ ಇಬ್ಬರೂ ಸುಕದಿಂದ ಬಾಳೇ ಮಾಡೇವು. ಮೊದಲು ನೀ ಮಾಡಿದ ಸಾಲಾ ಅಷ್ಟು ತೀರಿಸಬೇಕಲ್ಲಾ? ಆ ಧರ್ಮಣ್ಣಾಂದೆರೆ ಏನ ಭರೋಸೆ ? ಈ ಸಾವುಕಾರ ಮಂದೀನ್ನ ನಂಬಿದವರಿಲ್ಲಾ ಹಾಳಾಗೇ ಹೋಗಿದಾರ. ಭೀಮುನ್ನ ಬಿಡಿಸಿದಂಗ ನಿನ್ನೂ ಅವ ಹೊಲದಿಂದ ಬಿಡಿಸಾಕಿಲ್ಲಂತ ಏನ ನಂಬಿಕಿ ? ಹೊಳೀ ವ್ಯಾಲಿನ ಹೊಲಾ

ಅಂತೂ ಇಂದಿಲ್ಲ ನಾಳೆ ನಿನ್ನ ಕೈ ಬಿಡುತ್ತೈತಿ. ಎರಡೂ ಕಳಕೊಂಡ ಕುಂತ ಮ್ಯಾಲ ತಿಳೀತೈತಿ ನಿನಗ—ಇದೇನ ಸುಡುಗಾಡ ಯಾಪಾರೋ. ಸುಕದ ಯಾಪಾರೋ ಅಂತ.... "

"ಏನರೆ ಹಾಳಾಗಲೀಳ. ಬಾಳ ವಟವಟ ಮಾಡಬ್ಯಾಡ."

"ನಾ ವಟವಟ ಮಾಡಿದರ ನಿನ್ನ ಗಂಟೇನ ಹೋಗುತ್ತೈತಿ? ನಿನ್ನ ಗಂಟಲೇನೂ ನೋಯೂದಿಲ್ಲಲ್ಲಾ?" ಎಂದು ಬಾಲಿ ಧ್ವನಿಯೇರಿಸಿ ನುಡಿದಳು.

"ಇನ್ನೂ ನಿನ್ನ ವಾಂಡತನಾ ಬಿಡಲಿಲ್ಲ ನೀ. ಎಷ್ಟು ಹೇಳಿದ್ರೂ ತಿಳಿಯೂದಿಲ್ಲ. ಬಾರಕೋಲ ಪೆಟ್ಟು ಬಿದ್ದಾಗೂ ನಿನ್ನಂಥಾಕಿಗೆ ಬುದ್ಧಿ ಬರೂದು," ಎಂದು ಗಿರಿಯ ಬೇಸಗದಿಂದ ನುಡಿದ.

ಬಾಲಿ ಸೊಂಟದ ಮೇಲೆ ಕೈಯಿಟ್ಟು ನಿಂತು, ಅವನನ್ನು ತೀಕ್ಷ್ಣದೃಷ್ಟಿಯಿಂದ ನಿಟ್ಟಿಸುತ್ತ ನುಡಿದಳು:

"ನನ್ನಮ್ಯಾಲ ಬಾರಕೋಲು ಎತ್ತುವಷ್ಟು ಸೊಕ್ಕು ಬಂತೇನ ನಿನಗ? ನಾ ಯಾರು ಅನ್ನೂದು ಗೊತ್ತೈತ್ಯೋ ಇಲ್ಲೋ? ಬಿಡು ನೀ ಈ ದಿವಾ ಕೆಲ್ಲಾ. ಏಳು ಕೆರಿಯ ನೀರು ಕುಡಿಸೇನು!"

"ವಾಹವ್ವಾ! ಹೌದೂ ಬಾಲೀ....ಹೌದೂ ಹುಡುಗೀ!" ಎಂದು ನುಡಿದು ಅಜ್ಜ ಗಟ್ಟಿಯಾಗಿ ನಗತೊಡಗಿದ.

"ನೋಡು ಮತ್ತೂ! ಹೆಂಗ ಮಾತಾಡುತಾನ ಸುಮ್ಮಸುಮ್ಮನೂ!" ಉಡಿಕೀ ಮಾಡಿಕೊಂಡಷ್ಟಕ್ಕ ಏನ ಕೊಂಡುಕೊಂಡಂಗ ಮಾಡುತಿಯೇನ? ಬಿಟ್ಟುಬಿಡ ಅದನ್ನೆಲ್ಲಾ.... "

"ನಾ ಬಿಟ್ಟರ ಮತ್ತ ಹೋಗಿ ಬೀಳುವಾಕೇನು ನಿನ್ನ ಅವ್ವನ ಮನಿಯೊಳಗ?"

"ಅವಳ ಹಂತೀಲಿ ಯಾಕ ಹೋಗಲಿ? ಏನೋ ಆವಾಗ ನನಗ ಪೆಟ್ಟಾದಾಗ ನೋಡಾಕಂತ ಬಂದಳು, ಹೋದಳು. ನಾನೇನ ಹೋದೆನೇನ ಅವಳ ಮನಿಗೆ? ಅವಳದಾದ್ರೂ ಹಂಗು ಯಾಕ ನನಗ? ನಂದು ನಾ ದುಡದು ತಿಂತೀನಿ.... "

"ಹೋಗಲಿ ಬಿಡೂ ಬಾಲೀ. ಏನ್ ಜಗಳ ಸುಮ್ಮನೂ!" ಎಂದು

ಅಪ್ಪ ಅವಳನ್ನು ಸಮಾಧಾನಗೊಳಿಸಿದ. ಗಂಡಹೆಂಡಿರಲ್ಲಿ ತಾತ್ಕಾಲಿಕ ಸಂಧಿ ಯಾಯಿತು. ಬಾಲಿಯೂ ಗಿರಿಯನ ಜೊತೆಗೆ ನಗರಕ್ಕೆ ಹೊರಟಳು.

ಮೊಕದ್ದಮೆ ಮೂರು ದಿನಗಳ ವರೆಗೆ ನಡೆದು, ನಾಲ್ಕನೆಯ ದಿನ ತೀರ್ಪು ಹೊರಬಿತ್ತು.

ನಾಲ್ವರು ಆಪಾದಿತರೂ ದೋಷಿಗಳೆಂದು ಜ್ಯೂರಿಗಳು ಒಮ್ಮತದಿಂದ ನಿರ್ಣಯವಿತ್ತರು.

ಪ್ರತಿಯೊಬ್ಬರಿಗೂ ನಾಲ್ಕು ವರ್ಷಗಳ ಕಠಿಣ ಶಿಕ್ಷೆ ವಿಧಿಸಲ್ಪಟ್ಟಿತು.

## ಇಪ್ಪತ್ತು

ಮುಳುಗುತ್ತಿದ್ದ ಸೂರ್ಯನ ಹೊನ್ನ ಕಿರಣಗಳಲ್ಲಿ ಬಂಗಾರದ ಬಣ್ಣ ತಳೆದು ವಿಜೃಂಭಿಸುತ್ತಿದ್ದ ಮರಡಿಯ ಕೆಳಗಿನ ಹೊಲದ ಮಣ್ಣನ್ನು ಶೂನ್ಯ ದೃಷ್ಟಿಯಿಂದ ನಿಟ್ಟಿಸುತ್ತ ಒಡ್ಡಿನ ಮೇಲೆ ಕುಳಿತುಕೊಂಡಿದ್ದ ಭೀಮಪ್ಪ. ವಸಂತಕಾಲದ ಸಂಜೆಯಾದುದರಿಂದ ಸುತ್ತಲಿನ ಸೃಷ್ಟಿಯೆಲ್ಲವೂ ತುಂಬ ಮನೋಹರವಾಗಿ ಮೆರೆಯುತ್ತಿತ್ತು. ಆಕಾಶದಲ್ಲಿ ಅಲ್ಲಲ್ಲಿ ಹಲವು ಮೋಡ ಗಳು ಚಿತ್ರ ವಿಚಿತ್ರಾಕಾರ ತಳೆದು ನಿಂತಿದ್ದುವು. ನಸುಶೀತಲವಾದ ಗಾಳಿ ಮರಡಿಯ ಮೇಲಿಂದ ಹರಿದು ಬಂದು ಮಂದಮಂದವಾಗಿ ಸುಳಿದಾಡುತ್ತಿತ್ತು. ಹಕ್ಕಿಗಳೆರಡು ರೆಕ್ಕೆ ಬೀಸುತ್ತ ಉಲ್ಲಾಸದಿಂದ ಹಾರುತ್ತ ನಡೆದಿದ್ದುವು. ಇದಾ ವುದನ್ನೂ ಗಮನಿಸುವ ಸ್ಥಿತಿಯಲ್ಲಿರಲಿಲ್ಲ ಭೀಮಪ್ಪ. ಅವನ ದೃಷ್ಟಿ, ಹೊಲದ ಮಣ್ಣನ್ನು ನಿಟ್ಟಿಸುತ್ತಿದ್ದ ಹಾಗೆ, ಅವನ ಮನಸ್ಸಿನ ಕಣ್ಣುಗಳೆದುರಿಗೆ, ನಲ ವತ್ತು ವರ್ಷಗಳ ಅವಧಿಯಲ್ಲಿ ನಡೆದಿದ್ದ ಘಟನೆಗಳೆಷ್ಟೋ ಮೂಡಿ ಮಾಯ ವಾಗುತ್ತಿದ್ದುವು.

ನಲವತ್ತು ವರ್ಷ........

ಅಲ್ಪ ಅವಧಿಯೇನೂ ಅಲ್ಲ ಅದು.

ಒಂದೇ ಸಮನೆ, ನಲವತ್ತು ವರ್ಷಗಳ ವರೆಗೆ ತಮ್ಮ ಮನೆತನದ್ದಾ

ಗಿತ್ತು ಈ ಮಣ್ಣು. ತನ್ನ ತಂದೆ, ತಾಯಿ, ಚಿಕ್ಕಪ್ಪ, ದೊಡ್ಡಪ್ಪ, ಅವರ ಹೆಂಡಿರು, ಮಕ್ಕಳು—ಎಷ್ಟೊಂದು ಜನರ ಬೆವರು ಸುರಿದಿತ್ತು ಈ ಮಣ್ಣಿನಲ್ಲಿ. ಕೇವಲ ಪಡಭೂಮಿಯಾಗಿ ಬಂಜರು ಬಿದ್ದಿದ್ದ ಈ ಹೊಲವನ್ನು ಕೈಗೆ ತೆಗೆದು ಕೊಂಡು ವರ್ಷಾನುವರ್ಷ ದುಡಿದು ಅದರಲ್ಲಿನ ಹರಳು ಕಲ್ಲುಗಳನ್ನೆಲ್ಲ ತೆಗೆದು ಹದನುಗೊಳಿಸಿ, ಫಲವತ್ತಾದ ಭೂಮಿಯನ್ನಾಗಿ ಮಾಡಿದ್ದರು ತನ್ನ ಹಿರಿಯರು. ಅವರ ತರುವಾಯ ತಾನು, ತನ್ನ ಹೆಂಡತಿ, ತನ್ನ ಮಕ್ಕಳು. ತಮ್ಮ ದುಡಿತವಾದರೂ ಏನು ಕಡಿಮೆಯದೇ ?

ಆ ದುಡಿತವೆಲ್ಲಾ ನಿಷ್ಪ್ರಯೋಜಕವಾಯಿತು. ಹೊಲ ತನ್ನ ಕೈ ಬಿಟ್ಟಿತು.

ಅದನ್ನುಳಿಸಿಕೊಳ್ಳಲೆಂದು ತಾನು ಮಾಡಿದ ಯತ್ನ........ಮುದುಕಿಯ ಕೊಲೆ........ಕೊಲೆ........

ಆದರೂ ಹೊಲ ಉಳಿಯಲಿಲ್ಲ. ಕೊಲೆಯಂಥ ಹೊಲೆಗೆಲಸದಿಂದ ಬಂದ ಹಣವೂ ಉಳಿಯಲಿಲ್ಲ... ಏನು ಮಾಡಿದರೆ ತನ್ನ ಸಿಟ್ಟು ಹೋದೀತು ? ಏನು ಮಾಡಿದರೆ ತನಗೆ ಸಮಾಧಾನವಾದೀತು ?

ಒಂದು ಕೊಲೆಯನ್ನಂತೂ ಮಾಡಿಯಾಗಿದೆ. ಇನ್ನೊಂದು ಕೊಲೆಗೆ ಕೈ ಹಾಕುವುದೇ ? ಧರ್ಮಣ್ಣನ ಕೊಲೆ....ಕೊಲೆ ?

ತಾನಿನ್ನು ಬದುಕುವುದಾದರೂ ಹೇಗೆ, ಈ ಹಾಳು ಮೋರೆಯನ್ನು ಹೊತ್ತುಕೊಂಡು ?

ಧರ್ಮಣ್ಣನ ಕೊಲೆ ? ಫಾಸೀ ? ಫಾಸೀ ?

ನೇಣುಗಂಬ....

ಉರುಳು....

ಮಕ್ಕಳಂತೂ ಸೆರೆಮನೆಯಲ್ಲಿ. ಸಿದ್ದಿಯ ಗತಿಯೇನಾದೀತು ?

ಅವಳಿಗೇನಂತೆ ಧಾಡಿ ! ಎಲ್ಲಾದರೂ ಕೂಲಿ ಮಾಡಿಕೊಂಡು ತಿಂದಾಳು....

ಕೊಲೆ ? ಧರ್ಮಣ್ಣನ ಕೊಲೆ ?

................................ ?

ಹಾಳಾಗಿ ಹೋಗಲಿ. ಅದಾವುದೂ ಬೇಡ. ನಿನ್ನೆಯೆ ನಿರ್ಧರಿಸಿದಂತೆ

ಈ ಊರು ಬಿಟ್ಟು ಹೊರಡುವುದೇ ಮೇಲು.

ಇಲ್ಲೇ ಇದ್ದುಕೊಂಡು ಕೂಲಿನಾಲಿ ಮಾಡಿ ಬದುಕಿದರಾಯಿತು,—ಮಕ್ಕಳು ಬಿಡುಗಡೆಯಾಗುವ ವರಗೆ—ಎನ್ನುತ್ತಾಳೆ ಸಿದ್ದಿ.

ಇಲ್ಲೇ ಇರುವುದೇ, ಈ ಜನರ ಎದುರಿಗೇ ?

ಇದುವರೆಗೆ ಬೇರೆಯವರ ಹೊಲಗಳಿಗೆ ಎಂದೂ ಕೂಲಿಗೆ ಹೋದವರಲ್ಲ ತಾವು. ತನ್ನ ತಂದೆ, ತಾಯಿ, ಚಿಕ್ಕಪ್ಪ, ದೊಡ್ಡಪ್ಪ ಯಾರೂ ಕೂಲಿ ಮಾಡಿದವರಲ್ಲ.

ತಮ್ಮ ಹೊಲದಲ್ಲಿಯೆ ಬೆವರಿಳಿಸಿ ದುಡಿದು ಮರ್ಯಾದೆಯಿಂದ ಬದುಕಿದವರು ಎಲ್ಲರೂ. ಈಗ ಈ ಹೊಲ ತಮ್ಮದಲ್ಲ. ತಮ್ಮದೆಂಬುದೇನೂ ಇಲ್ಲ ಈ ಊರಲ್ಲಿ.

ಯಾವ ಮೋರೆಯಿಂದ ಕೂಲಿಗೆ ಹೋಗುವುದು ಬೇರೆಯವರ ಹೊಲಗಳಿಗೆ ?

ಮುದುಕಿಯ ಹಣ ಕೈಗೆ ಬಂದ ಬಳಿಕ, ಏಳೆಂಟು ತಿಂಗಳುಗಳ ವರೆಗೆ ಊರಲ್ಲಿ ಹುಲಿಯಂತೆ ಮೆರೆದ ತಾನು, ಊರ ಜನರನ್ನೆಲ್ಲ ಕಸದಂತೆ ಕಂಡ ತಾನು, ಈಗ ಅವರಲ್ಲೇ ಕೂಲಿಗೆ ಹೋಗುವುದೆಂದರೇನು !

ತನ್ನ ಕುಡಿತ....ತನ್ನ ಜಂಬದ ಮಾತುಗಳು....ತನ್ನ ಅಹಂಕಾರ....ತನ್ನ ಠೀವಿ....

" ಇಬ್ಬರು ಮಕ್ಕಳನ್ನೂ ಗೂಳಿ ಬಿಟ್ಟಂಗ ಬಿಟ್ಟೇನಿ. ಹೆಂಡರಿಗೆ ಗಟ್ಟಿ ಬೀಜ ಬೇಕಾದವರು ಕರಕೊಂಡು ಹೋಗಲಿ.... "

ಎಂಥ ಭಯಂಕರ ಮಾತು....

ಗೂಳಿಗಳು ಸೆರೆಮನೆಗೆ ಹೋಗಿ ಬಿದ್ದುವು. ತನ್ನ ಅಹಂಕಾರ ನುಚ್ಚುನೂರಾಯಿತು.

ತಾನೇ ಮಾತನಾಡಿದ್ದನೇ ಅಂಥ ಮಾತುಗಳನ್ನು ? ಅಥವಾ ಆಗ ತನ್ನ ಮೈಯಲ್ಲಿ ಭೂತಸಂಚಾರವೇನಾದರೂ ಆಗಿದ್ದಿತೇ ?

ಭೂತ....ಮುದುಕಿಯ ಭೂತ....

ಅಂಽಯ್ ಅಂಽಯಂಯ್ ಆಂಽಯ್....

ಛೆ. ತಾನಿನ್ನು ಈ ಊರಲ್ಲೇ ಇರುವಂತಿಲ್ಲ....

ಕಾಮಣ್ಣ ಹೇಳುತ್ತಿದ್ದ ನಿನ್ನೆ: "ಪೋಲೀಸ್ ಪಾರ್ಟಿ ಹೊರಟ್ಟು ಹೋದ ಬಳಿಕ ಮತ್ತೆ ಭಟ್ಟಿ ಸುರು ಮಾಡೂಣು. ಖಟ್ಲೇದಾಗ ನಮಗೇನೂ ಆಗುವದಿಲ್ಲ. ಏನೋ ನೂರಿನ್ನೂರು ರೂಪಾಯಿ ದಂಡ ಆದರ ಬಹಳ ಆತು."

ಕಾಮಣ್ಣ ಹೇಳುತ್ತಿದ್ದ ಮತ್ತೆ: "ನೀ ಎಲ್ಲಿಗೂ ಹೋಗಬ್ಯಾಡ ಭೀಮಾ. ನಿನ್ನ ಭಟ್ಟಿಯ ಮ್ಯಾನೇಜರ್ ಮಾಡುತೀನಿ. ನಿನ್ನ ಮನಸಿಗೆ ಬಂದಷ್ಟು ಕುಡಿದೀಯಂತೆ. ದಿವಸಕ್ಕ ಮೂರು ರೂಪಾಯಿ ಖರ್ಚಿಗೂ ಕೊಡುತೀನಿ. ನೀಯೇನೂ ಕಾಳಜಿ ಮಾಡಬ್ಯಾಡಾ....

ಅವನ ಭಟ್ಟಿ....ಅವನ ಸೆರೆ....ಅವನು ಕೊಡುವ ಮೂರು ರುಪಾಯಿ !

ಅವನ ಮೋರೆಗಿಷ್ಟು ಬೆಂಕಿ ಬಿತ್ತು. ಇನ್ನು ಅವನ ಸಹವಾಸವೇ ಬೇಡ.

ಕಾಮಣ್ಣನ ಸಹವಾಸ ಬೇಡ. ಧರ್ಮಣ್ಣನ ನೆರೆ ಬೇಡ. ಮರಿಯಪ್ಪನ ದರ್ಶನ ಬೇಡ. ಈ ಊರೇ ಬೇಡ.

ದೂರ ದೂರ....ತನ್ನನ್ನು ಗುರುತಿಸುವವರಾರೂ ಇಲ್ಲದಂಥ ಜಾಗಕ್ಕೆ ಹೋಗಬೇಕು. ದುಡಿದು ತಿನ್ನಬೇಕು.

ನಿನ್ನೆ ತಾನು ನಿರ್ಧರಿಸಿದ್ದೇ ಒಳ್ಳೆಯದು. ಹಾಗೇ ಮಾಡಬೇಕು. ಇವೊತ್ತು ರಾತ್ರೆಯೆ ಇಲ್ಲಿಂದ ಹೊರಟು ಬಿಡಬೇಕು—ಯಾರಿಗೂ ಗೊತ್ತಾಗದಂತೆ.

ಹೊರಡಬೇಕು....ಹೊರಡಬೇಕು....

ಮೇಲಕ್ಕೇಳಲು ಪ್ರಯತ್ನಿಸಿದ ಭೀಮಪ್ಪ. ಯಾರೋ ತನ್ನ ಕಾಲುಗಳೆರಡನ್ನು ಬಿಗಿಯಾಗಿ ಹಿಡಿದುಕೊಂಡಿದ್ದಂತೆ ಭಾಸವಾಯಿತು. ಮರಡಿಯ ಕೆಳಗಿನ ಆ ಹೊಲ....ಆ ಮಣ್ಣು....ತನ್ನದಾಗಿದ್ದ ಆ ಮಣ್ಣು.... "ಹೋಗಬೇಡ ಭೀಮಾ ನನ್ನನ್ನು ಬಿಟ್ಟು," ಎಂದು ಮೂಕವಾಗಿ ಹೇಳುತ್ತ ತನ್ನನ್ನೆಳೆಯುತ್ತಿದ್ದಾಳೆ ಭೂಮಿತಾಯಿ....

ಭೀಮಪ್ಪನ ಕೊರಳುಬ್ಬಿ ಬಂದಿತು. ಎದೆಯ ಅಂತರಾಳದಿಂದ ದುಃಖ ಚಿಮ್ಮಿ ಬಂದಿತು. ಧೋತರದ ಅಂಚನ್ನು ಮುಖಕ್ಕೆಳೆದುಕೊಂಡು ಬಿಕ್ಕಿ ಬಿಕ್ಕಿ ಅಳತೊಡಗಿದ.

ಮರಡಿಯ ಆಚೆಯಿಂದ ಕತ್ತಲೆಯ ಕರಾಳ ಹಸ್ತ ಮೆಲ್ಲಮೆಲ್ಲಗೆ ಮುಂದೆ

ಬಂದು ಹೊಲದ ಮೇಲಾಡತೊಡತ್ತು. ನಡೆಯಲಾರದ ನಿರ್ಬಲ ವ್ಯಕ್ತಿ ನಿಡುಸುಯ್ಯುವಂತೆ ಗಾಳಿ ಸುಳಿಯುತ್ತಿತ್ತು.

ಭೀಮಪ್ಪ ತುಂಬ ಕಷ್ಟದಿಂದ ಎದ್ದು ನಿಂತ. ಯಾರಾದರೂ ತನ್ನನ್ನು ನೋಡುತ್ತಿರುವರೇನೊ ಎಂಬ ಶಂಕೆಯಿಂದ ಸುತ್ತುಮುತ್ತು ದೃಷ್ಟಿ ತಿರುಗಿಸಿದ. ಯಾರೂ ಕಾಣಿಸಲಿಲ್ಲ. ಬಿಸಿಲುಗಾಲದ ಆ ದಿನಗಳಲ್ಲಿ ಹೊಲದಕಡೆ ಯಾರೂ ಸುಳಿಯುತ್ತಿರಲಿಲ್ಲ. ಅಲ್ಲಿ ಯಾರೂ ಇರುವುದಿಲ್ಲವೆಂದೇ, ಕೊನೆಯ ಬಾರಿ ಆ ಹೊಲವನ್ನು ನೋಡಿಕೊಂಡು ಹೋಗೋಣವೆಂದು ಬಂದಿದ್ದ ಭೀಮಪ್ಪ.

ನೋಡಿದುದಾಗಿತ್ತು. ತಾಯ ಬಳಿ ಕುಳಿತು ದುಃಖವನ್ನು ತೋಡಿ ಕೊಳ್ಳುವಂತ ಆ ಭೂಮಿತಾಯ ಸನ್ನಿಧಿಯಲ್ಲಿ ಕುಳಿತು ಕಂಬನಿಗರೆದುದಾಗಿತ್ತು.

ಇಂದಿಗೆ ಮುಗಿದಂತಾಯಿತು ತಾಯ ಋಣ....

ಏಳಲಾರದ ಕಾಲುಗಳನ್ನೆತ್ತಿ ಇಡುತ್ತ ಮನೆಯಕಡೆ ಹೊರಟ ಭೀಮಪ್ಪ.

ಕತ್ತಲೆಯ ಕಪ್ಪುಹಸ್ತ ವಿಶಾಲವಾಗಿ ದಟ್ಟವಾಗಿ ಬೆಳೆದು ಹಳ್ಳಿಯನ್ನೆಲ್ಲ ತನ್ನ ಭೀಮಮುಷ್ಟಿಯಲ್ಲಿ ಅಡಗಿಸಿಕೊಂಡಿತು.

ಎರಡು ಗಂಟೆಗಳ ತರುವಾಯ, ಹಳ್ಳಿಯೆಲ್ಲ ಮಲಗಿ ನಿದ್ದೆಹೋದ ವೇಳೆ ಯಲ್ಲಿ, ಊರನ್ನು ತ್ಯಜಿಸಿ ನಿಲ್ದಾಣದ ಕಡೆ ಹೊರಟಿದ್ದ ಎರಡು ಆಕೃತಿಗಳನ್ನು ಊರ ಹೊರಗಿನ ಹನುಮನ ಗುಡಿಯೆದುರಿಗೆ ಬಿದ್ದುಕೊಂಡಿದ್ದ ಬಿಡಾಡಿ ನಾಯಿ ಯೊಂದು ಕಂಡಿತು, ಒಮ್ಮೆ ಮುಖವೆತ್ತಿ ದುರ್ಬಲ ಸ್ವರದಲ್ಲಿ ಬಗುಳಿತು, ಮತ್ತೆ ಸುಮ್ಮನಾಯಿತು.

ತಲೆಯ ಮೇಲೆ ಬುಟ್ಟಿಗಳನ್ನಿಟ್ಟುಕೊಂಡು, ಹೆಗಲ ಮೇಲೆ ಕೌದಿಕಂಬಳಿ ಗಳನ್ನು ಹಾಕಿಕೊಂಡು, ಕೈಗಳಲ್ಲಿ ಕೋಲು ಹಿಡಿದುಕೊಂಡು ಹೊರಟಿದ್ದ ಆ ಎರಡು ವ್ಯಕ್ತಿಗಳ ಆಕೃತಿಗಳು ನಿಧಾನವಾಗಿ ಮುಂದೆ ಮುಂದೆ ಸಾಗಿ ಕತ್ತಲೆ ಯಲ್ಲಿ ಕರಗಿಹೋದುವು.

---

# ಪ್ರತಿಭಾ ಗ್ರಂಥಮಾಲೆ
## ಧಾರವಾಡ.

ಸಂಪಾದಕರು: ಭಾಲಚಂದ್ರ ವೆಂಕಟೇಶ ಘಾಣೇಕರ.

### ವರುಷದಲ್ಲಿ ಸಾವಿರ ಪುಟಗಳ ಸರಸ ಸಾಹಿತ್ಯ !

**ವಾರ್ಷಿಕ ಚಂದಾ: ಅಂ. ವೆ. ಸೇರಿ ರೂ. ೭ ಮಾತ್ರ !**

( ಅಗಸ್ಟದಿಂದ ೧೧ ನೇ ವರ್ಷಾರಂಭವಾಗಿದೆ )

ಹೆಚ್ಚಾಗಿ ಕಾದಂಬರಿಗಳನ್ನೇ ಒದಗಿಸುವುದು ಉದ್ದೇಶವಾಗಿದ್ದರೂ ಆಗಾಗ ಕಥಾಸಂಕಲನ, ನಾಟಕ, ಹಾಸ್ಯಪ್ರಬಂಧ ಇತ್ಯಾದಿಗಳನ್ನೂ ಪ್ರಕಟಿಸಿ ವಾಚಕರ ರುಚಿವೈವಿಧ್ಯವನ್ನು ತಣಿಸುವುದು.

ಅಗಸ್ಟದಿಂದ ಅಗಸ್ಟದ ವರೆಗೆ ತನ್ನ ವರ್ಷಾವಧಿಯಲ್ಲಿ ನೀಡಬೇಕಾದ ಪ್ರಕಟನೆಗಳನ್ನು ಸಕಾಲದಲ್ಲಿ ನೀಡುವದು ಈ ಮಾಲೆಯ ವೈಶಿಷ್ಟ್ಯವಾಗಿದೆ.

ಚಂದಾ ಹಣವನ್ನು ಯಾವಾಗಲೂ ಪೂರ್ಣವಾಗಿ ಮುಂಗಡ ಕೊಡಬೇಕು. ಪ್ರಕಟವಾದಂತೆ ಪುಸ್ತಕ ಕಳಿಸಲಾಗುವದು.

ವರ್ಷದ ಮಧ್ಯದಲ್ಲಿಯೇ ಚಂದಾದಾರರಾದರೂ ವರ್ಷದ ಎಲ್ಲ ಪುಸ್ತಕ ಅವರಿಗೆ ಕಳಿಸಲಾಗುವದು.

ಇಂದಿನ ಚಂದಾದಾರರಿಗೆ ಮಾಲೆಯ ಹಿಂದಿನ ಪ್ರಕಟನೆಗಳನ್ನು ಮುಕ್ಕಾಲು ಬೆಲೆಗೆ ಕೊಡಲಾಗುವದು. ಅಂಚೇವೆಚ್ಚ ಪ್ರತ್ಯೇಕ.

## ೧೯೫೩ ಅಗಸ್ಟದಿಂದ ೧೯೫೪ ಅಗಸ್ಟ ವರೆಗೆ ಬರಲಿವೆ !

೧. **ಮಣ್ಣು ಮತ್ತು ಹೆಣ್ಣು** ( ಬಸವರಾಜ ಕಟ್ಟೀಮನಿ ) ೨—೮—೦
೨. **ಕಣ್ಣೀರಿನ ಕಡಲು** ( ಕೊರಟಿ ಶ್ರೀನಿವಾಸರಾವ್ ) ೨—೦—೦
೩. **ಸಂಗ್ರಾಮ** ( ಅ. ನ. ಕೃಷ್ಣರಾಯ ) ೨—೮—೦
೪. **ಹಬ್ಬಿದ ಬಳ್ಳಿ** ( ಕೃಷ್ಣಮೂರ್ತಿ ಪುರಾಣಿಕ ) ೩—೦—೦
೫. **ಮೃಗಜಲ** ( ಪಿ. ಸದಾಶಿವಭಟ್ ) ೨—೦—೦

ಮೇಲಿನ ವಿಳಾಸಕ್ಕೆ ೭ ರೂ. ಮನಿಯಾರ್ಡರು ಕಳಿಸಿ ಇಂದೇ ಚಂದಾದಾರರಾಗಿ ಲಾಭಪಡೆಯಿರಿ.

## ಪ್ರತಿಭಾ ಗ್ರಂಥಮಾಲೆಯ ಕೆಲವು ಉತ್ತಮ ಕಾದಂಬರಿಗಳು

| | | | | |
|---|---|---|---|---|
| ಬಣ್ಣದ ಬದುಕು | ಅ. ನ. ಕೃಷ್ಣರಾಯ | ೩ | ೦ | ೦ |
| ಪರಾವಲಂಬಿ | ಜನಾರ್ದನ ಗುರ್ಕಾರ್ | ೨ | ೮ | ೦ |
| ಹಳ್ಳದಿಂದ ಹಾದಿಗೆ | ,, | ೧ | ೮ | ೦ |
| ಅಶೋಕ ಚಕ್ರ | ಮಿರ್ಜಿ ಅಣ್ಣಾರಾಯ | ೩ | ೮ | ೦ |
| ಸಾವಿನ ಉಡಿಯಲ್ಲಿ | ಎನ್. ಕೆ. ಕುಲಕರ್ಣಿ | ೩ | ೦ | ೦ |
| ಗಂಡು ಹೆಣ್ಣಿನ ಸಮಸ್ಯೆ | ಶ್ರೀಮತಿ ಕುಪ್ಪಮ್ಮ | ೩ | ೦ | ೦ |
| ಇಂದ್ರಜಾಲ | ನವಗಿರಿನಂದ | ೪ | ೦ | ೦ |
| ಸತ್ಸೇವೆ (ಇಂದ್ರಜಾಲದ ೨ನೇ ಭಾಗ) | ,, | ೩ | ೮ | ೦ |
| ದೇವರ ಸಾಮ್ರಾಜ್ಯ | ಶ್ರೀಕಂಠಯ್ಯ | ೨ | ೦ | ೦ |
| ದೇವರೆಲ್ಲಿ ? | ರಮಾಕಾಂತ | ೪ | ೦ | ೦ |
| ರಂಗವಿಲಾಸಿನಿ (ರಾಜಕೀಯ ಕಾದಂಬರಿ) | ಮಲ್ಲಾರಿ | ೩ | ೮ | ೦ |
| ಮುಗಿಲಮಲ್ಲಿಗೆ | ಕೃಷ್ಣಮೂರ್ತಿ ಪುರಾಣಿಕ | ೩ | ೦ | ೦ |
| ಧರ್ಮಸಂಕಟ | ವಾಡೇದ | ೨ | ೦ | ೦ |
| ಪುನರ್ಮಿಲನ | ,, | ೨ | ೮ | ೦ |
| ನಿರ್ದೋಷಿ | ಕುಮುಟಾ | ೨ | ೦ | ೦ |
| ಪೂಜಾಫಲ | ನೆರಂಗ | ೧ | ೮ | ೦ |
| ಷೋಡಶಿ | ಶರಚ್ಚಂದ್ರ | ೨ | ೮ | ೦ |
| ಶಕುಂತಲಾ (ಪ್ರೊ. ಫಡಕೆಯವರ ರಾಜಕೀಯ ಕಾದಂಬರಿ) | | ೨ | ೧೨ | ೦ |
| ಬಿರುಗಾಳಿ | ,, ,, | ೩ | ೮ | ೦ |
| ಮಾಲತೀಮಂದಿರ | ಹೊಸಮನೆ | ೨ | ೦ | ೦ |
| ದಲಿತ ಕುಸುಮ | ,, | ೨ | ೦ | ೦ |
| ಬೆಳವಲದ ಭಾಗ್ಯಲಕ್ಷ್ಮಿ | ಶೆ. ಗೋ. ಕುಲಕರ್ಣಿ | ೨ | ೮ | ೦ |
| ಸಮ್ರಾಟ್ ಹರ್ಷವರ್ಧನ | ನಾಗೇಶ | ೨ | ೦ | ೦ |
| ಬದುಕಿನ ಸುಳಿಯಲ್ಲಿ | ಸೇವ ನಮಿರಾಜಮಲ್ಲ | ೨ | ೦ | ೦ |
| ಅನ್ನಪೂರ್ಣಾ ಮಂದಿರ | ಶೆಟ್ಟಿ | ೨ | ೦ | ೦ |
| ಪತಿ | ನವಗಿರಿನಂದ | ೧ | ೮ | ೦ |
| ಎರಡು ಸೆಳೆತ | ಮಲ್ಲಾರಿ | ೧ | ೧೨ | ೦ |

# ಬೀದಿಯಲ್ಲಿ ಬಿದ್ದವಳು

" ಸೂಳೆಗಾರಿಕೆಯ ಕಾರಣವನ್ನು ಬಿಚ್ಚಿ ತೋರಿರುವ ಈ ಕೃತಿ ಕನ್ನಡ ಕಾದಂಬರಿಗಳಲ್ಲಿ ಉತ್ತಮ ಶ್ರೇಣಿಗೆ ಸೇರಿದೆ. ಮೆಚ್ಚುವಂತಹ ನೂತನ ತಂತ್ರವಿದೆ. ಭಾಷಾಶೈಲಿ ಎಲ್ಲರನ್ನೂ ಮೋಹಗೊಳಿಸುತ್ತದೆ. "

—ಪ್ರಜಾವಾಣಿ

" ಪಾತ್ರಗಳನ್ನು ಕುಂಚಸೃಷ್ಟಿಯಂತೆ ಕಲ್ಪಿಸಿ ಅವರನ್ನು ಜೀವಂತವನ್ನಾಗಿ ಮಾಡಿದ್ದಾರೆ. "

—ಜನಪ್ರಗತಿ

" Beediyalli Biddavalu should undoubtedly fare well with Kannada readers and critics alike. "

—Bharat Jyothi

" ಯಮುನಾ ಪಾತ್ರಸೃಷ್ಟಿ ಪೂರ್ಣ ಕಲೆಯಿಂದ ಕೂಡಿದೆ. "

—ಸಾಹಿತ್ಯಪ್ರಗತಿ

" ಸಾಮಾಜಿಕ ವಿಷಮತೆಯಲ್ಲಿ ಕಣ್ಣಿಟ್ಟಿರುವ ಕ್ರಿಯಾಶಾಲಿ ಲೇಖಕನ ಸಹೃದಯ ಪ್ರಯತ್ನ ಈ ಕಾದಂಬರಿ. "

—ಕರ್ಮವೀರ

" ಕೆಳಮಟ್ಟದ ಜನರ ಜೀವನವನ್ನು ಈ ಕಾದಂಬರಿ ಸುಂದರವಾಗಿ ಚಿತ್ರಿಸಿರುವದು. ಇದು ಕನ್ನಡಕ್ಕೆ ಹೊಸದು. "

—ವಿಶಾಲಕರ್ನಾಟಕ

" ಕಟ್ಟೀಮನಿಯವರ ಆಕರ್ಷಕ ಶೈಲಿ ಆರಂಭದ ಪುಟದಿಂದ ಕೊನೆಯವರೆಗೂ ಓದುಗನನ್ನು ಒಂದೇ ಉಸಿರಿಗೆ ಎಳೆದೊಯ್ಯುತ್ತದೆ. ಓದಿ ಮುಗಿಸಿದಾಗ ಓದುಗ ದಂಗುಬಡೆದವನ ಹಾಗೆ ಕೂತಿರಬೇಕಾದ ರುದ್ರಕಥೆಯನ್ನವರು ಬರೆದಿದ್ದಾರೆ.... ಕನ್ನಡದ ಕೆಲವೇ ಕೆಲವು ಒಳ್ಳೆಯ ಕಾದಂಬರಿಗಳಲ್ಲಿ ಇದೂ ಒಂದು ಎಂದು ಧಾರಾಳವಾಗಿ ಹೇಳಬಹುದು. "

—ಚಿತ್ರಗುಪ್ತ

" ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ದಿಟ್ಟತನದ ಹೊಸ ಹೆಜ್ಜೆ "

# ಮೋಹದ ಬಲೆಯಲ್ಲಿ

" ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ದಿಟ್ಟತನದ ಹಿರಿಯ ಹೊಸ ಹೆಜ್ಜೆ. ಅದ್ಭುತ ಕೃತಿ. ಕನ್ನಡ ಜನತೆ ಬೆನ್ನು ತಟ್ಟಿಕೊಳ್ಳುವಂತಹ ಕಾದಂಬರಿಯಿದು. " —ಪ್ರಜಾವಾಣಿ

" 'ಮೋಹದ ಬಲೆಯಲ್ಲಿ' ಯಂತಹ ಕಾದಂಬರಿಯನ್ನಿತ್ತು ಶ್ರೀ. ಕಟ್ಟೀಮನಿಯವರು ಇಂದಿನ ಗಣ್ಯ ಕಾದಂಬರಿಕಾರರ ಪಂಕ್ತಿಗೆ ಸೇರುತ್ತಾರೆಂದು ನಿಸ್ಸಂದೇಹವಾಗಿ ಹೇಳಬಹುದು. ಹತ್ತಾರು ಪಾತ್ರಗಳಿಲ್ಲಿ ಬಂದರೂ ಪ್ರತಿ ಪಾತ್ರ ಜೀವಂತವಾಗಿದೆ; ವಾಸ್ತವಿಕವಾಗಿದೆ. " —ಕತೆಗಾರ

" ಪಾತ್ರಗಳು ಚಿರಸ್ಮರಣೀಯವಾಗಿವೆ. ಪ್ರಗತಿಶೀಲ ಸಾಹಿತ್ಯಕ್ಕೆ ಇದೊಂದು ಉತ್ತಮ ಕಾಣಿಕೆ. ತನ್ನದೇ ವೈಶಿಷ್ಟ್ಯದಿಂದೊಡಗೂಡಿ ಸಾಹಿತ್ಯದಲ್ಲಿ ಸೂಕ್ತಸ್ಥಾನ ಪಡೆಯಲು ಸಮರ್ಥವಾಗಿದೆ. " —ವಾಕ್ಚಿತ್ರ

"ಶ್ರೀ. ಕಟ್ಟೀಮನಿಯವರು ತಮ್ಮೀ ಕಾದಂಬರಿಯಿಂದ ಕನ್ನಡ ಸಾರಸ್ವತ ಕ್ಷೇತ್ರದಲ್ಲೇ ಒಂದು ವಿಚಾರಕ್ರಾಂತಿಯನ್ನೆಬ್ಬಿಸಿದ್ದಾರೆ. ಈ ವರ್ಷ ಪ್ರಕಟವಾದ ಕಾದಂಬರಿಗಳಲ್ಲಿ ಇದು ಅಗ್ರಸ್ಥಾನ ಗಳಿಸಲರ್ಹವಾಗಿದೆಯೆನ್ನಬೇಕು. "

—ತಾಯಿನಾಡು

" ನಿರ್ವಿಕಾರ ಮನಸ್ಸಿನಿಂದ, ಸಮಾಜದ ಚಿತ್ರವನ್ನು ಇಡಿಯಾಗಿ ನೋಡುವ ದೃಷ್ಟಿಯಿಂದ, ಯಾವ ವ್ಯಕ್ತಿಯ ಕಡೆಗೂ ಬೊಟ್ಟು ಮಾಡದೆ ಓದುವ ಓದುಗರಿಗೆ ಇದೊಂದು ದೃಷ್ಟಾಂತವೆಂದೇ ಹೇಳಬೇಕು. "

—ನವಯುಗ

" ಹೃದಯ ಕಲಕಿಸುವಂತಹ ಕಾದಂಬರಿ. " —ಕರ್ಮವೀರ

" ಇದೊಂದು ಕಲಾತ್ಮಕವಾದ ವಿಚಾರಪ್ರಚೋದಕವಾದ ಕೃತಿ. ಇದು ಜೀವನದ ಪ್ರತಿಬಿಂಬವೂ ಹೌದು, ಜೀವನಕ್ಕೆ ಮಾರ್ಗದರ್ಶಕವೂ ಹೌದು. "

—ಚಿತ್ರಗುಪ್ತ